# ಕನ್ನಡ ಶಾಲಾ ಪಠ್ಯಗಳ ವ್ಯಾಕರಣ : ಅಧ್ಯಯನ
## (ಒಂದರಿಂದ ಹತ್ತನೆ ತರಗತಿವರೆಗೆ)

ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಪದವಿಗಾಗಿ ಸಾದರಪಡಿಸಿದ ಮಹಾಪ್ರಬಂಧ


ಸಂಶೋಧಕ

ಬಸವರಾಜ. ಬಿ

ಮಾರ್ಗದರ್ಶಕರು

ಡಾ.ಪಿ.ಮಹಾದೇವಯ್ಯ

ಸಹಪ್ರಾಧ್ಯಾಪಕರು, ಕನ್ನಡ ಭಾಷಾಧ್ಯಯನ ವಿಭಾಗ







ಕನ್ನಡ ಭಾಷಾಧ್ಯಯನ ವಿಭಾಗ

ಭಾಷಾನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ - ೫೮೩೨೭೬

೨೦೧೪

# ಕನ್ನಡ ಶಾಲಾ ಪಠ್ಯಗಳ ವ್ಯಾಕರಣ : ಅಧ್ಯಯನ

## (ಒಂದರಿಂದ ಹತ್ತನೆ ತರಗತಿವರೆಗೆ)

ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಪದವಿಗಾಗಿ
ಸಾದರಪಡಿಸಿದ ಮಹಾಪ್ರಬಂಧ

ಸಂಶೋಧಕ
ಬಸವರಾಜ ಬಿ

ಮಾರ್ಗದರ್ಶಕರು
ಡಾ.ಪಿ.ಮಹಾದೇವಯ್ಯ
ಸಹಪ್ರಾಧ್ಯಾಪಕರು, ಕನ್ನಡ ಭಾಷಾಧ್ಯಯನ ವಿಭಾಗ




ಕನ್ನಡ ಭಾಷಾಧ್ಯಯನ ವಿಭಾಗ
ಭಾಷಾನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ – ೫೮೩೨೭೬

೨೦೧೪

# ದೃಢೀಕರಣ ಪತ್ರ

**ಶ್ರೀ ಬಸವರಾಜ ಬಿ** ಇವರು **'ಕನ್ನಡ ಶಾಲಾ ಪಠ್ಯಗಳ ವ್ಯಾಕರಣ : ಅಧ್ಯಯನ' (ಒಂದರಿಂದ ಹತ್ತನೆ ತರಗತಿವರೆಗೆ)** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. **ಕನ್ನಡ ವಿಶ್ವವಿದ್ಯಾಲಯ, ಹಂಪಿ. ಭಾಷಾನಿಕಾಯದ ಕನ್ನಡ ಭಾಷಾಧ್ಯಯನ ವಿಭಾಗಕ್ಕೆ ಪಿಎಚ್.ಡಿ** ಪದವಿಗಾಗಿ ಸಲ್ಲಿಸುತ್ತಿರುವ ಪ್ರಸ್ತುತ ಮಹಾಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

**ಸ್ಥಳ : ವಿದ್ಯಾರಣ್ಯ**
ದಿನಾಂಕ : ೨೨.೦೮.೧೪

**(ಡಾ. ಪಿ. ಮಹಾದೇವಯ್ಯ)**
ಮಾರ್ಗದರ್ಶಕರು
ಕನ್ನಡ ಭಾಷಾಧ್ಯಯನ ವಿಭಾಗ,
ಕನ್ನಡ ವಿಶ್ವವಿದ್ಯಾಲಯ, ಹಂಪಿ.
ವಿದ್ಯಾರಣ್ಯ – ೫೮೩೨೭೬

# ಸಂಶೋಧಕರ ಪ್ರಮಾಣ ಪತ್ರ

**'ಕನ್ನಡ ಶಾಲಾ ಪಠ್ಯಗಳ ವ್ಯಾಕರಣ : ಅಧ್ಯಯನ'** **(ಒಂದರಿಂದ ಹತ್ತನೆ ತರಗತಿವರೆಗೆ)** ಎಂಬ ಈ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯ, ಹಂಪಿಯ ಪಿಎಚ್. ಡಿ ಪದವಿಗಾಗಿ **ಡಾ.ಪಿ.ಮಹಾದೇವಯ್ಯ** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, **ಭಾಷಾನಿಕಾಯದ ಕನ್ನಡ ಭಾಷಾಧ್ಯಯನ ವಿಭಾಗಕ್ಕೆ** ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಮಹಾಪ್ರಬಂಧವು ನನ್ನ ಸ್ವಂತ ಪರಿಶ್ರಮದ ಫಲವಾಗಿದ್ದು, ಈ ಮೊದಲು ಇದನ್ನು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

**ಸ್ಥಳ : ವಿದ್ಯಾರಣ್ಯ**
ದಿನಾಂಕ : ೨೨-೦೮-೧೪

(ಬಸವರಾಜ ಬಿ)
ಸಂಶೋಧಕ
ಕನ್ನಡ ಭಾಷಾಧ್ಯಯನ ವಿಭಾಗ,
ಕನ್ನಡ ವಿಶ್ವವಿದ್ಯಾಲಯ, ಹಂಪಿ.
ವಿದ್ಯಾರಣ್ಯ – ೫೮೩೨೭೬

# ಪರಿವಿಡಿ

ಅಧ್ಯಾಯ – ಒಂದು

# ಅಧ್ಯಯನದ ಸ್ವರೂಪ, ಉದ್ದೇಶ, ವ್ಯಾಪ್ತಿ, ಮಿತಿ ಮತ್ತು ವೈಧಾನಿಕತೆ

## ಅಧ್ಯಯನದ ಸ್ವರೂಪ

ವ್ಯಾಕರಣ ಎಂದರೇನು? ವ್ಯಾಕರಣ ಏಕೆ ಬೇಕು ಎಂಬ ಪ್ರಶ್ನೆಗಳಿಗೆ ಸರಿಯಾದ ಉತ್ತರಗಳು ನಮಗೆ ಲಭ್ಯವಿಲ್ಲ. 'ವ್ಯಾಕರಣ' ಎನ್ನುವುದು ಭಾಷೆಯ ನಿಯಮಗಳನ್ನು ತಿಳಿಸುವುದಾಗಿದೆ. ನಮ್ಮ ಶಾಲಾ ಪಠ್ಯಪುಸ್ತಕಗಳಲ್ಲಿ (ಪ್ರೌಢಶಾಲಾ ಕನ್ನಡ ಪಠ್ಯಪುಸ್ತಕಗಳು) ಪಠ್ಯಪುಸ್ತಕದ ಕೊನೆಯಲ್ಲಿ ವ್ಯಾಕರಣಾಂಶಗಳನ್ನು ಕುರಿತ ವಿವರಗಳನ್ನು ನೀಡಲಾಗಿದೆ. ದಿಟವಾಗಿ ವ್ಯಾಕರಣವನ್ನು ಮಕ್ಕಳಿಗೆ ಕಲಿಸುವುದಿಲ್ಲ. ಏಕೆಂದರೆ ನಾಲ್ಕು ಕೌಶಲಗಳಲ್ಲಿ ಮಕ್ಕಳು ಮೊದಲೆರಡು ಸಾಮರ್ಥ್ಯಗಳನ್ನು ಕಲಿತಿರುತ್ತಾರೆ. ಉಳಿದೆರಡು (ಓದುವುದು ಮತ್ತು ಬರೆಯುವುದು) ಸಾಮರ್ಥ್ಯಗಳನ್ನು ಶಾಲೆಯಲ್ಲಿ ಕಲಿಸಲಾಗುತ್ತದೆ. ಶಾಲೆಗೆ ಬರುವ ಮುನ್ನ ಮಗು 'ಬರ್ತೀನಿ' ರೂಪ ಮಗುವಿನ ಮೆದುಳಿನಲ್ಲಿ ಸೂಕ್ತವಾಗಿರುತ್ತದೆ. ಶಾಲೆಯಲ್ಲಿ ಬರ್ತೀನಿ ರೂಪಕ್ಕೆ ಅಥವಾ ರೂಪದ ಜೊತೆಯಲ್ಲಿ ಬರುತ್ತೇನೆ ಎಂದು ಕಲಿಸಲಾಗುತ್ತದೆ. ಅಂದರೆ ಮಗುವಿಗೆ ಗೊತ್ತಿರುವ ವ್ಯಾಕರಣದ ಮೇಲೆ ಬೆಳಕು ಚಲ್ಲುವ ಕೆಲಸವಾಗಬೇಕಾಗಿದೆ.

ಮಗುವಿಗೆ 'ನಾನು ನಾಳೆ ಬರುತ್ತಾಳೆ' ಎಂಬ ವಾಕ್ಯವನ್ನು ಹೇಳಿದಾಗ ತಪ್ಪು ಎಂದು ತಟ್ಟನೆ ಪ್ರತಿಕ್ರಿಯೆ ನೀಡುತ್ತದೆ. ಅದು ಏಕೆ ತಪ್ಪು ಎಂದು ಗೊತ್ತಿರುವುದಿಲ್ಲ. ಗೊತ್ತಾಗಿರಬೇಕಾಗಿಲ್ಲ. ಮೇಲಿನ ವಾಕ್ಯ ರಚನೆ ಏಕೆ ತಪ್ಪು ಎಂಬುದನ್ನು ವಿವರಿಸಿ ಹೇಳುವ ಕೆಲಸವನ್ನು ಮಾಡಬೇಕು ಅಷ್ಟೆ. ಶಾಲೆಯಲ್ಲಿ ವ್ಯಾಕರಣವನ್ನು ಹೇಳಿಕೊಡಲಾಗುತ್ತದೆ. ಅಂದರೆ ಒಂದು ಭಾಷೆಯ ರಚನೆಯ ನಿಯಮಗಳನ್ನು ಹೇಳಿಕೊಡುವಂತಹದ್ದು, ಆ ಭಾಷೆಯ ವ್ಯಾಕರಣವಾಗಿರುತ್ತದೆ.

ಕನ್ನಡ ಮನೆಮಾತುಳ್ಳ ಮಕ್ಕಳಿಗೆ ಭಾಷೆಯನ್ನು ಅಥವಾ ವ್ಯಾಕರಣವನ್ನು ಪರಿಣಾಮಕಾರಿಯಾಗಿ ಬೋಧನೆ ಮಾಡುತ್ತಿದ್ದರೂ ಅದನ್ನು ಬಳಕೆ ರೂಪದಲ್ಲಿ ಅಭಿವ್ಯಕ್ತಿಸುವುದಕ್ಕೆ ಆಗುತ್ತಿಲ್ಲ. ಅಂದರೆ ರಚನೆಯ ನೆಲೆಯಲ್ಲಿ ಕಲಿತಿರುವ ವ್ಯಾಕರಣವನ್ನು ಬಳಕೆಯ ನೆಲೆಗೆ ತಂದು ಅಭಿವ್ಯಕ್ತಿಸುವ ನಿಲುವನ್ನು ಬೆಳೆಸುವ ಬೋಧನೆ ಇಲ್ಲ ಎಂದು ಹೇಳಬಹುದು. ವ್ಯಾಕರಣವನ್ನು ಕುರಿತು ಒಂದು ವಾಕ್ಯದಲ್ಲಿ ಉತ್ತರ ಕೊಡುವ

ಸಾಮರ್ಥ್ಯವನ್ನು ಮಕ್ಕಳಲ್ಲಿ ಬೆಳೆಸುತ್ತಿಲ್ಲ. ಅಂದರೆ ಮಾತಿನ ಹಲವು ಕೌಶಲಗಳನ್ನು ಕಲಿಯುವ ಅವಕಾಶವನ್ನು ಕಲ್ಪಿಸಬೇಕಾದ ಜರೂರು ಇಂದು ಇದೆ.

'ವ್ಯಾಕರಣ' ಕಲಿಕೆಯೆಂಬುದು ತಿಳುವಳಿಕೆ ಆಗದೆ ಅದೊಂದು ಕಂಠಪಾಠವಾಗಿದೆ. ತಿಳುವಳಿಕೆಗಾಗಿ ತಿಳುವಳಿಕೆ ಎಂಬಂತಿದೆ. ವ್ಯಾಕರಣ ಬಳಕೆಗಾಗಿ ತಿಳುವಳಿಕೆ ಆಗಬೇಕಾದಂತಹ ಸಂದರ್ಭವನ್ನು ಕಲ್ಪಿಸಬೇಕಾಗಿದೆ. ಉದಾಹರಣೆಗೆ 'ದೇವಾಲಯ' ಎಂಬ ಪದದಲ್ಲಿ ದೇವ + ಆಲಯ ಎಂದು ವರ್ಗೀಕರಣ ಮಾಡಿ, ಇಲ್ಲಿ ಎರಡು ಪದಗಳಿವೆಂದು, ಒಂದನ್ನು ಪೂರ್ವಪದ ಇನ್ನೊಂದನ್ನು ಉತ್ತರಪದ ಎಂದು ಹೇಳಿಕೊಟ್ಟರೆ ಏನೂ ಪ್ರಯೋಜನ ಆಗುವುದಿಲ್ಲ. ಬದಲಿಗೆ ದೇವ + ಆಲಯ ಪದವನ್ನು ನೀಡಿ ಕೂಡಿಸುವ ಪ್ರಕ್ರಿಯೆಯನ್ನು ಹೇಳಿಕೊಡಬೇಕಾಗಿದೆ. ಈ ಮಾತಿನ ಅರ್ಥದಿಂದ ತಿಳಿದು ಬರುವ ಸಂಗತಿ ಎಂದರೆ ಹೀಗೆ ಬೋಧನೆ ಮಾಡುವುದರಿಂದ ಮಕ್ಕಳಲ್ಲಿ ಬಳಕೆಯ ಕೌಶಲಗಳನ್ನು ಹೆಚ್ಚು ಮಾಡಿದಂತಾಗುತ್ತದೆ. ಸಮಕಾಲೀನ ಸಂದರ್ಭದ ಕನ್ನಡ ಪಠ್ಯಪುಸ್ತಕಗಳಲ್ಲಿನ ವ್ಯಾಕರಣಾಂಶಗಳನ್ನು ಗಮನಿಸಿದಾಗ ಒಡೆದು ತೋರಿಸುವ ಪ್ರಕ್ರಿಯೆಗೆ ಹೆಚ್ಚು ಒತ್ತು ನೀಡಲಾಗಿದೆ. ಭಾಷೆಯ ರಚನೆಯನ್ನು ಬಳಸುವ ಕೆಲಸ ಆಗಬೇಕೆ ಹೊರತು ವಿಭಜನೆ ಮಾಡುವುದಲ್ಲ. ಮಕ್ಕಳು ವ್ಯಾಕರಣವನ್ನು ಕುರಿತು ಪ್ರಶ್ನೆಯನ್ನು ಕೇಳುವ ಹಾಗೆ ಸಂದರ್ಭವನ್ನು ಸೃಷ್ಟಿಸಬೇಕಾಗಿದೆ. ನಾವು ಬೋಧನೆ ಮಾಡುತ್ತಿರುವ ವ್ಯಾಕರಣದಲ್ಲಿ ಏನೆಲ್ಲ ತೊಂದರೆಗಳಿವೆ ಎಂಬುದನ್ನು ಮೊದಲು ಪಟ್ಟಿ ಮಾಡಿ ಅವುಗಳಿಗೆ ಉತ್ತರಗಳನ್ನು ಕಂಡುಕೊಳ್ಳಬೇಕಾದಂತಹ ಕೆಲಸ ಆಗಬೇಕಾಗಿದೆ.

'ವ್ಯಾಕರಣ'ವನ್ನು ಭಾಷೆಯ ಕೇಂದ್ರವೆಂದು ಕರೆಯಲಾಗುತ್ತದೆ. ಪ್ರತಿಯೊಂದು ಭಾಷೆಗೂ ತನ್ನ ರಚನೆಯಲ್ಲಿರುವ ಅಂಶಗಳನ್ನು ನಿಯಂತ್ರಿಸಿಕೊಳ್ಳಲು ತನ್ನದೇಆದ ನಿಯಮ ಮತ್ತು ತತ್ವಗಳ ವ್ಯವಸ್ಥೆ ಇರುತ್ತದೆ. ಈ ತತ್ವಗಳು ಮತ್ತು ನಿಯಮಗಳೇ ಆಯಾ ವ್ಯಾಕರಣಗಳ ಜೀವಾಳ. ಭಾಷೆಯನ್ನು ಕಲಿಸುವ ಪ್ರಕ್ರಿಯೆಗಳಲ್ಲಿ ಸಹಜವಾಗಿಯೇ ತಮ್ಮ ಸ್ಥಾನ ಪಡೆಯುತ್ತವೆ. ಈ ವ್ಯಾಕರಣ ವ್ಯವಸ್ಥೆಯಿಂದಾಗಿ ಯಾವುದೇ ಭಾಷಿಕ ಸಮುದಾಯದಲ್ಲಿ ಸಂವಹನ ಕ್ರಿಯೆ ಸಾಧ್ಯವಾಗಿದೆ.

ಶಾಲೆಗಳಲ್ಲಿ ವ್ಯಾಕರಣದ ನಿಯಮಗಳನ್ನು ಹೊಸದಾಗಿ ಕಲಿಸುವುದರ ಮೂಲಕವೆ ಭಾಷೆಯ ಬಳಕೆಯು ಸಾಧ್ಯವಾಗುತ್ತದೆ ಎಂಬ ತಿಳುವಳಿಕೆ ನಮ್ಮಲ್ಲಿ ಆಳವಾಗಿ ಬೇರು ಬಿಟ್ಟಿದೆ. ಕಲಿಕೆಯ ಸಾಮಾನ್ಯ ತತ್ವಗಳನ್ನು ನಾವು ಭಾಷಿಕ ನೆಲೆಗೆ ಅನ್ವಯಿಸುತ್ತೇವೆ. ಗಣಿತ ವಿಷಯದಲ್ಲಿ ಸೂತ್ರಗಳನ್ನು, ವಿಜ್ಞಾನ ವಿಷಯದಲ್ಲಿ ಅಣುಸೂತ್ರ

ರಚನೆಗಳನ್ನು ತಿಳಿದ ಹಾಗೆ ಭಾಷೆಯ ಕಲಿಕೆಯಲ್ಲೂ ವ್ಯಾಕರಣ ಕಲಿಕೆ ಅಗತ್ಯವೆಂದು ಒಪ್ಪಿಬಿಟ್ಟಿದ್ದೇವೆ. ಆದರೆ ಈ ನಿಯಮಗಳು ಮಕ್ಕಳಿಗೆ ಮೊದಲೇ ತಿಳಿದಿರುತ್ತವೆ. ಗೊತ್ತಿರುವ ನಿಯಮಗಳನ್ನು ಹೆಚ್ಚು ಹೆಚ್ಚು ರಚನೆಗಳಲ್ಲಿ ತೊಡಗುವಂತೆ ಮಾಡಬೇಕಾಗಿದೆ. ಕನ್ನಡೇತರ ಭಾಷಿಕ ಮಕ್ಕಳಿಗೆ ವ್ಯಾಕರಣ ಕಲಿಕೆ ಅಗತ್ಯವಿದೆ. ಏಕೆಂದರೆ ಅವರ ಮನೆಯ ಪರಿಸರದಲ್ಲಿ ಒಂದು ಭಾಷೆಯನ್ನು ಕಲಿತಿದ್ದು ಶಾಲಾ ಪರಿಸರಕ್ಕೆ ಬಂದಾಗ ಇನ್ನೊಂದು ಭಾಷೆ (ಕನ್ನಡ) ಕಲಿಯಬೇಕಾಗುತ್ತದೆ. ಅಪರಿಚಿತವಾದ ಕನ್ನಡ ಭಾಷೆಯನ್ನು ಶಾಲಾ ಆರಂಭದಲ್ಲಿ ಕಲಿಯಬೇಕಾಗಿರುವುದರಿಂದ ಅವರಿಗೆ ಕನ್ನಡ ಭಾಷೆಯ ರಾಚನಿಕ ನಿಯಮಗಳನ್ನು ಕಲಿಸಿಕೊಡುವುದರಿಂದ ಇವರಿಗೆ ವ್ಯಾಕರಣ ಅಗತ್ಯವಾಗಿ ಬೇಕಾಗುತ್ತದೆ. ಉದಾಹರಣೆಗೆ : ಉರ್ದು ಭಾಷಿಕ ಮಕ್ಕಳು, ಲಂಬಾಣಿ ಭಾಷಿಕ ಮಕ್ಕಳು ಶಾಲಾ ಹಂತಕ್ಕೆ ಬಂದಾಗ ಕನ್ನಡವನ್ನು ಹೊಸ ಭಾಷೆಯನ್ನಾಗಿ ಕಲಿಯಬೇಕಾಗಿರುವುದರಿಂದ ಇಂತಹ ಅನ್ಯಭಾಷಿಕ ಮಕ್ಕಳ ಕನ್ನಡ ಭಾಷಾ ಸಾಮರ್ಥ್ಯಕ್ಕೆ ವ್ಯಾಕರಣದ ಅರಿವು ಬೇಕಾಗಿದೆಯೇ ವಿನಹ ಕನ್ನಡ ಮನೆಮಾತುಳ್ಳ ಭಾಷಿಕರಿಗಲ್ಲವೆಂಬುದನ್ನು ನಾವು ಮನಗಾಣಬೇಕಾಗಿದೆ.

ಕನ್ನಡ ಮನೆಮಾತುಳ್ಳ ಮಕ್ಕಳಿಗೆ ತಮಗೆ ಗೊತ್ತಿರುವ ಭಾಷಿಕ ರಚನೆಯ ನಿಯಮಗಳನ್ನು ಹೊಸ ಹೊಸ ಸನ್ನಿವೇಶಗಳಲ್ಲಿ ಭಾಷೆಯನ್ನು ಬಳಸಲು ಬೇಕಾದ ಉತ್ಪಾದಕತೆಯ ಸಾಮರ್ಥ್ಯವನ್ನು ಮಾತ್ರ ಮಕ್ಕಳಲ್ಲಿ ಬೆಳಸಬೇಕಾಗುತ್ತದೆ. ಹಾಗೆ ನೋಡಿದರೆ ಇಂದಿನ ನಮ್ಮ ಶಾಲಾ ವಿವಿಧ ಹಂತಗಳಲ್ಲಿ ಭಾಷಾ ಉತ್ಪಾದಕತೆಯ ನೆಲೆಗೆ ದೊರಕುತ್ತಿರುವ ಒತ್ತು ತುಂಬಾ ಕಡಿಮೆಯಾಗಿದೆ. ಹೀಗಾಗಿ ಮಕ್ಕಳು ಅನೌಪಚಾರಿಕ ವಲಯಗಳಲ್ಲಿ ಭಾಷಾ ಬಳಕೆಗೆ ಮುಂದಾದಷ್ಟು ಔಪಚಾರಿಕ ಜೀವನದ ವಿವಿಧ ಸಂದರ್ಭಗಳಲ್ಲಿ ಭಾಷೆಯನ್ನು ಬಳಸಲು ಹಿಂಜರಿಯುತ್ತಾರೆ. ಅಂದರೆ ಅವರು ಕಲಿತ ವ್ಯಾಕರಣ ಅವರಿಗೆ ಸಹಾಯಕ್ಕೆ ಬರುವುದಿಲ್ಲ. ಅಂದರೆ ಭಾಷಿಕ ರಚನೆಯನ್ನು ತಿಳಿಯುವುದು ಒಂದು ನೆಲೆಯಾದರೆ ಅದರ ಬಳಕೆಯನ್ನು ಕಲಿಯುವುದು ಇನ್ನೊಂದು ನೆಲೆಯಾಗಿದೆ. ಭಾಷಿಕ ರಚನೆಯನ್ನು ಕಲಿಯಬೇಕಾಗಿಲ್ಲ. ಆದರೆ ಬಳಕೆಯ ಸಾಮರ್ಥ್ಯಗಳನ್ನು ಹೊಸದಾಗಿಯೇ ಕಲಿತು ರೂಢಿಸಿಕೊಳ್ಳಬೇಕಾಗುತ್ತದೆ. ಆದರೆ ನಮ್ಮ ಶಾಲೆಗಳಲ್ಲಿ ಈ ತೆರನಾದ ಅಂಶದ ಕಡೆಗೆ ಪಠ್ಯಪುಸ್ತಕಗಳಾಗಲಿ, ಕಲಿಸುವ ಶಿಕ್ಷಕರಾಗಲಿ ಗಮನವನ್ನು ನೀಡುತ್ತಿಲ್ಲವೆಂಬುದು ಕಂಡುಬರುತ್ತದೆ. ಅಂದರೆ ನಾವು ಸಾಂಪ್ರದಾಯಿಕವಾದ ಸಂಧಿ, ಸಮಾಸ, ತದ್ದಿತಾಂತ, ಕರ್ತರಿ ಕರ್ಮಣಿ ಪ್ರಯೋಗ

ಇತ್ಯಾದಿ ವ್ಯಾಕರಣ ಪರಿಭಾಷೆಗಳನ್ನು ಸೂತ್ರ ರೂಪದಲ್ಲಿಯೇ ಬಹು ಹಿಂದಿನಿಂದಲೇ ಕಲಿಸುತ್ತಾ ಬಂದಿದ್ದೇವೆ.

ಈ ಮೇಲಿನ ವಿವರಣೆಯಿಂದ ತಿಳಿದು ಬರುವ ಅಂಶವೆಂದರೆ ನಮ್ಮ ಶಾಲಾವ್ಯಾಕರಣಗಳು, ಪಠ್ಯಪುಸ್ತಕಗಳು ಪದಗಳನ್ನು ಒಡೆಯುವುದನ್ನು ಹೇಳಿಕೊಡುತ್ತಿವೆಯೇ ಹೊರತು, ಪದಗಳನ್ನು ಕಟ್ಟುವಾಗ ಏನಾಗುತ್ತದೆಂಬುದನ್ನು ಮಕ್ಕಳಿಗೆ ಶಾಲೆಗಳಲ್ಲಿ ನಾವಿಂದು ಹೇಳಿಕೊಡುತ್ತಿಲ್ಲ. ಇದರ ಪರಿಣಾಮವನ್ನು ನಾವು ಕನ್ನಡ ಭಾಷಾ ಸ್ಥಿತಿಗತಿಯ ಬಗ್ಗೆ ಬಂದಾಗ ಅಂತಾರಾಷ್ಟ್ರೀಯ ಭಾಷೆಯಾದ ಇಂಗ್ಲಿಷ್ ಭಾಷೆಯ ಮೇಲಿರುವ ಜನರ ವ್ಯಾಮೋಹ, ಅದರಿಂದ ಕನ್ನಡದ ಅಧಃಪತನ, ಭಾಷೆಯ ಉಳಿವಿನ ಪ್ರಶ್ನೆ, ಜಾಗತಿಕ ಮಟ್ಟದಲ್ಲಿ ಭಾಷೆಯ ಅಳಿವಿನ ಪ್ರಶ್ನೆ ಇತ್ಯಾದಿ ಆರೋಪ, ಪ್ರತ್ಯಾರೋಪಗಳನ್ನು ಮಾಡುತ್ತೇವೆಯೇ ಹೊರತು, ಕಾಲಕ್ಕೆ ತಕ್ಕ ಹಾಗೆ ಭಾಷೆಯ ಸ್ವರೂಪದ ಬದಲಾವಣೆಗೆ ಪ್ರಯತ್ನಿಸದೆ ಮುಂದುವರಿಯುತ್ತಿರುವುದು ಕಂಡುಬರುತ್ತದೆ. ಜಾಗತಿಕ ಮಟ್ಟದಲ್ಲಿ ಇಂಗ್ಲಿಷ್ ಭಾಷೆಯಷ್ಟು ಕನ್ನಡವು ಬೆಳೆಯಬೇಕಾದರೆ, ತನ್ನ ಸ್ವರೂಪವನ್ನು ವಿಸ್ತರಿಸಿಕೊಳ್ಳಬೇಕಾದರೆ ಶಾಲೆಯ ಭಾಷಾ ಕಲಿಕೆಯ ವಿವಿಧ ಹಂತಗಳಲ್ಲಿ ಮಕ್ಕಳಿಗೆ ಔಪಚಾರಿಕ ವಲಯಗಳಲ್ಲಿ ಭಾಷೆಯನ್ನು ಬಳಸುವ ವಿಧಾನವನ್ನು ಹೇಳಿಕೊಡಬೇಕಾದ ಅಗತ್ಯವಿದೆ. ಈ ನಿಟ್ಟಿನಲ್ಲಿ ಅಧ್ಯಯನ ಮುಂದುವರಿಸುತ್ತಿರುವ ಆಧುನಿಕ ಭಾಷಾ ವಿದ್ವಾಂಸರಾದ ಡಿ.ಎನ್.ಶಂಕರಭಟ್ ಮತ್ತು ಕೆ.ವಿ.ನಾರಾಯಣ ಅವರ ಬರಹಗಳನ್ನು ಮತ್ತು ಅವರ ಚಿಂತನಧಾರೆಗಳನ್ನು ಶಿಕ್ಷಣದ ವಿವಿಧ ಹಂತಗಳಲ್ಲಿ ಅಳವಡಿಸಿಕೊಳ್ಳಬೇಕಾದ ಅಗತ್ಯತೆ ಕಂಡುಬರುತ್ತದೆ.

ಪ್ರಾಚೀನ ಕಾಲದಲ್ಲಿ ವ್ಯಾಕರಣವನ್ನು ಸೂತ್ರಗಳೋಪಾದಿಯಲ್ಲಿ ಕಂಠಪಾಠ ಮಾಡುತ್ತಿದ್ದರು. ವ್ಯಾಕರಣಬಲ್ಲ ಪಂಡಿತರು ಸೂತ್ರಗಳಿಗೆ ಹೆಚ್ಚು ಒತ್ತುಕೊಟ್ಟು ಕಲಿಸುವುದರ ಜೊತೆಗೆ ಬಾಯಿಪಾಠ ಮಾಡಿಸುತ್ತಿದ್ದರು. ಹಿಂದಿನ ಕಾಲದಲ್ಲಿ ವ್ಯಾಕರಣವನ್ನು ಕಲಿಸಲು ವಾರದಲ್ಲಿ ಪ್ರತ್ಯೇಕವಾಗಿ ಒಂದು ದಿನ (ಶುಕ್ರವಾರ) ನಿಗದಿ ಮಾಡುತ್ತಿದ್ದರು. ಅಂದು ಕಠಿಣವಾದ ಶಿಕ್ಷೆಯ ಮುಖಾಂತರ ಬೋಧನೆ ಸಾಗುತ್ತಿತ್ತು. ಕಠಿಣವಾದ ವಿಷಯ ಮತ್ತು ಕಠಿಣವಾದ ಶಿಕ್ಷೆಯಿದ್ದ ಕಾರಣ ವ್ಯಾಕರಣಭ್ಯಾಸಿಗರ ಸಂಖ್ಯೆ ತುಂಬ ಕಡಿಮೆಯಿರುತಿತ್ತು. ವ್ಯಾಕರಣಭ್ಯಾಸಿಗರು ಸೂತ್ರಗಳರ್ಥಕ್ಕೆ ಪ್ರಾಮುಖ್ಯತೆ ಕೊಡದೆ ಕಂಠಪಾಠಮಾಡಿ ಒಪ್ಪಿಸಬೇಕಾಗುತಿತ್ತು. ಕ್ರಿ. ಶ. ೧೯೫೬ ರಲ್ಲಿ ಕರ್ನಾಟಕ ಮೈಸೂರು ಪ್ರಾಂತಕ್ಕೆ ಸೇರಿತ್ತು. ಆಗ ಪದವೀಧರರಲ್ಲದವರು ಮೈಸೂರು ಸರ್ಕಾರ ನಡೆಸುತ್ತಿದ್ದ

‘ವಿದ್ವಾನ್ ಪರೀಕ್ಷೆ’ಯಲ್ಲಿ ಉತ್ತೀರ್ಣರಾದವರು ಕನ್ನಡ ವ್ಯಾಕರಣವನ್ನು ಬೋಧನೆ ಮಾಡಲು ಅರ್ಹರಾಗಿದ್ದರು. ಈ ಪರೀಕ್ಷೆ ಪಾಸದವರಿಗೆ ಅಂದಿನ ಕಾಲದಲ್ಲಿ ವಿಶೇಷವಾದ ಗೌರವ, ಮನ್ನಣೆಗಳಿದ್ದವು. ಕ್ರಿ. ಶ. ೧೯೫೬ ರಲ್ಲಿ ಕರ್ನಾಟಕ ಏಕೀಕರಣದ ನಂತರ ಪದವೀಧರರನ್ನು ಕರ್ನಾಟಕ ಸರಕಾರ ಕನ್ನಡ ಭಾಷಾ ಬೋಧನೆ ಮಾಡಲು ನೇಮಿಸಲಾಯಿತು. ಅಂದಿನಿಂದ ಇಂದಿನವರೆಗೂ ಪದವೀಧರರೇ ಕನ್ನಡ ವಿಷಯದ ಜೊತೆ ಕನ್ನಡ ವ್ಯಾಕರಣವನ್ನು ಕಲಿಸಲಾರಂಭಿಸಿದರು.

ಕರ್ನಾಟಕ ಸರ್ಕಾರ ಬಂದ ನಂತರ ಶಾಲಾ ಶಿಕ್ಷಣ ನೀತಿಯನ್ನು ಅನುಸರಿಸಲಾಯಿತು. ಈ ನೀತಿಯನ್ವಯ ಕನ್ನಡ ಪಠ್ಯಪುಸ್ತಕ ಸಮಿತಿಯ ಆದೇಶದ ಮೇರೆಗೆ ಕನ್ನಡ ಶಾಲಾ ಪಠ್ಯಪುಸ್ತಕಗಳಲ್ಲಿ ವ್ಯಾಕರಣಾಂಶಗಳನ್ನು ಅಳವಡಿಸಲಾಯಿತು. ಕಳೆದ ಆರು ದಶಕಗಳ ಹಿಂದೆ ವ್ಯಾಕರಣವನ್ನೇ ನೇರವಾಗಿ ಪಠ್ಯವಿಷಯವನ್ನಾಗಿ ಮಾಡಿಕೊಂಡು ಬೋಧಿಸುವ ಪದ್ಧತಿಯಿತ್ತು. ಅನಂತರದ ಅವಧಿಯಲ್ಲಿ ವ್ಯಾಕರಣವನ್ನು ಪಠ್ಯದ ಅಂಗವನ್ನಾಗಿ ಮಾಡಿ ಕಲಿಸುತ್ತ ಬರಲಾಗುತ್ತಿದೆ. ಅಂದರೆ ಒಂದು ಪಾಠವನ್ನು ಕಲಿಯುವಾಗ ಅದರಲ್ಲಿ ಇರುವ ವ್ಯಾಕರಣಾಂಶಗಳ ಕಡೆಗೆ ಕಲಿಯುವವರ ಗಮನ ಸೆಳೆಯಲಾಗುತ್ತದೆ. ನಿಯೋಗಾತ್ಮಕ ಅಥವಾ ಪ್ರಯೋಗಾತ್ಮಕ ವ್ಯಾಕರಣಕಲಿಕೆ ಎಂದು ಈ ವಿಧಾನವನ್ನು ಕರೆಯಲಾಗುತ್ತದೆ. ಹೀಗೆ ಮಾಡುವುದರಿಂದ ಮಕ್ಕಳಿಗೆ ವ್ಯಾಕರಣವೆಂದರೆ ತಲೆನೋವೆಂದು ತೋರುವುದಿಲ್ಲ ಎಂಬ ಸಮರ್ಥನೆಯು ಇದಕ್ಕಿದೆ. ಯಾವುದೇ ಹಂತದ ಶಾಲಾಪಠ್ಯದಲ್ಲಿ ಸಮಾನಾರ್ಥಕಪದಗಳು, ನಾನಾರ್ಥಕಪದಗಳು, ಅನುಕರಣಾವ್ಯಯ ಪದಗಳು, ಜೋಡುನುಡಿಗಳು, ದ್ವಿರುಕ್ತಿ ನುಡಿಗಳು, ಸಂಧಿ ಪದಗಳು, ಸಮಾಸ ಪದಗಳು, ನಿಷೇಧಾರ್ಥಕ ಪದಗಳು, ವಿರುದ್ಧಾರ್ಥಕ ಪದಗಳು, ನುಡಿಗಟ್ಟುಗಳು, ಗುಣವಿಶೇಷಣಗಳು ಇತ್ಯಾದಿ ಅಂಶಗಳನ್ನು (ವ್ಯಾಕರಣ ಪರಿಭಾಷೆಗಳನ್ನು) ಕಂಡುಹಿಡಿಯಲು, ಹೇಳಲು, ಬರೆಯಲು, ಕಲಿಸಲು ಪಠ್ಯದ ಜೊತೆ ಜೊತೆಯಲ್ಲಿಯೇ ಅಳವಡಿಸಲಾಗಿದೆ.

ಯಾವುದೇ ಭಾಷೆಯನ್ನಾದರೂ ಶುದ್ಧವಾಗಿ ಪ್ರಯೋಗ ಮಾಡಬೇಕಾದರೆ ಆಯಾ ಭಾಷೆಯ ವ್ಯಾಕರಣ ಪರಿಚಯವು ಅವಶ್ಯವಾಗಿ ಬೇಕು. ಏಕೆಂದರೆ ವ್ಯಾಕರಣವಿಲ್ಲದ ಭಾಷೆಯ ಅಧ್ಯಯನವು ಪರಿಪೂರ್ಣವಾಗಲಾರದು. ಭಾಷೆಯ ಅಧ್ಯಯನದ ಅಂಗಗಳಲ್ಲಿ ವ್ಯಾಕರಣವು ಒಂದು ಮಹತ್ವಪೂರ್ಣ ಅಂಗವಾಗಿದೆ. ‘ಭಾಷೆ ಮತ್ತು ವ್ಯಾಕರಣ ಒಂದು ನಾಣ್ಯದ ಎರಡು ಮುಖಗಳು’ ಒಂದು ಬಿಟ್ಟು ಒಂದು

ಇರಲಾರವು. ಭಾಷೆಯ ತಿಳುವಳಿಕೆಯನ್ನು ಪಡೆಯಲು ವ್ಯಾಕರಣವನ್ನು ಅಭ್ಯಾಸ ಮಾಡಬೇಕೆಂಬ ಪತಂಜಲಿಯ ಮಾತು ಸತ್ಯವಾದುದು. ಈ ತಿಳುವಳಿಕೆಯನ್ನು ಅರಿಯಲು ಮಕ್ಕಳ ಬುದ್ಧಿಮಟ್ಟವನ್ನು ಅರಿತು ಶಿಕ್ಷಣತಜ್ಞರು ಪ್ರಾಥಮಿಕ/ಮಾಧ್ಯಮಿಕ ಮತ್ತು ಪ್ರೌಢಶಾಲಾ ಹಂತಗಳಲ್ಲಿ ಪ್ರಾಯೋಗಿಕವಾಗಿ ವ್ಯಾಕರಣಾಂಶಗಳನ್ನು ಪಠ್ಯಕ್ರಮದಲ್ಲಿ ಅಳವಡಿಸಿದ್ದಾರೆ.

ಕನ್ನಡದಲ್ಲಿ ಪಠ್ಯಪುಸ್ತಕ ಸಮಿತಿಯ ಆದೇಶದ ಮೇರೆಗೆ ರಚಿತವಾಗಿರುವ ಶಾಲಾ ವ್ಯಾಕರಣಾಂಶಗಳನ್ನು ಪರಿಶೀಲಿಸಿದಾಗ ಕೆಲವೊಂದು ವಿಷಯಗಳು ನಮಗೆ ಕಂಡುಬರುತ್ತವೆ. ಕನ್ನಡ ವ್ಯಾಕರಣಗಳು ಕನ್ನಡ ಭಾಷೆಯ ಒಳರಚನೆಯನ್ನು, ಕನ್ನಡವನ್ನು ಬಳಸುವವರ ಅರಿವಿಗೆ ಬಾರದ ಸ್ಥಿತಿಯಲ್ಲಿರುವ ವ್ಯಾಕರಣಾಂಶಗಳನ್ನು ಅರಿವಿಗೆ ಬರುವ ಹಾಗೆ ವರ್ಣಿಸಿ ಹೇಳಲು ಪ್ರಯತ್ನಿಸಬೇಕು. ಕನ್ನಡದಲ್ಲಿ ಸಿದ್ಧವಾಗಿರುವ ಇದುವರೆಗಿನ ವ್ಯಾಕರಣಗಳು ಅಥವಾ ಶಾಲಾ ಪಠ್ಯಗಳಲ್ಲಿಯ ವ್ಯಾಕರಣಾಂಶಗಳು ಎಷ್ಟರಮಟ್ಟಿಗೆ ಈ ಕೆಲಸ ಮಾಡಲು ಸಮರ್ಥವಾಗಿವೆ ಎಂಬುದನ್ನು ಪರಿಶೀಲಿಸುವುದು ಅವಶ್ಯ. ಇದೂವರೆಗೂ ಸಿದ್ಧವಾಗಿರುವ ವ್ಯಾಕರಣಗಳೆಲ್ಲ ಸಂಸ್ಕೃತ, ಲ್ಯಾಟಿನ್, ಇಲ್ಲವೆ ಇಂಗ್ಲಿಷ್ ಭಾಷೆಯ ವ್ಯಾಕರಣ ನಿಯಮಗಳನ್ನು ಹಾಗೆಯೇ ಕನ್ನಡಕ್ಕೆ ಅಳವಡಿಸಲು ಮಾಡಿರುವ ಪ್ರಯತ್ನಗಳೆ ಹೊರತು ಕನ್ನಡದ್ದವೇ ಆದ ವ್ಯಾಕರಣ ನಿಯಮಗಳನ್ನು ಕಂಡುಹಿಡಿಯಲು ಮಾಡಿರುವ ಪ್ರಯತ್ನಗಳಲ್ಲ. ಸಂಸ್ಕೃತ ಇಲ್ಲವೆ ಇಂಗ್ಲಿಷ್ ವ್ಯಾಕರಣಗಳನ್ನು ಕನ್ನಡಕ್ಕೆ ಅಳವಡಿಸಲು ಸಾಧ್ಯವಿಲ್ಲವೆಂದಾಗ ಮಾತ್ರ ಕನ್ನಡದಲ್ಲಿ ಅದರದ್ದೇ ವ್ಯಾಕರಣ ನಿಯಮಗಳೇನಾದರೂ ಇವೆಯೇ ಎಂಬುದನ್ನು ಕಂಡುಹಿಡಿಯಲು ಈ ವ್ಯಾಕರಣಗಳು ಪ್ರಯತ್ನಿಸುತ್ತವೆ. ಹಾಗಾಗಿ ಹೆಚ್ಚಿನ ಸಂದರ್ಭಗಳಲ್ಲಿ ಇವು ಕನ್ನಡ ಭಾಷೆಯ ಇಂತಹ ಪದಗಳನ್ನು ಹೆಚ್ಚುಹೆಚ್ಚು ಬಳಕೆಮಾಡುತ್ತಿರುವುದು ಕಂಡುಬರುತ್ತದೆ. ಉದಾಹರಣೆಗೆ ಡಿ.ಎನ್.ಶಂಕರಭಟ್ ಅವರು ಕನ್ನಡಕ್ಕೆ ಬೇಕು ಕನ್ನಡದ್ದೇ ವ್ಯಾಕರಣ ಎಂಬ ಕೃತಿಯಲ್ಲಿ ವಿದುಚ್ಛಕ್ತಿ, ಸಚ್ಛಿಷ್ಯ, ಚಿಚ್ಛಕ್ತಿ, ಧನುಷ್ಟಂಕಾರ, ತಪಷಡ್ಭಾಗ, ವಿದ್ಯೈಶ್ವರ್ಯ, ಮಹೌಧಾರ್ಯ, ಜಲೌಘ, ಕರ್ತೃರ್ಥ, ಅಬ್ಜಾತ, ಮನಶ್ಶುದ್ಧಿ, ತಜ್ಜಾತಿ, ಬಹಶ್ಚಂದ್ರ, ಉಚ್ವಾಸ, ನಿಚ್ವಾಸ, ವಿದ್ಯುನ್ಮಂಡಲಿ ಇತ್ಯಾದಿ ಪದಗಳು ಸಂಸ್ಕೃತ ಪದಗಳಾಗಿವೆ. ಸಂಸ್ಕೃತದಿಂದ ಎರವಲಾಗಿ ಬಂದಿರುವ ವಿದ್ಯುತ್ತು ಪದ ಶಕ್ತಿ ಪದದೊಡನೆ ಸೇರಿದಾಗ ವಿದ್ಯುಚ್ಛಕ್ತಿ ಎಂಬ ಜೋಡುಪದ ಸಿದ್ಧವಾಗುತ್ತದೆ. ಇಲ್ಲಿ ವಿದ್ಯತ್ತು ಎಂಬುದರ ಕೊನೆಯ ಎರಡು ವರ್ಣಗಳು (ತ್ ಮತ್ತು ಉ) ಲೋಪವಾಗಿ ವಿದ್ಯುತ್ ಎಂಬುದು

ಉಳಿದಿದೆ. ಮತ್ತು ಅದರ ಕೊನೆಯ 'ತ' ಕಾರ 'ಚ' ಕಾರಾದೇಶವಾಗಿದೆ. ಇದಲ್ಲದೆ ಈ ಪದದ ಅನಂತರ ಬಂದಿರುವ ಶಕ್ತಿ ಪದದ ಮೊದಲನೆಯ ವ್ಯಂಜನ 'ಶ್' ಎಂದಿದ್ದುದು 'ಛ್' ಎಂದು ಆದೇಶವಾಗಿದೆ.

ವಿದ್ಯುಚ್ಛಕ್ತಿ ಪದದಲ್ಲಿ ಕಾಣಿಸುವ ಸೇರಿಕೆಯ ನಿಯಮವನ್ನು ಈ ರೀತಿ ವಿದ್ಯಾರ್ಥಿಗಳಿಗೆ ಸುಲಭವಾಗಿ ಅರ್ಥವಾಗುವ ಹಾಗೆ ವಿವರಿಸಿ ಹೇಳುವ ಬದಲು ಆ ಪದದಲ್ಲಿ ಶ್ಚುತ್ವ ಮತ್ತು ಛತ್ವಗಳೆಂಬ ಎರಡು ಸಂಧಿಕಾರ್ಯಗಳು ನಡೆದಿವೆ ಎಂದು ಹೇಳುವುದರಿಂದ ಏನು ಪ್ರಯೋಜನ? ಇಂಥಹ ಹೇಳಿಕೆಯನ್ನು ವಿವರಿಸಬೇಕಾಗಿರುವ ಹಲವು ಮಂದಿ ಶಿಕ್ಷಕರಿಗೂ ಅದು ನಿಜಕ್ಕೂ ಏನು ಹೇಳುತ್ತದೆ ಎಂಬುದು ಅರ್ಥವಾಗುವುದಿಲ್ಲ. ಸಂಸ್ಕೃತದ ಸೇರಿಕೆಯ ನಿಯಮಗಳನ್ನು ಪರಿಚಯಿಸುವಾಗ ಛತ್ವ, ಜಸ್ತ್ವ, ಷ್ಟುತ್ವ ಇತ್ಯಾದಿ ಪಾರಿಭಾಷಿಕ ಪದಗಳನ್ನು ಹಾಗೆಯೇ ಸಂಸ್ಕೃತ ವ್ಯಾಕರಣದಿಂದ ಎತ್ತಿ ಹಾಕುವ ಸಂಪ್ರದಾಯ ಬೆಳೆದು ಬಂದಿದೆ ಎಂಬುದು ಮೇಲಿನ ವಿಶ್ಲೇಷಣೆಯಿಂದ ತಿಳಿದುಬರುತ್ತದೆ. ಹೀಗಾಗಿ ವ್ಯಾಕರಣವೆಂದರೆ ಒಂದು ನಿಷ್ಪ್ರಯೋಜಕವಾದ ಕಗ್ಗಂಟು ಎಂಬ ಅಭಿಪ್ರಾಯ ಕಲಿಕಾರ್ಥಿಗಳಲ್ಲಿ ಮೂಡಲು ಮಾತ್ರ ಇದು ಸಹಾಯಕವಾಗಬಲ್ಲುದು. ಈ ಪಾರಿಭಾಷಿಕ ಪದಗಳಿಂದ ಕನ್ನಡ ವ್ಯಾಕರಣವನ್ನು ಕಲಿಯುವಲ್ಲಿ ಯಾವ ಪ್ರಯೋಜನವು ದೊರಕಲಾರದು.

ಶಾಲಾ ವಿದ್ಯಾರ್ಥಿಗಳು ಬಳಸುವ ಇಲ್ಲವೇ ಅವರು ಓದಬೇಕಾಗಿರುವ ಪಠ್ಯಪುಸ್ತಕಗಳು ಬಳಸುವ ಕನ್ನಡ ಭಾಷೆಯನ್ನು ಈ ವ್ಯಾಕರಣಗಳು ವರ್ಣಿಸಿ ಹೇಳಿದಲ್ಲಿ ಅದು ವಿದ್ಯಾರ್ಥಿಗಳಿಗೆ ಅರ್ಥವಾದೀತು ಮತ್ತು ಅಂತಹದೇ ಭಾಷೆಯಲ್ಲಿ ಬರೆಯಲು ಆ ವ್ಯಾಕರಣದಿಂದ ಅವರಿಗೆ ಸಹಾಯವಾದೀತು. ಶಾಲಾ ವ್ಯಾಕರಣಗಳು ಸಂಸ್ಕೃತ ವ್ಯಾಕರಣಗಳಲ್ಲಿ ಕಂಡುಬರುವ ವ್ಯಾಕರಣ ನಿಯಮಗಳನ್ನು ಕನ್ನಡದಲ್ಲಿ ವಿವರಿಸಿ ಹೇಳಲು ಪ್ರಯತ್ನಿಸುತ್ತವೆ. ಮತ್ತು ಅವುಗಳಿಗೆ ಕನ್ನಡದಲ್ಲಿ ಉದಾಹರಣೆಗಳನ್ನು ಕೊಡಲು ಪ್ರಯತ್ನಿಸುತ್ತವೆ. ಹೀಗೆ ಮಾಡುವಾಗ ಕನ್ನಡದಲ್ಲಿ ಉದಾಹರಣೆಗಳು ಸಿಗದಿದ್ದಾಗ ಅಂತಹ ವ್ಯಾಕರಣ ನಿಯಮಗಳನ್ನು ಬಳಸುವ ಬದಲು ಅವುಗಳಿಗೆ ಸಂಸ್ಕೃತದಿಂದ ಉದಾಹರಣೆಗಳನ್ನು ಹೆಕ್ಕಿ ಕೊಡುತ್ತವೆ. ಇದರಿಂದ ಇದು ಕನ್ನಡ ವ್ಯಾಕರಣ ಹೇಗಾಗುತ್ತದೆ? ಕಲಿಕಾರ್ಥಿಗಳಿಗೆ ಎಷ್ಟರಮಟ್ಟಿಗೆ ಅರ್ಥವಾಗುತ್ತದೆ? ಎಂಬುದು ಡಿ.ಎನ್.ಶಂಕರಭಟ್ ಅವರ ವಾದವಾಗಿದೆ.

ಉದಾಹರಣೆಗೆ ಸಮಾಸ ಪ್ರಕರಣವನ್ನು ನೋಡುವುದಾದರೆ ಸಮಾಸಗಳಲ್ಲಿ ಪ್ರಧಾನವಾಗಿ ಆರು ಬಗೆಗಳನ್ನು (ಮಾಧ್ಯಮಿಕ ಪಠ್ಯಮಸ್ತಕಗಳಲ್ಲಿ ತತ್ಪುರುಷ, ಕರ್ಮಧಾರೆಯ, ದ್ವಿಗು, ಅಂಶಿ, ದ್ವಂದ್ವ ಮತ್ತು ಕ್ರಿಯಾ ಸಮಾಸ) ಹೇಳಲಾಗಿದೆ. ಪ್ರೌಢಶಾಲಾ ಪಠ್ಯಮಸ್ತಕಗಳಲ್ಲಿ ಮಾಧ್ಯಮಿಕ ಪಠ್ಯಮಸ್ತಕಗಳಲ್ಲಿಯ ಆರು ಸಮಾಸಗಳಿಗೆ ಬಹುವ್ರೀಹಿ ಮತ್ತು ಗಮಕ ಸಮಾಸಗಳೆರಡನ್ನು ಸೇರಿಸಿ ಒಟ್ಟು ಸಮಾಸಗಳು ಎಂಟು ವಿಧಗಳಿವೆ ಎಂದು ಹೇಳಲಾಗಿದೆ. ಸಂಸ್ಕೃತದಲ್ಲಿ ಆರು ಸಮಾಸಗಳಿವೆ ಎಂದು ಹೇಳಿ ಅನಂತರ ಅವಕ್ಕಿಂತ ಭಿನ್ನವಾದ ಬೇರೆ ಎರಡು ಸಮಾಸಗಳು ಕನ್ನಡದಲ್ಲಿವೆ ಎಂದು ಹೇಳುತ್ತವೆ. ಈ ಸಮಾಸಗಳಿಗೆ ಉದಾಹರಣೆಗಳನ್ನು ಕೊಡುವಾಗ ಕೆಲವಕ್ಕೆ ಸಂಸ್ಕೃತದಿಂದ, ಕೆಲವಕ್ಕೆ ಹಳೆಗನ್ನಡದಿಂದ, ಮತ್ತೆ ಕೆಲವಕ್ಕೆ ಹೊಸಗನ್ನಡದಿಂದ ಸಮಸ್ತ ಪದಗಳನ್ನು ಆರಿಸಿ ಕೊಡುತ್ತವೆ. ಎಲ್ಲಾ ಸಮಾಸಗಳಿಗೂ ಹೊಸಗನ್ನಡದಿಂದ ಉದಾಹರಣೆಗಳನ್ನು ಕೊಡದಿರಲು ಸಾಧ್ಯವಾಗದಿರುವುದೇ ಇದಕ್ಕೆ ಮುಖ್ಯ ಕಾರಣ. ಸಮಾಸಗಳಲ್ಲಿ ಕನ್ನಡ ಮತ್ತು ಸಂಸ್ಕೃತ ಸಮಾಸಗಳ ವಿಂಗಡಣೆ ಇದೆಯೇ ಅಥವಾ ಇಲ್ಲವೋ ಎಂಬುದು ಪ್ರಶ್ನೆಯಾಗಿಯೇ ಉಳಿದಿದೆ.

ಉದಾಹರಣೆಗೆ

| ಸಂಸ್ಕೃತ ಪದಗಳು | ಹಳೆಗನ್ನಡ ಪದಗಳು | ಹೊಸಗನ್ನಡಪದಗಳು |
|---|---|---|
| ದಶಮುಖ | ನೀರ್ಗುಡಿ | ಸುಡುಗಾಡು |
| ವಿಷಾನ್ನ | ಬೆಳ್ಗೊಡೆ | ತಲೆದೂಗು |
| ತ್ರಿನೇತ್ರ | ಬೆಳ್ಮುಗಿಲ್ | ಅರಮನೆ |
| ದಿವ್ಯಪ್ರಕಾಶ | ತಂಗೂಳ್ | ಕೈಮುಗಿ |
| ಭಾಳಚಂದ್ರ | ಮೆಲ್ನುಡಿ | ಮುಂಗೈ |
| ಷಟ್ಕೋನ | ನೀರ್ವಾವು | ಕೈಕೊಟ್ಟನು |
| ಶುಭವಾರ್ತೆ | ಇರ್ಕೆಲ | ಆ ಹುಡುಗ |
| ಭಾಳನೇತ್ರ | ಒರ್ನುಡಿ | ನೀರುಣಿಸು |
| ಪದ್ಮನಾಭ | ಒರ್ಪಿಡಿ | ಉಡುದಾರ |
| ಸಪ್ತಾಂಗಗಳು | ಎಣ್ದೆಸೆ | ಮಾಡಿದಡಿಗೆ |

ಸಂಸ್ಕೃತ, ಹಳೆಗನ್ನಡ ಮತ್ತು ಹೊಸಗನ್ನಡ ಈ ರೀತಿ ಮಿಶ್ರಣ ಮಾಡುವುದರಿಂದ ಕಲಿಕಾರ್ಥಿಗಳಿಗೇನು ಪ್ರಯೋಜನವಾಗುತ್ತದೆ. ಸಮಾಸಗಳ ವಿಷಯ ಕಲಿಕಾರ್ಥಿಗಳಿಗೆ ಸರಿಯಾಗಿ ತಿಳಿಯಬೇಕಾದರೆ ಮೊದಲಿಗೆ ಹೊಸಗನ್ನಡದಲ್ಲಿ ಎಂತಹ ಸಮಾಸಗಳೆಲ್ಲ ಇವೆ ಎಂಬುದನ್ನು ತಿಳಿಸಿ ಅವಕ್ಕೆ ಹೊಸಗನ್ನಡದಿಂದಲೇ ಉದಾಹರಣೆಗಳನ್ನು ಕೊಟ್ಟು ವಿವರಿಸಬೇಕು. ಅನಂತರ ಅಗತ್ಯವಿದ್ದರೆ ಹಳೆಗನ್ನಡದ ಸಮಾಸಗಳು ಇವಕ್ಕಿಂತ ಭಿನ್ನವಾಗಿವೆಯೇ, ಇದ್ದರೆ ಹೇಗೆ ಭಿನ್ನವಾಗಿವೆ ಎಂಬುದನ್ನಾಗಲಿ ಇಲ್ಲವೆ ಸಂಸ್ಕೃತದ ಸಮಾಸಗಳು ಎಂತಹವು, ಕನ್ನಡದ ಸಮಾಸಗಳಿಗಿಂತ ಅವು ಹೇಗೆ ಭಿನ್ನವಾಗಿವೆ ಎಂಬುದನ್ನಾಗಲಿ ಉದಾಹರಣೆಗಳ ಸಹಾಯದಿಂದ ವಿವರಿಸಬೇಕು. ಹಾಗಾದಾಗ ಸಮಾಸಗಳು ಕಲಿಯುವ ಕಲಿಕಾರ್ಥಿಗಳಿಗೆ ಸುಲಭವಾಗಿ ಮತ್ತು ಸರಳವಾಗಿ ತಿಳಿಯಲು ಸಹಾಯವಾಗಬಹುದು.

ಕನ್ನಡ ವ್ಯಾಕರಣವನ್ನು ಕಲಿಸುವುದಕ್ಕಾಗಿ ತಯಾರಾಗಿರುವ ಪಠ್ಯಪುಸ್ತಕಗಳು ನಿಜಕ್ಕೂ ಕನ್ನಡ ವ್ಯಾಕರಣ ಪದಗಳನ್ನು, ಪದಪುಂಜಗಳನ್ನು ಮತ್ತು ವಾಕ್ಯಗಳನ್ನು ಕನ್ನಡದಲ್ಲಿ ಹೇಗೆ ರಚಿಸಲಾಗುತ್ತದೆ ಎಂಬುದನ್ನು ನೇರವಾಗಿ ತಿಳಿಸುವುದಿಲ್ಲ. ಅದಕ್ಕೆ ಬದಲು ಕೇಶಿರಾಜನ ಕಾಲದಿಂದಲೂ ಕನ್ನಡ ವ್ಯಾಕರಣ ಕುರಿತು ವೈಯ್ಯಾಕರಣಿಗಳಲ್ಲಿ, ಪಂಡಿತರ ಕೃತಿಗಳಲ್ಲಿ ಬಳಕೆಯಲ್ಲಿರುವ ಕೆಲವು ವಿಷಯಗಳನ್ನು ಅಡಕವಾಗಿ ತಿಳಿಸಲು ಪ್ರಯತ್ನಿಸುತ್ತವೆ. ಈ ವ್ಯಾಕರಣ ಗ್ರಂಥಗಳಲ್ಲಿಯ ಹಲವು ವಿಷಯಗಳು ಸಂಸ್ಕೃತ ವ್ಯಾಕರಣಕ್ಕೆ ಸಂಬಂಧಿಸಿದುವೇ ಹೊರತು ಕನ್ನಡಕ್ಕೆ ಸಂಬಂಧಿಸಿದವಲ್ಲ. ಇನ್ನು ಕೆಲವು ವಿಷಯಗಳು ಹೊಸಗನ್ನಡಕ್ಕೆ ಸಂಬಂಧಿಸಿದವು. ಇದರಿಂದಾಗಿ ಇವುಗಳಲ್ಲಿ ಬರುವ ವ್ಯಾಕರಣಾಂಶಗಳ ನಿಯಮಗಳು ಹೊಸಗನ್ನಡದ ದೃಷ್ಟಿಕೋನದಿಂದ ನೋಡಿದಾಗ ಬಹಳ ತೊಡಕು ತೊಡಕಾಗಿ ಕಾಣಿಸುತ್ತವೆ.

ವ್ಯಾಕರಣವು ತನ್ನದೇಆದ ಪರಿಭಾಷೆಯನ್ನು ಹೊಂದಿದೆ. ಪರಿಭಾಷೆ ಎಂದರೆ ಯಾವುದೇ ಜ್ಞಾನಕ್ಷೇತ್ರದಲ್ಲೂ ಕೆಲವು ವಿಶೇಷವು ವಿಶಿಷ್ಟವೂ ಆಗಿರುವಂಥ ಪದಗಳು. ಆ ಪದಗಳು ಸಾಮಾನ್ಯವಾದ ಅರ್ಥಕ್ಕಿಂತ ವಿಶೇಷವಾದ ಅರ್ಥ ವಿಸ್ತಾರತೆಯನ್ನು ತನ್ನ ಒಡಲಲ್ಲಿ ಇಟ್ಟುಕೊಂಡಿರುತ್ತವೆ. ಪ್ರತಿಯೊಬ್ಬ ಚಿಂತಕನಲ್ಲೂ ಈ ಬಗೆಯ ಪರಿಭಾಷೆಗಳು ಕಾಲಕಾಲದ ಸಾಂಸ್ಕೃತಿಕ ಮತ್ತು ಸಾಮಾಜಿಕ ಸಂಘರ್ಷವನ್ನು, ಒತ್ತಡವನ್ನು ಹೊತ್ತುಕೊಂಡು ರೂಪಗೊಳ್ಳುತಿರುತ್ತವೆ. ಆದರೆ ಈ ವ್ಯಾಕರಣ ಪರಿಭಾಷೆ ಪ್ರಾಚೀನ ಕಾಲಘಟ್ಟದಿಂದಲೂ ಪರಂಪರಾಗತವಾಗಿ ಸಾಂಪ್ರದಾಯಿಕ/ಪಾರಂಪರಿಕ ವ್ಯಾಕರಣದಲ್ಲಿ

ಉಳಿದುಕೊಂಡು ಬಂದಿದೆ. ವಿಜ್ಞಾನ ಮತ್ತು ತಂತ್ರಜ್ಞಾನಗಳಿಗೆ ಅವುಗಳದ್ದೇಆದ ಪರಿಭಾಷೆ ಇರುವಂತೆ ವ್ಯಾಕರಣಶಾಸ್ತ್ರಕ್ಕೂ ಅದರದ್ದೇಆದ ಪರಿಭಾಷೆ ಇರುತ್ತದೆ. ಉದಾಹರಣೆಗೆ ಅಂಕಿತನಾಮ, ಅನುಕರಣವಾಚಿಗಳು, ಅರಿಸಮಾಸ, ಅವ್ಯಯಗಳು, ಅನುನಾಸಿಕಗಳು, ಆಗಮ, ಆದೇಶ, ತದ್ಧಿತಾಂತ, ಸವರ್ಣದೀರ್ಘ, ಜೋಡುನುಡಿ, ನುಡಿಗಟ್ಟು ಇತ್ಯಾದಿ.

ವ್ಯಾಕರಣದಲ್ಲಿ ಬಳಕೆಯಾಗಿರುವ ಪಾರಿಭಾಷಿಕ ಪದಗಳಲ್ಲಿ ಹಲವು ವ್ಯಾಕರಣದ ಮೂಲ ತತ್ವಗಳ ಮೇಲೆ ಅವಲಂಬಿಸಿರುತ್ತವೆ. ಒಂದು ಭಾಷೆಯ ವ್ಯಾಕರಣದಲ್ಲಿ ಬಳಕೆಯಾಗಿರುವ ಪಾರಿಭಾಷಿಕ ಪದಗಳೆಲ್ಲವನ್ನು ಹಾಗೆಯೇ ಇನ್ನೊಂದು ಭಾಷೆಯ ವ್ಯಾಕರಣದಲ್ಲಿ ಬಳಸಲು ಸಾಧ್ಯವಾಗುವುದಿಲ್ಲ. ಆದರೆ ಹಳೆಗನ್ನಡದ ವೈಯ್ಯಾಕರಣಿಗಳು ಸಂಸ್ಕೃತದ ಪಾರಿಭಾಷಿಕ ಪದಗಳನ್ನು ತಮ್ಮ ವ್ಯಾಕರಣಗಳಲ್ಲಿ ಹೆಸರಿಸಿ ವಿವರಿಸಿದ್ದಾರೆ. ಇವುಗಳಲ್ಲಿ ಕೆಲವು ನಿಜಕ್ಕೂ ಅವರು ರಚಿಸಿರುವ ವ್ಯಾಕರಣಗಳಿಗೆ ಅವಶ್ಯವಿಲ್ಲವಾದ ಕಾರಣ ಆ ವ್ಯಾಕರಣಗಳು ಅನಾವಶ್ಯವಾಗಿ ಕ್ಲಿಷ್ಟವಾಗಿವೆ.

ಪ್ರಸ್ತುತ ಅಧ್ಯಯನದಲ್ಲಿ ಕನ್ನಡ ಶಾಲಾ ಪಠ್ಯಗಳ ವ್ಯಾಕರಣ : ಅಧ್ಯಯನ (ಒಂದರಿಂದ ಹತ್ತನೆ ತರಗತಿವರೆಗೆ) ವಿಷಯ ಕುರಿತು ಚರ್ಚೆಮಾಡುವಲ್ಲಿ ಕನ್ನಡ ಪಠ್ಯಗಳಲ್ಲಿ ವ್ಯಾಕರಣಾಂಶಗಳನ್ನು ಯಾವ ಸ್ವರೂಪದಲ್ಲಿ ಅಳವಡಿಸಲಾಗಿದೆ ಎಂಬುದನ್ನು ಚಾರಿತ್ರಿಕವಾಗಿ ಚರ್ಚೆಮಾಡುವ ಉದ್ದೇಶವನ್ನು ಹೊಂದಿದೆ. ಭಾಷೆಯನ್ನು ಅಧ್ಯಯನ ಮಾಡುವ ರೀತಿ ಇಂದು ನಾನಾ ಮುಖಗಳಲ್ಲಿ ನಡೆಯುತ್ತಿದೆ. ಆದರೆ ವಿಶ್ವದಲ್ಲಿ ಭಾಷಾ ವಿಜ್ಞಾನ ಕ್ಷೇತ್ರದಲ್ಲಿ ಆಗಿರುವ ಮತ್ತು ಆಗುತ್ತಿರುವ ಅನೇಕ ಬೆಳವಣಿಗೆಗಳು ಕನ್ನಡಕ್ಕೆ ಇನ್ನೂ ಅಪರಿಚಿತವಾಗಿಯೇ ಇದೆ ಎನ್ನುವುದು ಸತ್ಯ. ಕನ್ನಡ ವ್ಯಾಕರಣ ಬೋಧನೆ ಹಾಗೂ ಅಧ್ಯಯನಗಳು ಸಾವಿರಾರು ವರ್ಷಗಳಿಂದ ನಿರಂತರವಾಗಿ ನಡೆದುಕೊಂಡು ಬರುತ್ತಿವೆ. ಇಂದಿನ ಶಾಲೆಗಳಲ್ಲಿ ಮಕ್ಕಳು ವ್ಯಾಕರಣವನ್ನು ಕಲಿಯುತ್ತಿದ್ದಾರೆ. ವಿಶ್ವವಿದ್ಯಾಲಯ ಮಟ್ಟದಲ್ಲಿ ಸಾಕಷ್ಟು ಅಧ್ಯಯನಗಳು, ಸಂಶೋಧನೆಗಳು ನಡೆಯುತ್ತಿವೆ. ಆದಾಗ್ಯೂ ಸಾವಿರ ವರ್ಷಗಳಷ್ಟು ಹಿಂದೆ ಬರೆದ ಕೇಶಿರಾಜನ ಶಬ್ದಮಣಿದರ್ಪಣ ಇಂದಿಗೂ ಮಾದರಿಯಾಗಿ ಉಳಿದುಕೊಂಡು ಬಂದಿದೆ. ಇದನ್ನೇ ಆಧಾರವಾಗಿಟ್ಟುಕೊಂಡು ಬರೆಯಲಾದ ಹೊಸಗನ್ನಡ ವ್ಯಾಕರಣವನ್ನು ಶಾಲಾ ಪಠ್ಯಪುಸ್ತಕಗಳಲ್ಲಿ ಕಲಿಸಲಾಗುತ್ತಿದೆ. ಹೀಗಾಗಿ ವ್ಯಾಕರಣ ಒಂದು ಕಬ್ಬಿಣದ ಕಡಲೆಯಾಗಿ ಉಳಿದಿದೆ. ಅಲ್ಲದೆ ವ್ಯಾಕರಣವೆಂದರೆ ಒಂದು ನಿಷ್ಪ್ರಯೋಜಕವಾದ ಕಗ್ಗಂಟು ಎಂಬ

ಅಭಿಪ್ರಾಯವಿದೆ. ಮಕ್ಕಳು ವ್ಯಾಕರಣವನ್ನು ಸರಿಯಾಗಿ ಕಲಿಯುವುದಿರಲಿ ಅರ್ಥ ಮಾಡಿಕೊಳ್ಳುತ್ತಿಲ್ಲ. ಈ ಕ್ಲಿಷ್ಟತೆಗೆ ಹಲವು ಕಾರಣಗಳನ್ನು ಗಮನಿಸಬಹುದು.

ಹೊಸಗನ್ನಡ ವ್ಯಾಕರಣಕಾರರು ಪ್ರಮುಖವಾಗಿ ಸಾಂಪ್ರದಾಯಿಕವಾಗಿ ಬಂದ ಸಂಸ್ಕೃತ ವ್ಯಾಕರಣವನ್ನು ಮಾದರಿಯಾಗಿಟ್ಟುಕೊಂಡಿರುವುದು. ಸುದೀರ್ಘ ಚರಿತ್ರೆ ಹೊಂದಿರುವ ಸಂಸ್ಕೃತ ಅಥವಾ ಹಳೆಗನ್ನಡ ವ್ಯಾಕರಣವು ತನ್ನದೇಆದ ಪರಿಭಾಷೆಯನ್ನು ಹೊಂದಿರುವುದು. ವ್ಯಾಕರಣ ಕಠಿಣವಾದ ವಿಷಯವೆಂಬ ಕಾರಣಕ್ಕೆ ಅಧ್ಯಯನದ ಕೊರತೆಯಿದೆ. ಮೂಲಭೂತವಾದ ಇಂತಹ ಹಲವು ಕಾರಣಗಳಿಂದ ಶಾಲೆಗಳಲ್ಲಿ ಕನ್ನಡ ವ್ಯಾಕರಣ ಅಧ್ಯಯನಕ್ಕೆ ಕ್ಲಿಷ್ಟವಾಗಿರಬಹುದೇ? ಪರಂಪರಾಗತವಾದ, ವಿವರಣಾತ್ಮಕವಾದ ವ್ಯಾಕರಣವನ್ನು ಪಠ್ಯಕ್ಕೆ ಅಳವಡಿಸಲಾಗಿದೆಯೇ? ಭಾಷೆಯ ನಿಯಮಗಳನ್ನು ಮಕ್ಕಳಿಗೆ ತಿಳಿಸಲೋಸುಗ ವ್ಯಾಕರಣವಿದೆಯೇ? ಶಾಲೆಗಳಲ್ಲಿ ಅಳವಡಿಸಿರುವ ವ್ಯಾಕರಣವಾದರೂ ಎಂತಹದ್ದು? ಇಂದು ಮಕ್ಕಳಿಗೆ ವ್ಯಾಕರಣದ ಅಗತ್ಯವಿದೆಯೇ? ಅಥವಾ ವ್ಯಾಕರಣ ಬೇಕೋ ಬೇಡವೋ? ಸಾಂಪ್ರದಾಯಿಕವಾದ ವಿಧಾನದ ಮೂಲಕ ವ್ಯಾಕರಣವನ್ನು ಮಕ್ಕಳಿಗೆ ಕಲಿಸುವುದರ ಉದ್ದೇಶವಾದರೂ ಏನು? ವ್ಯಾಕರಣವನ್ನು ಮಕ್ಕಳು ಕಲಿಯುತ್ತಾರೆಯೇ? ವ್ಯಾಕರಣವು ಪಠ್ಯಪುಸ್ತಕಗಳಿಗೆ ಮಾತ್ರ ಮೀಸಲಾಗಿದೆಯೇ? ವ್ಯಾಕರಣವು ಒಂದು ಶುಷ್ಕ ಶಾಸ್ತ್ರವೇ? ವ್ಯಾಕರಣವಿರುವುದು ಕಲ್ತು ಮರೆಯುವುದಕ್ಕೆಯೇ? ವ್ಯಾಕರಣವು ಭಾಷೆಗೆ ಕಾಲ್ತೊಡಕಾಗಿದೆಯೇ? ಎಂಬಿತ್ಯಾದಿ ಪ್ರಶ್ನೆಗಳನ್ನು ಪ್ರಸ್ತುತ ಅಧ್ಯಯನವು ಹೊಂದಿದೆ.

ಪ್ರಾಥಮಿಕ ಶಿಕ್ಷಣದಿಂದ ಪ್ರೌಢಶಿಕ್ಷಣದವರೆಗಿನ (ಒಂದರಿಂದ ಹತ್ತನೆ ತರಗತಿವರೆಗೆ) ಶಾಲಾ ವ್ಯಾಕರಣವನ್ನು ಗಮನಿಸಿದಾಗ ಮಕ್ಕಳಿಗೆ ಸಾಂಪ್ರದಾಯಿಕವಾಗಿ ಬಂದ ಬೋಧನಾತ್ಮಕ ವ್ಯಾಕರಣವನ್ನು ಅಳವಡಿಸಿರುವುದು ಮೇಲ್ನೋಟಕ್ಕೆ ಗೋಚರವಾಗುತ್ತದೆ. ಭಾಷೆಯನ್ನು ಬೋಧಿಸುವ ದೃಷ್ಟಿಯಿಂದಲೇ ವಿಶೇಷ ಎಚ್ಚರಿಕೆಯಿಂದ ಸಿದ್ಧಪಡಿಸಿದ ವ್ಯಾಕರಣಗಳು ಮಾತೃಭಾಷೆಯ ಅರಿವನ್ನು ಮೂಡಿಸುವ ಇಲ್ಲವೇ ಅನ್ಯ ಭಾಷೆಯಾಗಿ ಅದನ್ನು ಕಲಿಸುವ ಉದ್ದೇಶ ಈ ವ್ಯಾಕರಣಗಳಲ್ಲಿ ಕಂಡುಬರುತ್ತದೆ. ಶಾಲೆಯ ಕಲಿಕೆಯಲ್ಲಿ ಇವು ಮಹತ್ವದ ಪಾತ್ರವಹಿಸುತ್ತವೆ. ಹೀಗಾಗಿ ಇವುಗಳನ್ನು ಪದ್ಯಗಳೆಂದು ಗುರುತಿಸಲಾಗಿದೆ. ಒಂದು ಭಾಷೆಯನ್ನು ಕಲಿಸಲು ಸಿದ್ಧಪಡಿಸಲಾದ ಇಂಥ ವ್ಯಾಕರಣಗಳು ಮತ್ತೊಂದು ಭಾಷೆಯ ಕಲಿಕೆಗೆ ಸಾಮಾನ್ಯವಾಗಿ ಪ್ರಯೋಜನಕ್ಕೆ ಬರುವುದಿಲ್ಲ. ಒಂದರಿಂದ ಹತ್ತನೆ ತರಗತಿವರೆಗಿನ ಮಕ್ಕಳಿಗೆ

ಪಠ್ಯಪುಸ್ತಕಗಳಲ್ಲಿ ಅಳವಡಿಸಿರುವ ವ್ಯಾಕರಣವನ್ನು ಗಮನಿಸಿದಾಗ ಕೆಲವೊಂದು ಪ್ರಮುಖವಾದ ಉದ್ದೇಶಗಳಿಗಾಗಿಯೇ ವ್ಯಾಕರಣವನ್ನು ಅಳವಡಿಸಿರುವುದು ನಮಗೆ ಕಂಡುಬರುತ್ತದೆ. ಪ್ರಮುಖವಾಗಿ ಭಾಷೆಯ ಅರ್ಥ ಮೌಲ್ಯಗಳನ್ನು ಹಾಗೂ ಸ್ಪಷ್ಟತೆ ಮತ್ತು ಶಿಷ್ಟತೆಗಳನ್ನು ಕಾಯ್ದುಕೊಳ್ಳುವುದು. ಭಾಷೆಯ ನೆಲೆಬೆಲೆಗಳನ್ನು ಶಾಸ್ತ್ರೀಯವಾದ ತಳಹದಿಯ ಮೇಲೆ ನಿರೂಪಿಸುವುದು. ಸಂದೇಹ, ಅಸ್ಪಷ್ಟತೆ, ಅಶ್ಲೀಲ ಪದಗಳ ಪ್ರಯೋಗಗಳನ್ನು ನಿವಾರಿಸಿ ಭಾಷೆಯ ಸಮತೋಲನವನ್ನು ಮತ್ತು ಭಾಷಾ ಕೌಶಲಗಳನ್ನು ವ್ಯಾಕರಣ ನಿರೂಪಿಸುತ್ತದೆ. ಭಾಷೆಯ ಸರಿತಪ್ಪುಗಳನ್ನು ನಿರ್ಧರಿಸುತ್ತದೆ. ಇತ್ಯಾದಿ ಅಂಶಗಳಿಂದ ಮಕ್ಕಳಿಗೆ ಭಾಷೆಯ ಮೇಲೆ ಹಿಡಿತವನ್ನು ಪಡೆದುಕೊಳ್ಳಲು ಸಾಧ್ಯವಾಗುತ್ತದೆ. ಈ ಹಿನ್ನೆಲೆಯಲ್ಲಿ ವ್ಯಾಕರಣವನ್ನು ಅಳವಡಿಸಲಾಗಿದೆ ಎಂದೆನಿಸುತ್ತದೆ. ವ್ಯಾಕರಣಾಂಶಗಳು ಪಠ್ಯಗಳಲ್ಲಿಯ ಭಾಷಾಭ್ಯಾಸದೊಂದಿಗೆ ಅವಿನಾಭಾವ ಸಂಬಂಧದಿಂದ ಕೂಡಿವೆ. ಅಂದರೆ ಭಾಷಾಭ್ಯಾಸದ ನೆಲೆ ನಿಂತಿರುವುದು ಆಯಾ ಭಾಷೆಯ ವ್ಯಾಕರಣದಲ್ಲಿ ಎನಿಸುತ್ತದೆ.

ಕನ್ನಡ ವ್ಯಾಕರಣಗಳನ್ನು ಆರಂಭದಿಂದಲೂ ಸಂಸ್ಕೃತ ಭಾಷೆಯ ರಚನೆಯ ನಿಯಮಗಳಿಗೆ ಅನುಗುಣವಾಗಿ ರೂಪಿಸಲಾಗಿದೆ. ಯಾವ ನಿಯಮಗಳು ಸಂಸ್ಕೃತಕ್ಕೆ ಸಲ್ಲುತ್ತವೆಯೋ ಅವು ಕನ್ನಡಕ್ಕೆ ಇವೆಯೋ ಇಲ್ಲವೋ, ಇದ್ದರೆ ಅವುಗಳ ಸ್ವರೂಪವೇನು ಎಂಬುದನ್ನು ಶೋಧಿಸುವ ಮಾದರಿಯನ್ನು ಅನುಸರಿಸಲಾಗಿದೆ. ಕೆಲವೊಮ್ಮೆ ಸಂಸ್ಕೃತ ವ್ಯಾಕರಣದ ಚೌಕಟ್ಟಿಗೆ ಹೊಂದಿಸಲು ಕನ್ನಡ ಭಾಷೆಯಲ್ಲಿ ಇಲ್ಲದಿರುವ ರಾಚನಿಕ ನಿಯಮಗಳನ್ನು ಕಂಡುಕೊಳ್ಳುವ ವ್ಯರ್ಥ ಪ್ರಯತ್ನ ಮಾಡಲಾಗಿದೆ. ಉದಾಹರಣೆಗೆ: ನಾಮಪದ ಮತ್ತು ಗುಣವಾಚಕ. ಗುಣವಾಚಕಗಳನ್ನು ನಾಮಪದದ ಭಾಗವಾಗಿ ವಿವರಿಸುವ ಮಾದರಿ ಸಂಸ್ಕೃತ ಭಾಷೆಯಲ್ಲಿದೆ. ಕನ್ನಡದಲ್ಲಿ ನಾಮಪದ ಮತ್ತು ಗುಣವಾಚಕಗಳು ಬೇರೆ ಬೇರೆ ಪದವರ್ಗಗಳಾಗಿ ಕಾರ್ಯನಿರ್ವಹಿಸುತ್ತವೆ. ಉದಾಹರಣೆಗೆ ಕನ್ನಡದ 'ಕಪ್ಪು ಹಾವು' ಪದಮುಂಜವನ್ನು ಸಂಸ್ಕೃತದ 'ಕೃಷ್ಣಃ ಸರ್ಪಃ' ಪದಮುಂಜದೊಂದಿಗೆ ಹೋಲಿಸಿ ನೋಡಬಹುದು. ಇವೆರಡೂ ಒಂದೇ ಅರ್ಥವನ್ನು ಕೊಡುವುದಾದರೂ ಆ ಅರ್ಥವನ್ನು ಅವು ಕೊಡುವ ಕ್ರಮ ಮಾತ್ರ ಬೇರೆ ಬೇರೆ.

ಕನ್ನಡದ 'ಕಪ್ಪು ಹಾವು' ಎಂಬುದರಲ್ಲಿ ಬರುವ ಹಾವು ನಾಮಪದ ಒಂದು ಪ್ರಾಣಿಯನ್ನು ಗುರುತಿಸುತ್ತದೆ. ಮತ್ತು ಕಪ್ಪು ಗುಣವಾಚಕವು ಒಂದು ಬಣ್ಣದ ಗುಣವನ್ನು ಸೂಚಿಸುತ್ತದೆ. ಇವೆರಡನ್ನು ಒಟ್ಟು ಸೇರಿಸಿ ಒಂದೇ ಪದಮುಂಜದಲ್ಲಿ 'ಕಪ್ಪು ಹಾವು'

ಎಂಬುದಾಗಿ ಬಳಸುವುದರ ಮೂಲಕ ಕನ್ನಡದಲ್ಲಿ ಒಂದು ವಿಶಿಷ್ಟವಾದ ಕಪ್ಪು ಬಣ್ಣದ ಹಾವನ್ನು ಗುರುತಿಸಲಾಗುತ್ತದೆ. ಆದರೆ ಸಂಸ್ಕೃತದಲ್ಲಿ ಇದಕ್ಕಿಂತ ತೀರ ಭಿನ್ನವಾದ ವಿಧಾನದ ಮೂಲಕ ಪದಪುಂಜವನ್ನು ರಚಿಸಲಾಗುತ್ತದೆ. ಉದಾಹರಣೆಗೆ ಕೃಷ್ಣಃ ಸರ್ಪಃ ಪದಪುಂಜದಲ್ಲಿ ಕೃಷ್ಣಃ ಮತ್ತು ಸರ್ಪಃ ಎಂಬ ಎರಡೂ ಪದಗಳು ನಾಮಪದಗಳಾಗಿವೆ. ಕೃಷ್ಣಃ ಎಂಬುದು ಕಪ್ಪಾಗಿರುವ ಒಂದು ಪ್ರಾಣಿ ಇಲ್ಲವೇ ವಸ್ತುವನ್ನು ಗುರುತಿಸಿದರೆ, ಸರ್ಪಃ ಎಂಬುದು ಹಾವಾಗಿರುವ ಒಂದು ಪ್ರಾಣಿಯನ್ನು ಗುರುತಿಸುತ್ತದೆ. ಈ ಎರಡು ಪದಗಳನ್ನು ಒಟ್ಟಿಗೆ ಒಂದೇ ಪದಪುಂಜದ ಅಂಗಗಳನ್ನಾಗಿ ಬಳಸಿದಾಗ, ವಾಕ್ಯವೊಂದರಲ್ಲಿ ಅವು ಗುರುತಿಸುವ ಪ್ರಾಣಿಗಳೆರಡೂ ಒಂದೇ ಎಂಬರ್ಥ ವ್ಯಕ್ತವಾಗುತ್ತದೆ. ಇದರಿಂದಾಗಿ ಒಂದು ಪದಕಂತೆ ವಿಶಿಷ್ಟವಾದೊಂದು ಪ್ರಾಣಿಯನ್ನು ಗುರುತಿಸುವಂತಾಗುತ್ತದೆ.

ಹತ್ತೊಂಬತ್ತನೆಯ ಶತಮಾನದಲ್ಲಿ ಕನ್ನಡಕ್ಕೆ ವ್ಯಾಕರಣ ರಚಿಸಿದ ಕ್ರಿಶ್ಚಿಯನ್ನರ ಮಿಶಿನರಿಗಳು ಸಂಸ್ಕೃತ ಭಾಷೆಯ ನಿಯಮಗಳನ್ನು, ರಚನೆಯ ಸ್ವರೂಪವನ್ನು ಕನ್ನಡದಲ್ಲಿ ಗುರುತಿಸಲು ಪ್ರಯತ್ನಿಸಿದರು. ಇಲ್ಲಿಯೂ ಕನ್ನಡದ ನಿಜಸ್ವರೂಪ ಪ್ರಕಟವಾಗುವ ಅವಕಾಶ ತಪ್ಪಿಹೋಯಿತು. ಡಿ.ಎನ್.ಶಂಕರಭಟ್ ಅವರು ಈ ಪರಿಸ್ಥಿತಿಯನ್ನು ಮನಗಂಡು ಕನ್ನಡ ಭಾಷೆಯ ರಚನೆಯನ್ನು ಆ ಭಾಷೆಯ ಮೂಲಕವೆ ಕಂಡುಕೊಳ್ಳಬೇಕೆಂದು ವಾದಿಸುವ 'ಕನ್ನಡಕ್ಕೆ ಬೇಕು ಕನ್ನಡದ್ದೇ ವ್ಯಾಕರಣ' ಎಂಬ ಕೃತಿಯನ್ನು ರಚಿಸಿದರು. ಇಲ್ಲಿ ಅವರ ವಾದ ಎರಡು ನೆಲೆಯಲ್ಲಿ ನಡೆದಿದೆ. ಒಂದು : ಸಂಸ್ಕೃತ ವ್ಯಾಕರಣ ನಿಯಮಗಳು ಕನ್ನಡಕ್ಕೆ ಹೊಂದುವುದಿಲ್ಲವೆಂದು ತೋರಿಸುವುದು. ಎರಡು : ಕನ್ನಡ ಭಾಷೆಯನ್ನು ವಿಶ್ಲೇಷಿಸುವ ಮೂಲಕವೇ ಆ ಭಾಷೆಯ ರಚನೆಯನ್ನು ಗ್ರಹಿಸಲು ತೊಡಗುವುದು ಇವೆರಡೂ ಪೂರಕ ಪ್ರಯತ್ನಗಳಾಗಿವೆ. ಈ ಹಿನ್ನೆಲೆಯಲ್ಲಿ ಕನ್ನಡ ಶಾಲಾಪಠ್ಯಗಳ ವ್ಯಾಕರಣ ಮಾದರಿಗಳನ್ನು ಇಟ್ಟುಕೊಂಡು ಅಧ್ಯಯನವನ್ನು ಮಾಡಲಾಗಿದೆ.

ಕನ್ನಡವನ್ನು ಕೇಂದ್ರವನ್ನಾಗಿರಿಸಿಕೊಂಡ ಅಧ್ಯಯನಗಳಲ್ಲಿನ ಆಧುನಿಕ ತಾತ್ವಿಕತೆಯನ್ನು ಆಧರಿಸಿದ ಅಧ್ಯಯನಗಳು ಮತ್ತು ಪಾರಂಪರಿಕ ನೆಲೆಯ ಅಧ್ಯಯನಗಳು ಎಂದು ಎರಡು ಗುಂಪುಗಳನ್ನಾಗಿ ಮಾಡಬಹುದು. ಪಾರಂಪರಿಕ ನೆಲೆಯ ಅಧ್ಯಯನಗಳು ಹೊಸ ಪ್ರಶ್ನೆಗಳನ್ನು ಎದುರಿಸುವುದಿಲ್ಲ. ಹೊಸ ಚಿಂತನೆಗಳನ್ನು ತಾತ್ವಿಕವಾಗಿ ಮೈಮೇಲೆ ಹಾಕಿಕೊಳ್ಳುವುದಿಲ್ಲ. ಇದಕ್ಕೆ ಕಾರಣಗಳೇನು? ಎಂಬುದನ್ನು

ಹಾಗೂ ಆಧುನಿಕ ತಾತ್ವಿಕತೆಯನ್ನು ಆಧರಿಸಿದ ಅಧ್ಯಯನಗಳು ಸಾಂಪ್ರದಾಯಿಕ ಅಧ್ಯಯನವನ್ನು ಒಪ್ಪಿಕೊಳ್ಳದೆ ಇರುವುದಕ್ಕೆ ಕಾರಣವೇನು? ಕನ್ನಡ ಶಾಲಾ ಪಠ್ಯಗಳಲ್ಲಿ ವ್ಯಾಕರಣದ ಅಂಶಗಳನ್ನು ಅಳವಡಿಸುವಲ್ಲಿ ಉಂಟಾಗಿರುವ ಸಮಸ್ಯೆಗಳನ್ನು ಗುರುತಿಸಲಾಗಿದೆ.

೧. ಶಾಲೆಗಳಲ್ಲಿ ಕನ್ನಡ ಭಾಷೆಯ ವ್ಯಾಕರಣವನ್ನು ಬೋಧಿಸಲಾಗುತ್ತದೆ. ಹೀಗೆ ಬೋಧಿಸುವಾಗ ಏನು ಬದಲಾವಣೆ ನಡೆಯುತ್ತಿದೆ ಎಂಬುದನ್ನು ತಿಳಿಸುತ್ತದೆಯೇ ಹೊರತು ಏಕೆ ಬದಲಾವಣೆ ಆಗಿದೆ ಎಂಬುದನ್ನು ತಿಳಿಸುವುದಿಲ್ಲ.

ಉದಾಹರಣೆ : ಕಾಲು ಪದಕ್ಕೆ 'ಅನ್ನು' ಮತ್ತು 'ಅ' ಎಂಬ ಎರಡು ಪ್ರತ್ಯಯಗಳನ್ನು ಸೇರಿಸಿ ಬಳಕೆ ಮಾಡಲಾಗುತ್ತದೆ. ಹೀಗೆ ಬಳಕೆ ಮಾಡುವಾಗ ಕಾಲನ್ನು ಮತ್ತು ಕಾಲಿನ ಎಂಬ ಎರಡು ಪದಗಳು ನಮಗೆ ದೊರಕುತ್ತವೆ. ಹೀಗೆ ಕಲಿಸುವುದರಿಂದ ಏನೂ ಪ್ರಯೋಜನ ಆಗುವುದಿಲ್ಲ. ಕಾಲು ಪದದ ಕೊನೆಯಲ್ಲಿರುವ 'ಉ' ಕಾರ ಏಕೆ ಲೋಪವಾಯಿತು ಮತ್ತು ಎರಡು ಪ್ರತ್ಯಯಗಳಲ್ಲಿ 'ಅ' ಧ್ವನಿಯೇ ಮೊದಲು ಇದ್ದರೂ ಒಂದು ಕಡೆ ಕಾಲನ್ನು ಪದದಲ್ಲಿ ಕಾಲ್ಗೆ ಸೇರಿದರೆ, 'ಎ' ಮತ್ತೊಂದು ಕಡೆ ಕಾಲಿನ ಎಂಬಲ್ಲಿ 'ಇನ' ಎಂಬ ಪ್ರತ್ಯಯ ಸೇರಿದೆ. ಇದು ಯಾಕೆ? ಹೇಗೆ ಸೇರಿದೆ ಎಂಬುದರ ಬಗ್ಗೆ ನಮ್ಮ ಶಾಲಾ ವ್ಯಾಕರಣಗಳು ಎಲ್ಲೂ ವಿವರಿಸುವುದಿಲ್ಲ. ಇದೇ ರೀತಿಯಲ್ಲಿ ಕನ್ನಡಕ್ಕೆ ಇಂಗ್ಲಿಷಿನಿಂದ ಅನೇಕ ಪದಗಳು ಬಳಕೆಯಲ್ಲಿವೆ. ಅಂತಹ ವ್ಯಂಜನಾಂತ ಪದಗಳ ಕೊನೆಗೆ 'ಉ' ಕಾರ ಸೇರಿಸಿಬಿಟ್ಟರೆ ಅದು ಕನ್ನಡ ಪದವಾಗುತ್ತದೆಂದು ನಮ್ಮ ಶಾಲಾ ವ್ಯಾಕರಣ ಕಲಿಸುತ್ತಿದೆ. ಉದಾಹರಣೆಗೆ : ಕಾರು, ರೈಲು, ಕ್ರಾಸು, ಕ್ಲಾಸು, ಗ್ಲಾಸು ಇವೇ ಮುಂತಾದ ಪದಗಳಿಗೆ ಕೊನೆಯಲ್ಲಿ 'ಉ' ಕಾರವನ್ನು ಸೇರಿಸಲಾಗಿದೆಯೇ ಅಥವಾ ಬೇರೆ ಏನಾದರೂ ಬದಲಾವಣೆಯಾಗಿದೆಯೇ ಎಂಬುದನ್ನು ವಿಮರ್ಶಿಸಲು ಹೋಗುವುದಿಲ್ಲ. ಕೆಲವು ಪದಗಳಿಗೆ ಉದಾಹರಣೆಗೆ : ಕಾರು, ರೈಲು, ಕ್ರಾಸು, ಕ್ಲಾಸು ಮುಂತಾದ ಪದಗಳಿಗೆ 'ಉ' ಕಾರ ಸೇರಿಸಲಾಗಿದೆ. ಹಾಗೆಯೇ ಮತ್ತೆ ಕೆಲವು ಪದದ ಕೊನೆಯ ವ್ಯಂಜನವನ್ನು ದ್ವಿತ್ವಗೊಳಿಸಿ ಮತ್ತೊಮ್ಮೆ 'ಉ' ಕಾರವನ್ನು ಸೇರಿಸಲಾಗಿದೆ. ಉದಾಹರಣೆಗೆ : ಬಸ್ಸು, ಪೆನ್ನು, ಡ್ರಸ್ಸು, ಬುಕ್ಕು, ರೋಡ್ಡು ಮೊದಲಾದ ಪದಗಳಲ್ಲಿ ಈ ಬದಲಾವಣೆ ಏನು ಆಗಿದೆ ಎಂಬುದನ್ನು ನಮ್ಮ ಶಾಲಾ ಪಠ್ಯಪುಸ್ತಕ ವ್ಯಾಕರಣ ತಿಳಿಸುವುದಿಲ್ಲ. ಇಂತಹ ನೂರಾರು ಸಮಸ್ಯೆಗಳು ಸಮಕಾಲೀನ ಪಠ್ಯಪುಸ್ತಕಗಳಲ್ಲಿನ ವ್ಯಾಕರಣದ ಅಳವಡಿಕೆಯಲ್ಲಿ ಇರುವುದು ಕಂಡುಬರುತ್ತದೆ.

೨. ಈಗಾಗಲೇ ಗುರುತಿಸಿರುವ ಸಮಸ್ಯೆಗಳಿಗೆ ಮತ್ತಷ್ಟು ಉದಾಹರಣೆಗಳ ಸಹಿತ ಚರ್ಚಿಸುವುದು.

ಉದಾಹರಣೆ

ಸಮಕಾಲೀನ ಸಂದರ್ಭದಲ್ಲಿ ಶಾಲೆಗಳಲ್ಲಿ ವ್ಯಾಕರಣವನ್ನು ಕಲಿಸುವಾಗ ನಿಯಮಗಳ ಮೂಲಕ ಪದವನ್ನು ಪರಿಚಯಿಸಬೇಕೆ ಅಥವಾ ಪದಗಳನ್ನಿಟ್ಟುಕೊಂಡು ಆ ಪದರಚನೆಯಲ್ಲಾಗಿರುವ ನಿಯಮಗಳನ್ನು ಹೇಳಬೇಕೆ ಎಂಬುದೊಂದು ಸಮಸ್ಯೆ. ಇದಕ್ಕೆ ಆಧುನಿಕ ಚಿಂತನಾಕ್ರಮ ಪದರಚನೆಯಲ್ಲಿ ಜರುಗಿರುವ ಧ್ವನಿ ನಿಯಮಗಳನ್ನು ವಿವರಿಸಿದರೆ ಸಾಕು ಎಂದು ಹೇಳಲಾಗುತ್ತಿದೆ. ಹೀಗೆ ಹೇಳುವಾಗ ಒಂದೆರಡು ನಿದರ್ಶನಗಳನ್ನಿಟ್ಟುಕೊಂಡು ಮಾತ್ರ ಸಮಸ್ಯೆಯನ್ನು ವಿವರಿಸಲಾಗಿದೆ. ಇಂತಹ ಸಮಸ್ಯೆಗಳನ್ನು ಕುರಿತು ಪ್ರಸ್ತುತ ಅಧ್ಯಯನದಲ್ಲಿ ಹೆಚ್ಚು ನಿದರ್ಶನಗಳ ಮೂಲಕ ವಿವರಿಸಲಾಗಿದೆ.

ಸಮಕಾಲೀನ ಸಂದರ್ಭದ ಕನ್ನಡ ಪಠ್ಯಪುಸ್ತಕಗಳಲ್ಲಿ ವ್ಯಾಕರಣಾಂಶಗಳನ್ನು ಗಮನಿಸಿದಾಗ ಪ್ರಾಥಮಿಕ ಹಂತದಲ್ಲಿ ವ್ಯಾಕರಣದ ಪರಿಭಾಷೆಗಳನ್ನು ಪರಿಚಯಿಸದೆ ಉದಾಹರಣೆಗಳನ್ನು (ಮಾದರಿಗಳನ್ನು) ನೀಡಿದರೆ, ಮಾಧ್ಯಮಿಕ ಹಂತದಲ್ಲಿ ಉದಾಹರಣೆಗಳ ಮೂಲಕ ಪರಿಭಾಷೆಗಳನ್ನು ಪರಿಚಯಿಸುವ ಪ್ರಯತ್ನ ಮಾಡಲಾಗಿದೆ. ಆದರೆ ಪ್ರೌಢಶಾಲಾ ಹಂತದಲ್ಲಿ ಉದಾಹರಣೆಗಳ ಮೂಲಕ ಪರಿಭಾಷೆಗಳನ್ನು, ಪರಿಭಾಷೆಗಳ ಮೂಲಕ ಉದಾಹರಣೆಗಳನ್ನು ಪರಿಚಯಿಸುವ ವಿಧಾನವನ್ನು ಅಳವಡಿಸಲಾಗಿದೆ.

ಉದಾಹರಣೆ

೧. ಮಾದರಿಯಂತೆ ಬಿಟ್ಟ ಸ್ಥಳ ತುಂಬಿ – ಓದಿ

**ಅವನು : ಓಡಿದನು : : ಅವರು : ಓಡಿದರು.**

೧. ಬಳಪ : ದೊರಕಿತು : : ಬಳಪಗಳು ...............

೨. ಹುಡುಗ : ನಡೆದನು : : ಹುಡುಗರು ...............

೨. ಕೊಟ್ಟಿರುವ ರೂಪಗಳನ್ನು ಗಮನಿಸಿ – ಸ್ಪಷ್ಟವಾಗಿ ಓದಿ

| **ಕ್ರಿಯಾಪದ** | – | **ಅರ್ಥ** | **ನಾಮಪದ** | – | **ಅರ್ಥ** |
|---|---|---|---|---|---|
| ಅರಸು | – | ಹುಡುಕು | ಅರಸು | – | ರಾಜ |
| ಕುಡಿ | – | ಕುಡಿಯುವಿಕೆ | ಕುಡಿ | – | ಚಿಗುರು |

೩. ಮಾದರಿಯಂತೆ ನಿಷೇಧ ರೂಪಗಳನ್ನು ಬರೆಯಿರಿ

**ಮಾದರಿ :** ಹೇಳು – ಹೇಳನು

೧. ಸುಡು – ____________

೨. ಉಗುಳು – ____________

೩. ಕುಣಿ – ____________

೪. ಹಾಡು – ____________

೪. ಕೊಟ್ಟಿರುವ ಸಂಖ್ಯಾಪದಗಳನ್ನು ಗಮನಿಸಿ

ಒಂದು, ಎರಡು, ಹತ್ತು, ನೂರು, ಸಾವಿರ, ಲಕ್ಷ, ಕೋಟಿ ಇತ್ಯಾದಿ ಪದಗಳು ಸಂಖ್ಯೆಗಳನ್ನು ಸೂಚಿಸುತ್ತವೆ. ಹೀಗೆ ಸಂಖ್ಯೆಗಳನ್ನು ಹೇಳುವ ಪದಗಳನ್ನು 'ಸಂಖ್ಯಾವಾಚಕ' ಗಳೆಂದು ಕರೆಯುತ್ತಾರೆ.

ಒಂದು + ಕಟ್ಟು = ಒಗ್ಗಟ್ಟು

ಎರಡು + ಕೆಲ = ಇಕ್ಕೆಲ

ಅಷ್ಟ + ದಿಕ್ಪಾಲಕರು = ಅಷ್ಟದಿಕ್ಪಾಲಕರು

ಪಂಚ + ಇಂದ್ರಿಯ = ಪಂಚೇಂದ್ರಿಯ

ಸಮಾಸ ರಚನೆಯಲ್ಲಿ ಪೂರ್ವಪದ **ಸಂಖ್ಯಾವಾಚಕವಾಗಿದ್ದು** ಉತ್ತರಪದ **ನಾಮವಾಚಕವಾಗಿದ್ದು** ಅವೆರಡೂ ಸೇರಿ ಆಗುವ ಸಮಾಸವೆ **ದ್ವಿಗುಸಮಾಸ.**

೫. ಒಂದೇ ಜಾತಿಯ ವರ್ಣಗಳು ಪರಸ್ಪರ ಪರವಾದಾಗ ಅದೇ ವರ್ಣವು ದೀರ್ಘವಾದರೆ ಅದು **ಸವರ್ಣದೀರ್ಘಸಂಧಿ** ಎನಿಸುವುದು.

ಉದಾಹರಣೆ

ದೇವ + ಆಲಯ = ದೇವಾಲಯ (ಅ + ಆ = ಆ)

ರವಿ + ಇಂದ್ರ = ರವೀಂದ್ರ (ಇ + ಇ = ಈ)

ಬಹು + ಊರ್ಜಿತ = ಬಹೂರ್ಜಿತ (ಉ + ಊ = ಊ)

## ಪ್ರಸ್ತುತ ಅಧ್ಯಯನವು ಈ ಕೆಳಕಂಡ ಉದ್ದೇಶಗಳನ್ನು ಹೊಂದಿದೆ

೧. ಪಠ್ಯಪುಸ್ತಕದ ಕೊನೆಯಲ್ಲಿ ನೀಡಿರುವ 'ಪದಕೋಶ' ಮಕ್ಕಳಿಗೆ ಪದಕೋಶದ ಜ್ಞಾನವನ್ನು ಹೆಚ್ಚಿಸುವ ಸಾಮರ್ಥ್ಯವನ್ನು ಹೊಂದಿದೆ ಎಂಬುದು ಶಿಕ್ಷಣದ ಆಶಯ. ಆದರೆ ಇಡೀ ಪಠ್ಯಪುಸ್ತಕಗಳಲ್ಲಿ ಪದಕೋಶವನ್ನು ಕಲಿಕೆಯ ಭಾಗವಾಗಿ ಮಾಡಿಲ್ಲ. ಈ ರೀತಿ ಕೊನೆಯಲ್ಲಿ ನೀಡಿರುವ ಪದಕೋಶದ ಉದ್ದೇಶವನ್ನು ತಿಳಿಯುವುದಾಗಿದೆ. ಪ್ರಮುಖವಾದ ಗುರಿ ಪದಸಂಪತ್ತನ್ನು ಬೆಳೆಸುವುದಾಗಿದೆ. ಉದಾಹರಣೆಗೆ: ಪದಬಗೆಗಳಾದ ಸಮಾನಾರ್ಥಕ ಪದಗಳು, ನಾನಾರ್ಥಕ ಪದಗಳು, ಅನುಕರಣ

ಪದಗಳು, ಜೋಡು ಪದಗಳು, ವಿರುದ್ಧ ಪದಗಳು, ದ್ವಿರುಕ್ತಿ ಪದಗಳು, ಗೂಢಾರ್ಥ ಪದಗಳು (ನುಡಿಗಟ್ಟುಗಳು), ಗ್ರಾಂಥಿಕ ಪದಗಳು, ಗುಂಪಿಗೆ ಸೇರದ ಪದಗಳು ಇತ್ಯಾದಿಗಳನ್ನು ಕಲಿಸುವುದರ ಉದ್ದೇಶ ಪದಸಂಪತ್ತನ್ನು ಬೆಳೆಸುವುದಾಗಿದೆ. ಈ ರೀತಿ ಕಲಿತ ಪದಕೋಶದ ನೆರವಿನಿಂದ ಹೊಸ ಪದರಚನೆಯನ್ನು ಮಾಡಲು ಅಭ್ಯಾಸದ ಮೂಲಕ ಅನುವುಮಾಡಿಕೊಡಲಾಗಿದೆ. ಇದರ ಜೊತೆಗೆ ಮಕ್ಕಳು ಕಲಿತ ಹೊಸ ಹೊಸ ಪದಗಳನ್ನು ದಿನವೂ ಹಲವು ಹೊಸ ಸನ್ನಿವೇಷಗಳಲ್ಲಿ ಬಳಸುವಂತೆ ತರಬೇತಿ ನೀಡಬೇಕಾಗಿದೆ. ಈ ತರಬೇತಿಯಲ್ಲಿ ಅನೇಕ ಭಾಷಾ ಚಟುವಟಿಕೆಗಳಲ್ಲಿ ತೊಡಗಿಸಿಕೊಳ್ಳುವಂತೆ ಮಾಡಬೇಕಾಗಿದೆ.

ಯಾವುದೇ ಭಾಷೆಯಲ್ಲಾಗಲಿ ಒಂದು ಅರ್ಥವನ್ನು ಸೂಚಿಸುವ ಹಲವು ಪದಗಳು ಚಲಾವಣೆಯಲ್ಲಿರುತ್ತವೆ. ಹಲವಾರು ಸಲ ಒಂದೇ ಅರ್ಥದ ಛಾಯೆಯುಳ್ಳ ಇಂಥ ಪದಗಳು ಸೃಷ್ಟಿಯಾಗಿರುತ್ತವೆ. ಉದಾಹರಣೆಗೆ ಕೆಳಗಿನ ಮಾದರಿ ಪದಬಳ್ಳಿಗಳನ್ನು ಗಮನಿಸಿ.

೧. ಕಣ್ಣು -->ನಯನ -->ನೇತ್ರ -->ಲೋಚನ -->ಅಕ್ಷಿ.

೨. ಬಹಳ -->ಅಪಾರ -->ಹೆಚ್ಚು -->ಹೇರಳ.

೩. ಭಯ -->ಹೆದರಿಕೆ -->ಅಂಜಿಕೆ -->ನಡುಗು -->ಬೆದರಿಕೆ.

೪. ಸಂತೋಷ -->ಆನಂದ -->ಸಂತಸ -->ಉಲ್ಲಾಸ -->ಹಿಗ್ಗು -->ತಣಿ.

ಈ ರೀತಿ ಪದಗಳನ್ನು ಹಿಗ್ಗಿಸುತ್ತಾ ಹೋಗುತ್ತೇವೆ. ಅವುಗಳು ವಿವಿಧ ಅರ್ಥರೂಪದಲ್ಲಿ ಬಳಕೆಯಲ್ಲಿವೆ. ಇದನ್ನೇ ಸಮಾನಾರ್ಥಕ ಪದಬಳ್ಳಿ ಎಂದು ಕರೆಯುವರು. ಇದು ಮಕ್ಕಳ ಭಾಷಾ ಸಂಪತ್ತಿಗೆ ಕಾರಣವಾಗುತ್ತದೆ. ಈ ಮಾದರಿ ಕಲಿಕೆಯಲ್ಲಿ ಕನ್ನಡ ಪದಗಳಿಗೆ ಜಾಗವಿಲ್ಲ. ಅಂದರೆ ಕಲಿಕೆಯಲ್ಲಿ ಸಂಸ್ಕೃತ ಪದಗಳನ್ನು ಶಿಷ್ಟೀಕರಣದ ಹೆಸರಿನಲ್ಲಿ ಕಲಿಸಲಾಗುತ್ತಿದೆ.

೨. ಪಠ್ಯಪುಸ್ತಕದಲ್ಲಿ ಕಲಿಕೆಗೆ ಅವಕಾಶ ಮಾಡಿರುವ ಪದಕೋಶದ ಸಹಾಯದಿಂದ ಹೊಸ ಪದರಚನೆ ಮಾಡುವ ಸಾಮರ್ಥ್ಯವನ್ನು ಬೆಳೆಸುವುದಾಗಿದೆಯೇ ಎಂಬುದನ್ನು ಕುರಿತು ಅಧ್ಯಯನ ಮಾಡಲಾಗಿದೆ. ಭಾಷೆ ಬಳಸುವ ಶ್ರೀಸಾಮಾನ್ಯನಿಗೆ ವ್ಯಾಕರಣದ ಅರಿವು ಅನಗತ್ಯ. ಆದರೆ ಭಾಷೆಯನ್ನು ಬಳಸುವವನಿಗೆ ವ್ಯಾಕರಣ ಪದಕೋಶದ ಅಗತ್ಯವಿದೆ.

೩. ಪ್ರಸ್ತುತ ಅಧ್ಯಯನದಲ್ಲಿ 'ಕನ್ನಡ ಶಾಲಾ ಪಠ್ಯಗಳ ವ್ಯಾಕರಣ : ಅಧ್ಯಯನ' (ಒಂದರಿಂದ ಹತ್ತನೆ ತರಗತಿವರೆಗೆ) ವಿಷಯ ಕುರಿತು ಚರ್ಚೆಮಾಡುವಲ್ಲಿ ಚಾರಿತ್ರಿಕವಾಗಿ ಕನ್ನಡ ಪಠ್ಯಗಳ ವ್ಯಾಕರಣಾಂಶಗಳನ್ನು ಯಾವ ಸ್ವರೂಪದಲ್ಲಿ ಅಳವಡಿಸಲಾಗಿದೆ ಎಂಬುದನ್ನು ಚರ್ಚೆಮಾಡುವ ಉದ್ದೇಶವನ್ನು ಹೊಂದಿದೆ.

೪. ಸಮಕಾಲೀನ ಸಂದರ್ಭದಲ್ಲಿ ಬೋಧನೆ ಮಾಡುತ್ತಿರುವ ವ್ಯಾಕರಣ ಕನ್ನಡ ಬಳಕೆಯ ನೆರವಿಗೆ ಬರುತ್ತದೆಯೇ? ಎಂಬ ಪ್ರಶ್ನೆಯನ್ನು ಹಾಕಿಕೊಳ್ಳಲಾಗಿದೆ. ಅಂದರೆ ನಮ್ಮ ಶಾಲಾ ಶಿಕ್ಷಣದ ವಿವಿಧ ಹಂತಗಳಲ್ಲಿ ನಾವು ಕಲಿತ ವ್ಯಾಕರಣವು ಮುಂದೆ ನಮಗೆ ನೆರವಾಗುವುದಿಲ್ಲ ಎಂಬುದಕ್ಕೆ ಹಲವಾರು ನಿದರ್ಶನಗಳಿವೆ. ಹೊಸ ಪದಗಳನ್ನು ರಚಿಸುವಾಗ ವ್ಯಾಕರಣದ ಪರಿಭಾಷೆಯ ನಿಯಮಗಳನ್ನು ನಾವು ಗಣನೆಗೆ ತೆಗೆದುಕೊಳ್ಳುವುದೇ ಇಲ್ಲ. ದೈನಂದಿನ ಪತ್ರಿಕೆಗಳಲ್ಲಿ ಬಳಸುವ ಹೊಸ ಪದಗಳನ್ನು ಗಮನಿಸಿ. ಕೆಂಡೋತ್ಸವ, ಕಾವ್ಯೋತ್ಸವ, ಅಪರಾಧೀಕರಣ, ಬಿಲ್ಲಾಸುರ, ಶಾಸಕೋದ್ಯಮ, ಸಾಹಸೋದ್ಯಮ, ತರಕಾಸುರ, ಪಂಥಾಹ್ವಾನ, ಶಬ್ದಾವಳಿ, ಪದೋನ್ನತಿ ಇತ್ಯಾದಿ. ಈ ರಚನೆಗಳನ್ನು ನಾವು ತಪ್ಪು ರಚನೆಗಳೆಂದು ಹೇಳುತ್ತೇವೆ. ಆದರೆ ಇಂತಹ ನುಡಿಗಳನ್ನು ರಚಿಸಿ ಬಳಸುವವರಿಗೆ (ಪತ್ರಿಕೆ, ದೂರದರ್ಶನ) ಅವರು ಕಲಿತ ವ್ಯಾಕರಣ ಏಕೆ ನೆರವಾಗಲಿಲ್ಲ? ಅಥವಾ ಅವರು ವ್ಯಾಕರಣವನ್ನು ಸರಿಯಾಗಿ ತಿಳಿದಿರಲಿಲ್ಲವೆಂದು ಭಾವಿಸಬೇಕೆ? ಇಂತಹ ರಚನೆಗಳು ಏಕೆ ಮತ್ತು ಹೇಗೆ ರೂಪಗೊಳ್ಳುತ್ತವೆ ಎಂಬುದನ್ನು ವಿವರಿಸುವ ಮಾದರಿಯ ಸ್ವರೂಪವನ್ನು ತಿಳಿಸುವುದಾಗಿದೆ.

೫. ಈಗ ಶಾಲೆಗಳಲ್ಲಿ ಕಲಿಸುತ್ತಿರುವ ವ್ಯಾಕರಣ ನಿಜವಾಗಿಯು ಕನ್ನಡದ ಸ್ವರೂಪವನ್ನು ವಿವರಿಸುತ್ತಿಲ್ಲ ಎಂಬ ಅಭಿಪ್ರಾಯವಿದೆ. ಇದೊಂದು ಪ್ರಶ್ನೆಯನ್ನಾಗಿ ರೂಪಿಸಿಕೊಂಡು ಪ್ರಶ್ನೆಗೆ ಉತ್ತರವನ್ನು ಕಂಡುಕೊಳ್ಳುವ ಪ್ರಯತ್ನವನ್ನು ಮಾಡಲಾಗಿದೆ.

೬. ಕಲಿಕೆಯ ವ್ಯಾಕರಣ ಹೊಸ ಸಂದರ್ಭದ ಸಮಸ್ಯೆಗಳನ್ನು ಎದುರಿಸುವಲ್ಲಿ ಅದರ ಪಾತ್ರ ಏನು? ಎಂಬುದನ್ನು ಕುರಿತು ಅಧ್ಯಯನ ಮಾಡಲಾಗಿದೆ.

೭. ಕನ್ನಡ ಮನೆಮಾತುಳ್ಳ ಮಗು ಶಾಲೆಗೆ ಬರುವ ಪೂರ್ವದಲ್ಲಿಯೇ ಕನ್ನಡ ವ್ಯಾಕರಣವನ್ನು ತಿಳಿದಿರುತ್ತದೆ. ಅಂದರೆ ವ್ಯಾಕರಣ ನಿಯಮಗಳು ಮಗುವಿನಲ್ಲಿ ಅಂತಸ್ಥವಾಗಿರುತ್ತವೆ. ನಿಯಮಗಳೇನು ಎಂದು ತಿಳಿದಿರುವುದಿಲ್ಲ. ಆದರೂ ಮಗು ವ್ಯಾಕರಣಬದ್ಧವಾಗಿಯೇ ಕನ್ನಡವನ್ನು ಬಳಸುತ್ತದೆ. ಆದರೆ ತರಗತಿಯಲ್ಲಿ ಮಗುವಿಗೆ ವ್ಯಾಕರಣ ತಿಳಿದಿಲ್ಲ ಎಂದು ಭಾವಿಸಿ ವ್ಯಾಕರಣವನ್ನು ಕಲಿಸುತ್ತೇವೆ ಎಂದು

ವ್ಯಾಖ್ಯಾನಿಸಲಾಗುತ್ತದೆ. ನಿಯಮಬದ್ಧವಾಗಿ ಕಲಿತಿಲ್ಲ ಎಂದು ವಿವರಿಸುವ ಉದ್ದೇಶವನ್ನು ಹೊಂದಿದೆ.

## ಪ್ರಸ್ತುತ ಅಧ್ಯಯನದ ವ್ಯಾಪ್ತಿ, ಮಿತಿ ಮತ್ತು ವೈಧಾನಿಕತೆ

ಪ್ರಸ್ತುತ ಅಧ್ಯಯನಕ್ಕೆ ಆಕರಗಳನ್ನು ಹತ್ತೊಂಬತ್ತನೆಯ ಶತಮಾನದ ಆರಂಭದಲ್ಲಿದ್ದ ಶಾಲಾ ಕನ್ನಡ ಭಾಷಾ ಪಠ್ಯಪುಸ್ತಕಗಳನ್ನು, ಪರಾಮರ್ಶನ ಶಾಲಾ ವ್ಯಾಕರಣಗಳನ್ನು, ನಮ್ಮ ರಾಜ್ಯ ಸರಕಾರ ಒಂದನೆಯ ತರಗತಿಯಿಂದ ಹತ್ತನೆ ತರಗತಿವರೆಗಿನ ಕನ್ನಡ ಪಠ್ಯವಿಷಯಗಳಲ್ಲಿನ ವ್ಯಾಕರಣ (ಶಾಲಾವ್ಯಾಕರಣ) ವನ್ನು ಮತ್ತು ಆಧುನಿಕ ವಿದ್ವಾಂಸರ ವ್ಯಾಕರಣ ಕೃತಿಗಳನ್ನು ಅನುಲಕ್ಷಿಸಿ ಶಾಲಾ ವ್ಯಾಕರಣವನ್ನು ಅಧ್ಯಯನ ಮಾಡಲಾಗಿದೆ. ಹಾಗೂ ಶಾಲಾ ವ್ಯಾಕರಣದ ಬಗ್ಗೆ ಪ್ರಶ್ನಾವಳಿಗಳನ್ನು ರಚಿಸಿ ಆಧುನಿಕ ವಿದ್ವಾಂಸರನ್ನು ಸಂದರ್ಶಿಸಿ ಶಾಲಾ ವ್ಯಾಕರಣದ ಉದ್ದೇಶಗಳು ಅದರ ಮಹತ್ವ, ನಿಲುವುಗಳಿಗೆ ಕಾರಣಗಳನ್ನು ದಾಖಲಿಸಲಾಗಿದೆ. ಶಾಲಾ ವ್ಯಾಕರಣದ ವಿಶ್ಲೇಷಣೆಯ ವಿವಿಧ ಹಂತದ ಮಿತಿಗಳನ್ನು ಗುರುತಿಸಲಾಗಿದೆ. ಕನ್ನಡ ಭಾಷೆಯನ್ನು ಕಲಿಸುವ ಪಠ್ಯಗಳಲ್ಲಿನ ವ್ಯಾಕರಣ ಸ್ವರೂಪವನ್ನು ಕುರಿತು ಮಾತ್ರ ಪ್ರಸ್ತುತ ಅಧ್ಯಯನದಲ್ಲಿ ಚರ್ಚೆಮಾಡಲಾಗಿದೆ. ಹಾಗಾಗಿ ಇದು ಅಧ್ಯಯನದ ವ್ಯಾಪ್ತಿಯು ಹೌದು ಮಿತಿಯು ಹೌದು. ಪ್ರಸ್ತುತ ಅಧ್ಯಯನವನ್ನು ಮಾಡುವುದಕ್ಕೆ ವಿಶ್ಲೇಷಣಾ ಅಧ್ಯಯನ ಮಾದರಿ ಮತ್ತು ತೌಲನಿಕ ಅಧ್ಯಯನ ಮಾದರಿಯನ್ನು ಬಳಸಿಕೊಳ್ಳಲಾಗಿದೆ.

ಅಧ್ಯಾಯ – ಎರಡು

# ಕನ್ನಡ ಶಾಲಾ ಪಠ್ಯಗಳಲ್ಲಿನ ವ್ಯಾಕರಣ : ಅಧ್ಯಯನ ಸಮೀಕ್ಷೆ

ಪ್ರಸ್ತುತ ಅಧ್ಯಾಯದಲ್ಲಿ ಪ್ರಸ್ತುತ ಸಂಶೋಧನೆಗೆ ಸಂಬಂಧಿಸಿದಂತೆ ಬಂದಿರುವ ಕೃತಿಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಆ ಕೃತಿಗಳ ಮಿತಿಗಳನ್ನು ಗುರುತಿಸುತ್ತ ಪ್ರಸ್ತುತ ಸಂಶೋಧನೆ ವಿಷಯಕ್ಕೆ ಹೇಗೆ ಮುಖ್ಯವಾಗುತ್ತದೆ ಅಥವಾ ಮುಖ್ಯವಾಗುವುದಿಲ್ಲ ಎಂಬುದನ್ನು ಗುರುತಿಸಲಾಗಿದೆ.

ಚಾರಿತ್ರಿಕವಾಗಿ ಕನ್ನಡ ವ್ಯಾಕರಣವನ್ನು ಅಧ್ಯಯನ ಮಾಡಿದಾಗ ಹಲವು ಮಾದರಿಗಳಲ್ಲಿ ಅಳವಡಿಸಿರುವುದನ್ನು ಗಮನಿಸಬಹುದಾಗಿದೆ. ವ್ಯಾಕರಣಗಳ ಅಧ್ಯಯನ ಸ್ವರೂಪದ ಆಧಾರದ ಮೇಲೆ ಅಧ್ಯಯನದ ಅನುಕೂಲಕ್ಕಾಗಿ ಎರಡು ಭಾಗಗಳಾಗಿ ವರ್ಗೀಕರಿಸಲಾಗಿದೆ. ಮೊದಲನೆಯ ಕಾಲಘಟ್ಟದಲ್ಲಿ ಕನ್ನಡ ವ್ಯಾಕರಣವನ್ನು ಕುರಿತು ಆಗಿರುವ ಅಧ್ಯಯನಗಳು ಸಂಸ್ಕೃತ ಮಾದರಿಯನ್ನು ಅನುಸರಿಸಿ ಬಂದಿರುವಂತವುಗಳು.

### ೨. ೧. ಸಮಗ್ರವಾಗಿ 'ವ್ಯಾಕರಣವನ್ನೇ' ಕುರಿತು ಚರ್ಚೆಮಾಡಿರುವ ಕೃತಿಗಳು

೧೯೦೫ರಲ್ಲಿ ಪಂಜೆಮಂಗೇಶರಾಯರು ತಮ್ಮ 'ಕನ್ನಡ ಮೂಲವ್ಯಾಕರಣ' ಎಂಬ ವ್ಯಾಕರಣ ಕೃತಿಯನ್ನು ಮಂಗಳೂರಿನ ಬಾಸೆಲ್ ಮಿಷನ್ನಿನವರಿಂದ ಮೊದಲ ಬಾರಿಗೆ ಪ್ರಕಟಿಸಿದರು. ಪ್ರೈಮರಿ ಶಾಲೆಯ ಮಕ್ಕಳಿಗಾಗಿಯೇ ಬರೆದ ಈ ಕೃತಿಯಲ್ಲಿ ವಾಕ್ಯ, ನಾಮಪದಗಳು, ಕ್ರಿಯಾಪದಗಳು, ವಿಶೇಷಣಗಳು ಹೀಗೆ ಒಟ್ಟು ಮುವತ್ತೊಂದು ಪಾಠಗಳಿವೆ. ಇಲ್ಲಿ ಹಲವಾರು ವ್ಯಾಕರಣಾಂಶಗಳನ್ನು ನವೀನ ಪದ್ಧತಿಯಲ್ಲಿ ವಿಶದವಾಗಿ ವಿವರಿಸಲಾಗಿದೆ. ಮೊದಲು ಸಾಮಾನ್ಯ ಉದಾಹರಣೆಗಳನ್ನು ಅನಂತರ ಅವುಗಳಲ್ಲಿ ಕಂಡುಬರುವ ವೈಲಕ್ಷಣಗಳನ್ನು, ನಂತರ ಪ್ರಶ್ನೆಗಳನ್ನು ಸೂಕ್ತವಾದ ಕ್ರಮದಲ್ಲಿ ವಿವರಿಸಲಾಗಿದೆ. ವ್ಯಾಕರಣಾಂಶಗಳ ನಿರೂಪಣೆ ಸರಳವೂ, ಸ್ಪಷ್ಟವೂ, ನಿರ್ಧಿಷ್ಟವೂ ಆಗಿದ್ದು, ಅವುಗಳಿಗೆ ಕೊಟ್ಟಿರುವ ಉದಾಹರಣೆಗಳು ಮತ್ತು ಪ್ರಶ್ನೆಗಳು ಓದುಗರಿಗೆ ಕ್ಲಿಷ್ಟತೆಯನ್ನುಂಟುಮಾಡದೆ, ಸುಲಭವಾದ ಗ್ರಹಿಕೆಗೆ ಅನುವುಮಾಡಿಕೊಡುತ್ತವೆ.

ಪಂಜೆಯವರ ಈ ಕೃತಿಯಲ್ಲಿ 'ವಾಕ್ಯವೂ ಪದವೂ' ಎಂಬುದು ಮೊದಲನೆಯ ಪಾಠ. ವಾಕ್ಯದ ಭಾಗಗಳಾಗಿ ಬೇರೆ ಬೇರೆ ಪದವರ್ಗಗಳನ್ನು ಗುರುತಿಸಿ ವ್ಯಾಖ್ಯಾನಿಸಿರುವುದು ಕಂಡುಬರುತ್ತದೆ. ಈ ಕ್ರಮವು ಭಾಷೆಯಲ್ಲಿ ಅರ್ಥಪೂರ್ಣ ಘಟಕವೆಂಬ ಪ್ರಜ್ಞೆಯನ್ನು ಸ್ಪಷ್ಟವಾಗಿ ಬಿಂಬಿಸುತ್ತದೆ. ಅಕ್ಷರಮಾಲೆ, ಸಂಧಿಗಳು,

ಸಮಾಸಗಳು ಇತ್ಯಾದಿ ಈ ಮಾಮೂಲಿಯ ಸಾಂಪ್ರದಾಯಿಕ ಕ್ರಮದ ಬದಲಾಗಿ ಕಾರಕಗಳಿಂದ ತಮ್ಮ ವಿವೇಚನೆಯನ್ನು ಆರಂಭಿಸಿರುವುದು ಕಂಡುಬರುತ್ತದೆ.

ಪಂಜೆಯವರು ಈ ಕೃತಿಯಲ್ಲಿ ಬೋಧನಾ ಕ್ರಮಕ್ಕೆ ಹೆಚ್ಚಿನ ಪ್ರಾಮುಖ್ಯತೆ ಕೊಟ್ಟಿರುವುದು ಕಂಡುಬರುತ್ತದೆ. ಕಲಿಕಾರ್ಥಿಗಳ ಅಧ್ಯಯನದ ಅನುಕೂಲಕ್ಕಾಗಿ ಅನುಗಮನ ವಿಧಾನವನ್ನು ಅನುಸರಿಸಲಾಗಿದೆ. ಅಂದರೆ ಮೊದಲು ಉದಾಹರಣೆಗಳನ್ನು ಹೇಳಿ, ಆಮೇಲೆ ನಿಯಮಗಳನ್ನು ಸೂತ್ರರೂಪವಾಗಿ ಹೇಳುವುದು ಈ ಕೃತಿಯಲ್ಲಿ ಕಂಡುಬರುತ್ತದೆ.

ಸಾಮಾನ್ಯವಾಗಿ ವ್ಯಾಕರಣ ಪುಸ್ತಕದಲ್ಲಿ ಮೊದಲಿಗೆ ವ್ಯಾಖ್ಯೆಯನ್ನು ಹೇಳಿ ಆಮೇಲೆ ಉದಾಹರಣೆಗಳನ್ನು ಕೊಡುವ ಪರಿಪಾಠವು ಹಿಂದೆ ಏಕೆ? ಇಂದು ಬಳಕೆಯಲ್ಲಿದೆ. ಇದರಿಂದಾಗಿಯೇ ಮಕ್ಕಳಿಗೆ ವ್ಯಾಕರಣವು ಕಬ್ಬಿಣದ ಕಡಲೆಯಾಗಿ ಪರಿಣಮಿಸುತ್ತದೆ? ನಿಗಮ ಪದ್ಧತಿಯೇ ಕ್ಲಿಷ್ಟವೆಂಬುದು ಪಂಜೆಯವರ ನಿಲುವಾಗಿದೆ. ಹೀಗಾಗಿ ಶಿಕ್ಷಕ ವೃತ್ತಿಯನ್ನು ನೆಚ್ಚಿಕೊಂಡು ಬಂದ ಪಂಜೆಯವರು ಮಕ್ಕಳ ಮನಸ್ಸನ್ನು ಸರಿಯಾಗಿ ಅರ್ಥಮಾಡಿಕೊಂಡವರಾದ್ದರಿಂದ ಮಕ್ಕಳಿಗೆ ಸುಲಭವಾಗುವಂತೆ ಮತ್ತು ಅವರ ಮನಕ್ಕೆ ಒಗ್ಗುವಂತೆ ಮೊದಲಿಗೆ ವಸ್ತು, ಆಮೇಲೆ ಅದರ ಹೆಸರಿನ ಉಚ್ಚಾರ, ಅನಂತರ ಶಬ್ದ ಮತ್ತು ಕೊನೆಯಲ್ಲಿ ಅಕ್ಷರಜ್ಞಾನ. ಹೀಗೆ ವ್ಯಾಕರಣಾಂಶಗಳನ್ನು ವಿವರಿಸಿದ್ದಾರೆ.

೧೯ನೆ ಶತಮಾನದಲ್ಲಿ ವ್ಯಾಕರಣ ಕಲಿಕೆ ಸೂತ್ರರೂಪದ ಹಳೆಗನ್ನಡದ ಸಾಂಪ್ರದಾಯಿಕವಾದ ವ್ಯಾಕರಣ ಪದ್ಧತಿಯನ್ನು ಮುಂದುವರಿಸಿಕೊಂಡು ಹೋಗಲಾಗುತ್ತಿದ್ದರೂ ಪಂಜೆಯವರು ಸಾಂಪ್ರದಾಯಿಕ ವ್ಯಾಕರಣವನ್ನು ಬಿಟ್ಟು ನವೀನ ರೀತಿಯಲ್ಲಿ ವ್ಯಾಕರಣ ರಚಿಸಿರುವುದು ಕಂಡುಬರುತ್ತದೆ.

ಉದಾಹರಣೆ

೧. ಹಕ್ಕಿ ಹಾರುತ್ತದೆ.

೨. ರಂಗನು ಗಿಡವನ್ನು ಚೂರಿಯಿಂದ ಕಡಿದನು.

ಮೇಲಿನವುಗಳಲ್ಲಿ ಮೊದಲನೆಯದನ್ನು ಓದು. ಹಕ್ಕಿ ಹಾರುತ್ತದೆ. ಓದುವಾಗ ಹಕ್ಕಿ ಎಂದು ಇಷ್ಟೇ ಹೇಳಿಬಿಟ್ಟರೆ, ನಮ್ಮ ಮನಸ್ಸಿನಲ್ಲಿ ಇದ್ದದ್ದನ್ನು ಪೂರ್ಣವಾಗಿ ಹೇಳಲಿಲ್ಲ ಎಂಬಂತೆ ತೋರುತ್ತದೆ. ಪೂರ್ಣವಾಗಿ ಹೇಳಬೇಕಾದರೆ ಹಾರುತ್ತದೆ, ಹಾಡುವುದು, ಕೊತುಕೊಂಡಿದೆ, ಕೂಗುತ್ತಿದೆ ಮುಂತಾದ ಮಾತುಗಳನ್ನು ಸೇರಿಸಬೇಕಾಗುವುದು. ಹಾಗೆ

ಸೇರಿಸಿದರೆ, ಹಕ್ಕಿ ಹಾರುತ್ತದೆ, ಹಕ್ಕಿ ಹಾಡುವುದು, ಹಕ್ಕಿ ಗೂಡಿನಲ್ಲಿ ಕೂತುಕೊಂಡಿದೆ, ಹಕ್ಕಿ ಕೂಗುತ್ತಿದೆ ಎಂಬೀ ವಾಕ್ಯಗಳಾಗುವುವು. ರಂಗನು ಗಿಡವನ್ನು ಎಂದು ಹೇಳಿ ನಿಲ್ಲಿಸಿಬಿಟ್ಟರೆ, ಸಂಪೂರ್ಣವಾಗಿ ವಾಕ್ಯಗಳಾಗುವುದಿಲ್ಲ. ವಾಕ್ಯವಾಗಬೇಕಾದರೆ, ಕಡಿದನು, ಕೊಯ್ಯುತ್ತಾನೆ ಎಂಬ ಮಾತುಗಳನ್ನು ಸೇರಿಸಬೇಕಾಗುವುದು.

ಹಕ್ಕಿ ಹಾರುತ್ತದೆ. ಎಂಬ ವಾಕ್ಯದಲ್ಲಿ ಹಕ್ಕಿ ಎಂಬ ಪದವನ್ನು ಮಾತ್ರವೆ ಹೇಳಿದರೆ ಆಲೋಚನೆಯು ಸಂಪೂರ್ಣವಾಗುವುದಿಲ್ಲ. ಹಾರುತ್ತದೆ, ಹಾಡುವುದು, ಕೂತುಕೊಂಡಿದೆ ಎಂಬ ಯಾವುದಾದರೊಂದು ರೂಪವನ್ನು ಸೇರಿಸಬೇಕು. ಹಕ್ಕಿ ಹಾರುತ್ತದೆ ಎಂಬ ಪದಗಳಿಂದ ಆಲೋಚನೆಯು ಸಂಪೂರ್ಣವಾಗುವುದು. ಅಂದರೆ ಒಂದು ವಾಕ್ಯವಾಗುತ್ತದೆ. ಹೀಗೆ ಸಂಪೂರ್ಣವಾದ ಆಲೋಚನೆಯನ್ನು ಹೇಳುವ ಪದಗಳ ಸಮೂಹಕ್ಕೆ ವಾಕ್ಯವೆಂದು ಹೆಸರು. ಒಂದು ವಾಕ್ಯವಾಗಬೇಕಾದರೆ, ಅದರಲ್ಲಿ ಹೆಚ್ಚು ಪದಗಳು ಇರಲೇಬೇಕೆಂಬ ಅವಶ್ಯಕವಿಲ್ಲ. ಆಲೋಚನೆಯು ಮಾತ್ರ ಸಂಪೂರ್ಣವಾಗಿರಬೇಕೆಂದು ಪಂಜೆಯವರು ಅಭಿಪ್ರಾಯಪಡುತ್ತಾರೆ.

ಪ್ರೈಮರಿ ಶಾಲೆಯ ಮಕ್ಕಳಿಗಾಗಿಯೇ ರಚಿಸಿದ ಈ ಕೃತಿಯಲ್ಲಿ ಸಂಧಿಗಳು, ಸಮಾಸಗಳು, ಛಂದಸ್ಸು, ಅಲಂಕಾರಗಳನ್ನು ಎಲ್ಲಿಯೂ ವಿವರಿಸಿಲ್ಲ. ಪ್ರಾಥಮಿಕ ಹಂತದ ಮಕ್ಕಳು ಭಾಷಾ ಪ್ರಭುತ್ವ ಪಡೆಯಲು ಅಗತ್ಯವಾದಂತಹ ವ್ಯಾಕರಣಾಂಶಗಳನ್ನು ಕುರಿತು ವಿವರಿಸುವ ಕೃತಿಯಾಗಿದೆ. ಅನುಗಮನ ಪದ್ಧತಿಯಲ್ಲಿ ವ್ಯಾಕರಣಾಂಶಗಳನ್ನು ಹೇಳುವುದರಿಂದ ಮಕ್ಕಳಿಗೆ ವ್ಯಾಕರಣ ಕ್ಲಿಷ್ಟವೆಂಬ ಸಂಗತಿಯನ್ನು ದೂರಮಾಡುವಂತಹ ಉದ್ದೇಶವು ಇದರಲ್ಲಿ ಅಡಗಿದೆ. ಕನ್ನಡ/ಸಂಸ್ಕೃತ ಸಂಧಿಗಳು, ಸಮಾಸಗಳು, ತತ್ಸಮ ಇತ್ಯಾದಿ ವ್ಯಾಕರಣಾಂಶಗಳನ್ನು ಇದೇ ಉದ್ದೇಶಕ್ಕಾಗಿ ಕೈಬಿಡಲಾಗಿದೆ ಎನಿಸುತ್ತದೆ. ಆಧುನಿಕ ಭಾಷಾವಿದ್ವಾಂಸರಾದ ಡಿ.ಎನ್.ಶಂಕರಭಟ್ ಅವರು ಸಂಸ್ಕೃತ ಸಂಧಿಗಳನ್ನು ಕನ್ನಡ ಪಠ್ಯಗಳಿಂದ ಕೈಬಿಡಬೇಕೆಂಬ ವಾದವನ್ನು ಪಂಜೆಮಂಗೇಶರಾವ್ ಅವರು ತಮ್ಮ ವ್ಯಾಕರಣ ಕೃತಿಯಲ್ಲಿ ಕೈಬಿಟ್ಟಿರುವುದನ್ನು ನಾವಿಲ್ಲಿ ಗಮನಿಸಬಹುದು. ಭಾಷೆಯೊಳಗಡೆ ಇರುವಂತಹ ನಿಯಮಗಳನ್ನು ಕುರಿತು ತಿಳಿಯುವುದೇ ಆ ಭಾಷೆಯ ವ್ಯಾಕರಣವಾಗುತ್ತದೆ. ಈ ಹಿನ್ನೆಲೆಯಲ್ಲಿ ಪಂಜೆಯವರು ೧೯ನೆಯ ಶತಮಾನದ ಆರಂಭದಲ್ಲಿ ಸಾಂಪ್ರದಾಯಿಕ ವ್ಯಾಕರಣಕ್ಕೆ ಬದಲಾಗಿ ಕಲಿಕಾರ್ಥಿಗಳಿಗೆ ಭಾಷೆಯನ್ನು ಅರ್ಥಮಾಡಿಕೊಳ್ಳಲು ಅನುಕೂಲವಾಗುವಂತೆ ರಚಿಸಿದ 'ಕನ್ನಡ ಮೂಲವ್ಯಾಕರಣ' ಕೃತಿಯು ನಮಗೆ ಸಾಕ್ಷಿಯಾಗಿದೆ.

೧೯೧೬ರಲ್ಲಿ ಟೆಕ್ಸ್ಟ್‌ಬುಕ್ ಕಮಿಟಿ ಅಧ್ಯಕ್ಷರಾದ ಮೇ॥ ಭಾಭಾ ಎಮ್.ಎ. ಅವರು ಕೇಳಿಕೊಂಡ ಮೇರೆಗೆ ಸಮಿತಿಯ ಸದಸ್ಯರಾದ ಬಿ.ಮಲ್ಲಪ್ಪನವರು, ಎಸ್.ಜಿ.ನರಸಿಂಹಾಚಾರ್ಯರು, ಆರ್.ನರಸಿಂಹಾಚಾರ್ಯರು ಸೇರಿ 'ಶಬ್ದಾದರ್ಶ' ಎಂಬ ಹೊಸಗನ್ನಡ ವ್ಯಾಕರಣ ಕೃತಿಯೊಂದನ್ನು ರಚಿಸಿದ್ದಾರೆ. ಈ ಕೃತಿಯಲ್ಲಿ ಅಕ್ಷರಪ್ರಕರಣ, ಸಂಧಿಪ್ರಕರಣ, ನಾಮಪದಪ್ರಕರಣ, ಕ್ರಿಯಾಪದಪ್ರಕರಣ, ಕೃದಂತಪ್ರಕರಣ, ತದ್ಧಿತಾಂತಪ್ರಕರಣ, ಸಮಾಸಪ್ರಕರಣ ಅವ್ಯಯಪ್ರಕರಣ, ತದ್ಭವಪ್ರಕರಣ ಮತ್ತು ಪ್ರಯೋಗಪ್ರಕರಣ ಎಂಬ ಹತ್ತು ಪ್ರಕರಣಗಳನ್ನೊಳಗೊಂಡಿದೆ. ಈ ಹತ್ತು ಪ್ರಕರಣಗಳಲ್ಲಿ ಕನ್ನಡ ಭಾಷೆಯ ರಚನೆಯನ್ನು ನಿಗಮನ ಪದ್ಧತಿಯಲ್ಲಿ ವಿವರಿಸಲಾಗಿದೆ.

ಮೊದಲನೆಯ ಅಕ್ಷರಪ್ರಕರಣದಲ್ಲಿ ಭಾಷೆಯಲ್ಲಿರುವ ಪದಗಳೆಲ್ಲಾ ಅಕ್ಷರಗಳಿಂದ ಕೂಡಿರುತ್ತವೆ. ಕನ್ನಡದಲ್ಲಿ ನಲ್ವತ್ತೆಂಟು ಅಕ್ಷರಗಳೆಂದು ಗುರುತಿಸಿ ಅವುಗಳನ್ನು ಸಾಂಪ್ರದಾಯಿಕವಾಗಿ ವರ್ಗೀಕರಿಸಲಾಗಿದೆ. ಕನ್ನಡದಲ್ಲಿ ಅನೇಕ ಸಂಸ್ಕೃತ ಶಬ್ದಗಳು ಬೆರೆತಿರುತ್ತವೆ. ಅವುಗಳ ಮೂಲಕ ಕೆಲವು ಸಂಸ್ಕೃತ ಅಕ್ಷರಗಳು ಕನ್ನಡಕ್ಕೆ ಸೇರಿವೆ. ಅವುಗಳೆಂದರೆ ಹ್ರಸ್ವ ಸ್ವರದಲ್ಲಿ 'ಋ', ವ್ಯಂಜನಗಳಲ್ಲಿ ಮಹಾಪ್ರಾಣಗಳು, 'ಶ', 'ಕ್ಷ' ಎಂಬ ಅಕ್ಷರಗಳು, ವಿಸರ್ಗವೂ ಸಂಸ್ಕೃತ ಶಬ್ದಗಳ ಮೂಲಕ ಕನ್ನಡಕ್ಕೆ ಸೇರಿರುತ್ತವೆ. ಹೀಗೆ ಅಕ್ಷರಗಳೆಲ್ಲಾ ಮಾತನಾಡುವಾಗ ಕಿವಿಯಿಂದ ಕೇಳತಕ್ಕವುಗಳಾಗಿವೆ. ಅವುಗಳನ್ನು ಕಣ್ಣಿಗೆ ತೋರಿಸಿ ಓದುವಂತೆ ಮಾಡುವುದಕ್ಕಾಗಿ ಉಪಯೋಗಿಸುವ ಚಿಹ್ನೆಗಳಿಗೆ ಲಿಪಿಯೆಂದು ಹೆಸರು. ಈ ಚಿಹ್ನೆಗಳನ್ನು ಅಕ್ಷರವೆಂದು ವಿವರಿಸಲಾಗಿದೆ.

ಕನ್ನಡದ ಲಿಪಿಯಲ್ಲಿ ಒಂದು ಅಕ್ಷರಕ್ಕೆ ಎರಡು ಚಿಹ್ನೆಗಳಿರುವುದುಂಟು. ಆ ಲಿಪಿಭೇದಗಳನ್ನೆಲ್ಲಾ ಒಟ್ಟು ಸೇರಿಸಿ ಅಕ್ಷರ ಸಂಖ್ಯೆಯನ್ನು ಮಾಡಬಾರದು. ಲಿಪಿಭೇದಕ್ಕೆ ಉದಾರಹರಣೆಗೆ : ಉರಿ, ಇರು. ಇಲ್ಲಿ 'ಉ' ಕಾರ 'ಇ' ಕಾರಗಳಿಗೆ ಎರಡೆರಡು ಚಿಹ್ನೆಗಳಿದ್ದರೂ, ಅಕ್ಷರಗಳು ನಾಲ್ಕಲ್ಲ, ಎರಡೆ. ಹಾಗೆಯೇ ವ್ಯಂಜನಗಳಲ್ಲಿಯೂ ಉಂಟು. ಉದಾಹರಣೆಗೆ : ಹತ್ತು, ತನ್ನ, ನಮ್ಮ, ಅಯ್ಯ, ದರ್ಪ, ಧರ್ಮ ಇತ್ಯಾದಿ. ಹೀಗೆ ನಮ್ಮ ಕನ್ನಡ ಭಾಷೆಯು ಸಂಸ್ಕೃತದ ಅನೇಕ ಅಕ್ಷರಗಳನ್ನು ಎರವಲು ಪಡೆದುಕೊಂಡು ಬಹು ಹಿಂದಿನಿಂದಲೂ ಇಂದಿನವರೆಗೂ ಜೀವಂತವಾಗಿ ಉಳಿದಿದೆ. ಅಂದರೆ ಒಂದು ಭಾಷೆಯು ವಿರಾಜಮಾನವಾಗಿ ಬೆಳೆಯಬೇಕಾದರೆ ಅನ್ಯ ಭಾಷೆಯ ಪ್ರಭಾವ ಅಥವಾ ಸಹಕಾರದಿಂದ ಬೆಳೆಯುತ್ತದೆ. ಈ ಕಾರಣದಿಂದ ಮೇಲೆ ಸೂಚಿಸಿದ ಕೆಲವು ಅಕ್ಷರಗಳನ್ನು ಕನ್ನಡದಲ್ಲಿ ಓದಬೇಕಾಗಿದೆ.

ಸಂಧಿಪ್ರಕರಣದಲ್ಲಿ ಕನ್ನಡ ಮತ್ತು ಸಂಸ್ಕೃತ ಸಂಧಿಗಳನ್ನು ವಿವರಿಸಲಾಗಿದೆ. ನಾಮಪ್ರಕರಣದಲ್ಲಿ ನಾಮಪದಗಳು, ವಸ್ತುವಾಚಕ, ಭಾವನಾಮ, ಗುಣವಾಚಕ, ಸಂಖ್ಯಾವಾಚಕ, ಸರ್ವನಾಮ ಎಂದು ಐದು ವಿಧಗಳನ್ನು ಉದಾಹರಣೆಗಳೊಂದಿಗೆ ವಿವರಿಸಲಾಗಿದೆ. ಕ್ರಿಯಾಪದ ಪ್ರಕರಣದಲ್ಲಿ ಧಾತುಗಳಿಗೆ ಆಖ್ಯಾತ ಪ್ರತ್ಯಯಗಳು ಸೇರಿದರೆ ಕ್ರಿಯಾಪದಗಳಾಗುತ್ತವೆ. ಈ ಕ್ರಿಯಾಪದಗಳಲ್ಲಿ ವರ್ತಮಾನರೂಪ, ಭೂತರೂಪ, ಭವಿಷ್ಯದ್ರೂಪ, ಸಂಭಾವನಾರೂಪ, ವಿಧ್ಯಾದಿರೂಪ, ನಿಷೇಧರೂಪ ಎಂಬ ಆರು ರೂಪಗಳನ್ನು ವಿವರಿಸಿದರೆ, ಕೃದಂತ ಪ್ರಕರಣದಲ್ಲಿ ಧಾತುವಿನ ಮೇಲೆ ಕೃತ್‌ಪ್ರತ್ಯಯಗಳು ಸೇರಿದರೆ ಕೃದಂತ ಶಬ್ದಗಳಾಗುತ್ತವೆ. ಅವುಗಳಲ್ಲಿ ಕೃದಂತನಾಮ, ಕೃದಂತ ಭಾವನಾಮ, ಕೃದಂತಾವ್ಯಯ ಎಂಬ ಮೂರು ವಿಧಗಳನ್ನು ವಿವರಿಸಲಾಗಿದೆ. ನಾಮಪದಗಳ ಮೇಲೆ ಬೇರೆ ಬೇರೆ ಅರ್ಥಗಳಲ್ಲಿ ತದ್ಧಿತ ಪ್ರತ್ಯಯಗಳು ಸೇರಿದರೆ ತದ್ಧಿತಾಂತಗಳಾಗುವ ವಿವರಗಳನ್ನು ತದ್ಧಿತ ಪ್ರಕರಣದಲ್ಲಿ ವಿವರಿಸಲಾಗಿದೆ. ಸಮಾಸ ಪ್ರಕರಣದಲ್ಲಿ ಕನ್ನಡದಲ್ಲಿ ತತ್ಪುರುಷ, ಕರ್ಮಧಾರೆಯ, ಅಂಶಿ, ದ್ವಂದ್ವ, ಬಹುವ್ರೀಹಿ ಎಂದು ಐದು ವಿಧಗಳೆಂದು ವಿವರಿಸಿ, ಅರಿಸಮಾಸ, ದ್ವಿಗುಸಮಾಸ, ಅವ್ಯಯೀಭಾವ ಸಮಾಸ, ಗಮಕ ಸಮಾಸಗಳು ಸಂಸ್ಕೃತ ಸಮಾಸಗಳೆಂದು ಉಲ್ಲೇಖಿಸಲಾಗಿದೆ. ಅವ್ಯಯ ಪ್ರಕರಣದಲ್ಲಿ ನಾಮಪದ ಕ್ರಿಯಾಪದಗಳಂತೆ ರೂಪಭೇದವನ್ನು ಹೊಂದದೆ ಏಕರೂಪವಾಗಿರುವ ಶಬ್ದಗಳಿಗೆ ಅವ್ಯಯಗಳೆಂದು ಹೇಳಿ, ಅವುಗಳ ಪ್ರಭೇದಗಳನ್ನು ವಿವರಿಸಲಾಗಿದೆ. ಹಳೆಗನ್ನಡದಿಂದ ಶಬ್ದಗಳು ಹೊಸಗನ್ನಡಕ್ಕೆ ಬರುವಾಗ ಆಗುವ ವ್ಯತ್ಯಾಸಗಳನ್ನು ತದ್ಭವ ಪ್ರಕರಣದಲ್ಲಿ ವಿವರಿಸಲಾಗಿದೆ. ವಚನ, ಲಿಂಗ, ವಿಭಕ್ತಿ ವಿಚಾರಗಳನ್ನು ಪ್ರಯೋಗ ಪ್ರಕರಣದಲ್ಲಿ ವಿವರಿಸಲಾಗಿದೆ. ಒಟ್ಟಂದದಲ್ಲಿ ಕನ್ನಡ ಭಾಷಾರಚನೆಗೆ ಸಂಬಂಧಿಸಿದ ನಿಯಮಗಳನ್ನು ವ್ಯಾಕರಣದ ಪರಿಭಾಷೆಗಳಡಿಯಲ್ಲಿ ವಿವರಿಸಿರುವುದು ಈ ವ್ಯಾಕರಣ ಹೊತ್ತಿಗೆಯ ಪರಮ ಧೋರಣೆಯಾಗಿದೆ.

ಮುಂಬಯಿ ಇಲಾಖೆಯೊಳಗಿನ ಸರಕಾರಿ ವಿದ್ಯಾಖಾತೆಯಿಂದ **'ಕನ್ನಡ ಲಘುವ್ಯಾಕರಣ'** ಎಂಬ ಕೃತಿಯನ್ನು ವೆಂಕಟ ರಂಗೋಕಟ್ಟಿಯವರು ೧೯೨೮ರಲ್ಲಿ ರಚಿಸಿದ್ದಾರೆ. ಈ ಕೃತಿಯಲ್ಲಿ ವರ್ಣವಿವರ, ಶಬ್ದವಿವರ, ವಾಕ್ಯರಚನೆ ಮತ್ತು ವಾಕ್ಯಗಳ ವ್ಯಾಕರಣ ಹೇಳುವ ರೀತಿ ಎಂಬ ನಾಲ್ಕು ಅಧ್ಯಾಯಗಳನ್ನು ೧೪೫ ಸೂತ್ರಗಳಲ್ಲಿ ದೃಷ್ಟಾಂತಗಳೊಂದಿಗೆ ವಿವರಿಸಲಾಗಿದೆ. ಭಾಷಿಕ ರಚನೆಯ ನಿಯಮಗಳನ್ನು ಉರುಹೊಡೆಸುವುದಕ್ಕಿಂತ ಅರ್ಥಸಹಿತ ಅವುಗಳನ್ನು ಕಲಿಕಾರ್ಥಿಗಳ ಮನಸ್ಸಿನಲ್ಲಿ

ಬೇರೂರುವಂತೆ ಮಾಡುವುದರಿಂದ ವ್ಯಾಕರಣವನ್ನು ಸುಲಭವಾಗಿ ಕಲಿಸಬಹುದು ಎಂಬುದನ್ನು ಲೇಖಕರು ಕೃತಿಯ ಪ್ರಸ್ತಾವನೆಯಲ್ಲಿ ಹೇಳಿದ್ದಾರೆ.

ಹೆಚ್ಚು ಜನ ಶಿಕ್ಷಕರು ಸಂಸ್ಕೃತ ವರ್ಗದ ಭಾಷೆಗಳ ವ್ಯಾಕರಣದ ಕಡೆಗೆ ಕನ್ನಡ ವ್ಯಾಕರಣವನ್ನು ಎಳೆಯಲಿಕ್ಕೆ ಯತ್ನಿಸುತ್ತಾರೆ. ಆದರೆ ಕನ್ನಡವು ಸಂಸ್ಕೃತದಿಂದ ಹುಟ್ಟಿದ್ದಲ್ಲ, ದ್ರಾವಿಡ ವರ್ಗದ್ದಿರುತ್ತದೆ. ಸಂಸ್ಕೃತ ವರ್ಗದ ಭಾಷೆಗಳಿಗೂ ಕನ್ನಡಕ್ಕೂ ಇರುವ ಭಿನ್ನತೆ ವರ್ಣಮಾಲೆಯಿಂದಲೇ ಆರಂಭವಾಗುತ್ತದೆ. ಸಂಸ್ಕೃತದ ಕೆಲವು ಸ್ವರಗಳೂ, ವ್ಯಂಜನಗಳೂ ಕನ್ನಡದಲ್ಲಿ ಇಲ್ಲ. ಸಂಸ್ಕೃತದಲ್ಲಿ ಇಲ್ಲದಂತ ಸ್ವರವ್ಯಂಜನಗಳು ಕನ್ನಡದಲ್ಲಿ ಇರುತ್ತವೆ. ಸಂಸ್ಕೃತ ಸಂಧಿಗಳ ನಿಯಮಗಳು ಬೇರೆ, ಕನ್ನಡ ಸಂಧಿಗಳ ನಿಯಮಗಳು ಬೇರೆ. ಕನ್ನಡ ವಿಭಕ್ತಿ ಪ್ರತ್ಯಯಗಳು ಸಂಸ್ಕೃತ ವಿಭಕ್ತಿ ಪ್ರತ್ಯಯಗಳೊಂದಿಗೆ ಹೊಂದುವುದಿಲ್ಲ. ಶರೀರ ಸಂಬಂಧ ನಾಮಗಳ ವಿಭಕ್ತಿ ಪ್ರತ್ಯಯಗಳು ಕನ್ನಡದಲ್ಲಿ ವೈಲಕ್ಷಣವನ್ನು ತೋರಿಸುವ ಸಂಸ್ಕೃತ ವರ್ಗದ ಭಾಷೆಗಳಲ್ಲಿ ತೋರಿಸುವುದಿಲ್ಲ. ಸಂಸ್ಕೃತ ವರ್ಗದ ಭಾಷೆಗಳಲ್ಲಿ ನಿರ್ಜೀವ ಪದಾರ್ಥಗಳಿಗೆ ಮೂರು ಲಿಂಗಗಳು ಬರುತ್ತವೆ. ಕನ್ನಡದಲ್ಲಿ ಹತ್ತುವುದಿಲ್ಲ. ವಿಶೇಷಣಗಳ ಮುಂದೆ 'ಅವ' ಎಂಬ ಸರ್ವನಾಮವು ಪ್ರತ್ಯಯದಂತೆ ಹತ್ತಿ ನಾಮರೂಪಗಳಾಗುತ್ತವೆ.

ಉದಾಹರಣೆ

ಅಂಥ + ಅವ = ಅಂಥವ

ಇಂಥ + ಅವ = ಇಂಥವ

ಎಂಥ + ಅವ = ಎಂಥವ ಇತ್ಯಾದಿ.

ಅಂಥವ, ಇಂಥವ ಮತ್ತು ಎಂಥವ ಎಂಬ ವಿಶೇಷಣಗಳು ನಾಮಪದಗಳ ಪ್ರಕಾರವನ್ನು ತೋರಿಸುತ್ತವೆ. ಎಂಥ ಎಂಬ ಪ್ರಕಾರಾರ್ಥವೂ, ಎಷ್ಟು ಎಂಬ ಪರಿಮಾಣವಾಚಕವೂ ಪ್ರಶ್ನೆ ಕೇಳುವಾಗ ಪ್ರಯೋಗಿಸಲ್ಪಡುತ್ತದೆ. ಹಾಗೆ ಸಂಸ್ಕೃತ ವರ್ಗದ ಭಾಷೆಗಳಲ್ಲಿ ಆಗುವುದಿಲ್ಲ. ಕನ್ನಡ ಸರ್ವನಾಮಗಳು ಸಂಸ್ಕೃತ ವರ್ಗದ ಸರ್ವನಾಮಗಳಿಗೆ ಹೊಂದುವುದಿಲ್ಲ. ಕನ್ನಡದ ಸಮಾಸಗಳು ಲುಕ್‌ಸಮಾಸ, ಅಲುಕ್‌ಸಮಾಸ, ಗಮಕಸಮಾಸ, ಕ್ರಿಯಾಸಮಾಸ ಎಂದು ಹೇಳಿ ಉಳಿದವುಗಳು ಸಂಸ್ಕೃತ ಸಮಾಸಗಳೆಂದು ಹೇಳಲಾಗಿದೆ. ಇದರಂತೆ ಕನ್ನಡ ಕ್ರಿಯಾಪದಗಳಿಗೆ ಉತ್ತಮ, ಮಧ್ಯಮ ಪುರುಷಗಳಲ್ಲಿ ಲಿಂಗಗಳು ಹತ್ತುವುದಿಲ್ಲ. ಸಂಸ್ಕೃತ ವರ್ಗದ ಭಾಷೆಗಳಲ್ಲಿ ಹತ್ತುತ್ತವೆ. ಈ ವಿಧವಾದ ಕನ್ನಡ ಮತ್ತು ಸಂಸ್ಕೃತ ವ್ಯಾಕರಣಗಳಲ್ಲಿ ಕಂಡುಬರುವ ಭಿನ್ನತೆಯನ್ನು ಕುರಿತು

ಈ ಕೃತಿಯಲ್ಲಿ ಹೇಳಲಾಗಿದೆ. ಇಂದು ಡಿ.ಎನ್.ಶಂಕರಭಟ್ ಅವರು ನಾಮಪದಗಳು ಮತ್ತು ಗುಣಪದಗಳು ಬೇರೆ ಬೇರೆ ಎಂದು ಹೇಳುವ ಅಭಿಪ್ರಾಯವನ್ನು ೧೯೨೮ರಲ್ಲಿ ಪ್ರಕಟವಾದ ಈ ಕೃತಿಯಲ್ಲಿ ಚರ್ಚೆಮಾಡಿರುವುದನ್ನು ನಾವು ಗಮನಿಸಬಹುದು.

೧೯೪೬ರಲ್ಲಿ ಸರಕಾರದಿಂದ ಪಠ್ಯಪುಸ್ತಕ (ಟೆಸ್ಟ್‌ಬುಕ್) ಎಂದು ಮಂಜೂರಾದ ಪ್ರಾಥಮಿಕ ಶಾಲೆಗಳಿಗಾಗಿ **'ಕನ್ನಡ ನುಡಿಗನ್ನಡಿ ಭಾಗ–೧'**, ಮಾಧ್ಯಮಿಕ ಶಾಲೆಗಳಿಗಾಗಿ **'ಕನ್ನಡ ನುಡಿಗನ್ನಡಿ ಭಾಗ–೨'**, ಪ್ರೌಢಶಾಲೆಗಳಿಗಾಗಿಯೇ **'ಕನ್ನಡ ನುಡಿಗನ್ನಡಿ ಭಾಗ–೩'**. ಈ ಮೂರು ಕೃತಿಗಳನ್ನು ಮ.ಪ್ರ.ಪೂಜಾರವರು ರಚಿಸಿದ್ದಾರೆ. ಉತ್ತರ ಕರ್ನಾಟಕದ ಪ್ರಾಂತ್ಯದಲ್ಲಿ ವಿಶೇಷವಾಗಿ ಪ್ರಚಾರದಲ್ಲಿದ್ದ ಅಂಗೀಕೃತ ಶಾಲಾ ವ್ಯಾಕರಣಗಳಲ್ಲಿ ಇವು ಮೂರು ಪ್ರಮುಖವಾಗಿವೆ. ನುಡಿಗನ್ನಡಿ ಒಂದರಲ್ಲಿ ಒಟ್ಟು ಇಪ್ಪತ್ತು ಅಧ್ಯಾಯಗಳಿದ್ದರೆ, ನುಡಿಗನ್ನಡಿ ಎರಡರಲ್ಲಿ ಹನ್ನೊಂದು ಅಧ್ಯಾಯಗಳಿದ್ದರೆ, ನುಡಿಗನ್ನಡಿ ಮೂರರಲ್ಲಿ ಹದಿನಾರು ಅಧ್ಯಾಯಗಳಿವೆ. ಕನ್ನಡ ನುಡಿಯ ಭಾಷಿಕ ರಚನೆಯ ನಿಯಮಗಳನ್ನು ತಿಳಿಸಲು ಮೂರು ಭಾಗಗಳಲ್ಲಿ ಮಕ್ಕಳ ವಯೋಮಾನಕ್ಕನುಗುಣವಾಗಿ ವ್ಯಾಕರಣಾಂಶಗಳನ್ನು ದೃಷ್ಟಾಂತಗಳೊಂದಿಗೆ ಸರಳವಾಗಿ ವಿಶ್ಲೇಷಣೆ ಮಾಡಿರುವುದು ಕಂಡುಬರುತ್ತದೆ. ಲೇಖಕರೇ ಹೇಳುವಂತೆ ವ್ಯಾಕರಣವನ್ನು ಕಲಿಸುವುದಕ್ಕೆ ಏಕೀಕರಣ (ಅನುಗಮನ) ಪದ್ಧತಿಯು ಉತ್ತಮವೆಂಬುದು ಸರ್ವಸಮ್ಮತವಾದುದು. ಏಕೀಕರಣ ಪದ್ಧತಿಯೆಂದರೆ ಹಲವು ಉದಾಹರಣೆಗಳಿಂದ ಒಂದು ಸಾಮಾನ್ಯ ನಿಯಮವನ್ನು ಕಟ್ಟುವುದು. ಈ ಪದ್ಧತಿಯಿಂದ ಕಲಿಕಾರ್ಥಿಗಳು ಒಂದು ನಿಯಮವನ್ನು ಕಟ್ಟಿದ ತರುವಾಯ ಅವರು ಅದನ್ನು ಬೇರೆ ಹಲವು ಉದಾಹರಣೆಗಳಲ್ಲಿ ಅನ್ವಯಿಸಿ ನೋಡಲು ಅನುಕೂಲವಾಗುವಂತೆ ಈ ಮೂರು ಕೃತಿಗಳನ್ನು ರಚಿಸಿದ್ದಾರೆ. ಭಾಗ–೧, ಮತ್ತು ಭಾಗ–೨ ರಲ್ಲಿ ಪ್ರತಿ ಅಧ್ಯಾಯದ ಕೊನೆಗೆ ಅಭ್ಯಾಸವನ್ನು ಕೊಡಲಾಗಿದೆ. ಈ ಅಭ್ಯಾಸಗಳಲ್ಲಿ ಅಧ್ಯಾಯಕ್ಕೆ ಪೂರಕವಾದ ಪ್ರಶ್ನಾವಳಿಗಳಿದ್ದರೆ, ಭಾಗ–೨ ರಲ್ಲಿ ಯಾವುದೇ ಅಭ್ಯಾಸಗಳು ಕಂಡುಬರುವುದಿಲ್ಲ.

ಏಕೀಕರಣ ಪದ್ಧತಿಯನ್ನು ಅನುಗಮನ ಪದ್ಧತಿಯಂತಲೂ, ಅನ್ವಯಿಕ ಪದ್ಧತಿಯಂತಲೂ, ಅನುಮಾನಪದ್ಧತಿಯಂತಲೂ ಬೇರೆ ಬೇರೆ ಹೆಸರುಗಳಿಂದ ಕರೆಯಲಾಗುತ್ತದೆ. ಬೋಧಿಸಬೇಕಾಗಿರುವ ವ್ಯಾಕರಣಾಂಶದ ಬಗೆಗೆ ಉದಾಹರಣೆಗಳನ್ನು ಮೊದಲು ಸಂಗ್ರಹಿಸಿ, ಉದಾಹರಣೆಗಳನ್ನು ಮಕ್ಕಳಿಗೆ ಪರಿಚಯಿಸಲಾಗುವುದು. ನಂತರ ಉದಾಹರಣೆಗಳಲ್ಲಿ ಕಂಡುಬರುವ ಸಾಮಾನ್ಯ ಗುಣಲಕ್ಷಣಗಳಿಗೆ ಅನುಗುಣವಾದ ಒಂದು

ನಿಯಮ ಅಥವಾ ಸೂತ್ರವನ್ನು ರೂಪಿಸಲಾಗುತ್ತದೆ. ಅಂದರೆ ಇಲ್ಲಿನ ಬೋಧನೆಯು ದೃಷ್ಟಾಂತಗಳ ಮೂಲಕ ಸೂತ್ರದ ಕಡೆಗೆ ಸಾಗುವುದು ಕಂಡುಬರುತ್ತದೆ. ಈ ಅನ್ವಯಿಕ ಪದ್ಧತಿಯಲ್ಲಿ ವ್ಯಾಕರಣ ಬೋಧನೆಯು ಮೂರು ಹಂತಗಳಲ್ಲಿ ಮುಂದುವರಿಯುತ್ತದೆ.

೧. ಉದಾಹರಣೆಗಳ ಸಂಗ್ರಹ.

೨. ಉದಾಹರಣೆಗಳ ಪರಿಶೀಲನೆ.

೩. ಸೂತ್ರದ ರಚನೆ/ನಿಯಮದ ರಚನೆ.

ಅನುಗಮನ ಪದ್ಧತಿಯ ವ್ಯಾಕರಣ ಬೋಧನೆಯನ್ನು ಈ ಕೆಳಗಿನ ದೃಷ್ಟಾಂತದಿಂದ ಅರ್ಥೈಸಬಹುದು. ಬೋಧನಾ ವ್ಯಾಕರಣಾಂಶ : **ದ್ವಿಗು ಸಮಾಸ**

**೧. ಉದಾಹರಣೆಗಳ ಸಂಗ್ರಹ :**

೧. ಒಂದು + ಕಟ್ಟು = ಒಗ್ಗಟ್ಟು

೨. ಎರಡು + ಬಗೆ = ಇಬ್ಬಗೆ

೩. ಮೂರು + ಮಡಿ = ಮುಮ್ಮಡಿ

**೨. ಉದಾಹರಣೆಗಳ ಪರಿಶೀಲನೆ :** ಸಂಗ್ರಹಿಸಿದ ಉದಾಹರಣೆಗಳಲ್ಲಿಯ ಪ್ರತಿಯೊಂದು ಪದದ ರಚನೆ ಮತ್ತು ಗುಣವನ್ನು ವಿಶ್ಲೇಷಿಸಿ ನೋಡುವುದಾಗಿದೆ.

**೩. ಸೂತ್ರ ನಿರೂಪಣೆ :** ಸೂತ್ರವನ್ನು ರೂಪಿಸುವುದು. ಸಂಗ್ರಹಿಸಿರುವ ಉದಾಹರಣೆಗಳಲ್ಲಿ ಕಂಡುಬರುವ ಪ್ರಧಾನ ಗುಣವನ್ನು ಆಧರಿಸಿ, ಇದನ್ನು ಪ್ರತಿನಿಧಿಸುವಂತೆ ಒಂದು ಸೂತ್ರವನ್ನು ರಚಿಸಲಾಗುತ್ತದೆ. ಸೂತ್ರ : ಮೇಲಿನ ಉದಾಹರಣೆಗಳಲ್ಲಿ ಪೂರ್ವಪದವು ಸಂಖ್ಯಾವಾಚಕವಾಗಿದ್ದು ಉತ್ತರಪದದಲ್ಲಿರುವ ನಾಮಪದದೊಡನೆ ಸೇರಿ ಆಗುವ ಸಮಾಸವೇ ದ್ವಿಗು ಸಮಾಸ. ಉದಾಹರಣೆಗಳು ಕೇಂದ್ರವಾಗಿರುವ ಅನ್ವಯಿಕ ಪದ್ಧತಿಯಲ್ಲಿ ವ್ಯಾಕರಣಾಂಶಗಳನ್ನು ಮಕ್ಕಳಿಗೆ ಕಲಿಸುವುದರಿಂದ ಅವರು ಸ್ವಾಭಾವಿಕವಾಗಿ ಆಸಕ್ತಿಯಿಂದ ಕಲಿಯುತ್ತಾರೆ. ಈ ವಿಧಾನದ ಮೂಲಕ ಕಲಿಕೆ ಸರಳತೆಯಿಂದ ಕಠಿಣದ ಕಡೆಗೆ ಸಾಗುತ್ತಿರುವುದು ನಮಗೆ ಕಂಡುಬರುತ್ತದೆ.

ಪ್ರಾಥಮಿಕ ಶಾಲಾ ಹಂತದಲ್ಲಿ ಇಂದು ನಾವು ವ್ಯಾಕರಣಾಂಶಗಳನ್ನು ಎಲ್ಲೂ ಕಲಿಸುವುದಿಲ್ಲ. ಆದರೆ ಸ್ವಾತಂತ್ರ್ಯಪೂರ್ವದಲ್ಲಿ ಈ ಹಂತದ ಮಕ್ಕಳಿಗಾಗಿಯೇ ಪ್ರತ್ಯೇಕವಾದ ವ್ಯಾಕರಣ ಕೃತಿಗಳನ್ನು ಪಠ್ಯಕ್ಕೆ ಹೊರತುಪಡಿಸಿ ಕಲಿಸಲಾಗುತ್ತಿತ್ತು. ಆದರೆ ಇಂದು ನಾವು ಈ ಹಂತದ ಮಕ್ಕಳಿಗೆ ಭಾಷೆಯನ್ನು ಕಲಿಸಲೋಸುಗ ಪಠ್ಯಗಳನ್ನು

ರೂಪಿಸುತ್ತೇವೆ. ಆ ಪಠ್ಯಗಳಲ್ಲಿ ಪರೋಕ್ಷವಾಗಿ ವ್ಯಾಕರಣಾಂಶಗಳು ಅಡಕವಾಗಿರುತ್ತವೆ. ಇಲ್ಲಿ ಭಾಷೆಯೇ ಪ್ರಧಾನವಾಗಿದ್ದು, ವ್ಯಾಕರಣ ಗೌಣವಾಗಿರುತ್ತದೆ. ಏಕೆಂದರೆ ಭಾಷಾ ಕಲಿಕೆಗೆ ವ್ಯಾಕರಣ ತೊಡಕಾಗಬಾರದೆಂಬ ಉದ್ದೇಶದಿಂದ ಪಠ್ಯದಲ್ಲಿ ನೋಡಿ ಕಲಿ, ಮಾಡಿ ಕಲಿ, ಮಾಡಿ ತಿಳಿ, ಮಾದರಿ ನೋಡು ಮುಂತಾದ ಮಾದರಿಗಳ ಹಿನ್ನೆಲೆಯಲ್ಲಿ ಕಲಿಸುವ ವಿಷಯಗಳೆಲ್ಲವೂ ವ್ಯಾಕರಣವನ್ನು ಪರೋಕ್ಷವಾಗಿ ಹೇಳಿಕೊಡುವಂಥವುಗಳು ಆಗಿರುತ್ತವೆ. ಮಕ್ಕಳು ಭಾಷಾ ಕೌಶಲಗಳಾದ ಓದುವುದು, ಬರೆಯುವುದನ್ನು ಒಂದು ಶಿಸ್ತಿನೋಪಾದಿಯಲ್ಲಿ ಕಲಿಸುವ ಉದ್ದೇಶದ ಹಿನ್ನೆಲೆಯಲ್ಲಿ ಪ್ರಾಥಮಿಕ, ಮಾಧ್ಯಮಿಕ ಹಂತಗಳಿಗೆ ಪೂಜಾರವರು ತಮ್ಮ ಎರಡು ಪುಸ್ತಕಗಳಲ್ಲಿ ಸರಳವಾದ ಸಂಭಾಷಣೆಯಿಂದ ಪದಗಳನ್ನು ವಾಕ್ಯಗಳನ್ನು ಬಳಸಿಕೊಂಡು ವ್ಯಾಕರಣಾಂಶಗಳನ್ನು ವಿವರಿಸಿದ್ದಾರೆ.

ಭಾಗ-೧ ಮತ್ತು ಭಾಗ-೨ರಲ್ಲಿ ಕನ್ನಡ ಸಂಧಿಗಳಾದ ಲೋಪ, ಆಗಮ, ಆದೇಶ ಸಂಧಿಗಳೊಂದಿಗೆ ಸ್ವರಸಂಧಿ ಮತ್ತು ವ್ಯಂಜನಸಂಧಿಗಳುಂಟಾಗುವ ವಿವರಗಳನ್ನು ಮಾತ್ರ ವಿವರಿಸಿದ್ದಾರೆ. ಇಂದು ಶಾಲಾ ಹಂತಗಳಲ್ಲಿ ಕ್ಲಿಷ್ಟವೆಂದು ಹೇಳಲಾಗುವ ಸಂಸ್ಕೃತ ಸಂಧಿಗಳ ವಿಚಾರವನ್ನು ಪೂಜಾರವರು ಸ್ವಾತಂತ್ರ್ಯಪೂರ್ವದಲ್ಲಿ ಕೈಬಿಟ್ಟಿರುವ ಸಂಗತಿ ಗಮನಿಸುವಂತಹದ್ದಾಗಿದೆ. ಇಂದು ಡಿ.ಎನ್.ಶಂಕರಭಟ್ಟರು ಸಂಸ್ಕೃತ ವ್ಯಾಕರಣದ ನಿಯಮಗಳು ಕನ್ನಡ ಕಲಿಕೆಗೆ ಕ್ಲಿಷ್ಟತೆಯನ್ನುಂಟುಮಾಡುತ್ತವೆ ಎಂಬ ವಾದವು ಹೊಸದೇನಲ್ಲ ಎಂಬುದನ್ನು ಪೂಜಾರರು ಅಂದೇ ತಮ್ಮ ವ್ಯಾಕರಣ ಕೃತಿಯಲ್ಲಿ ಸಂಸ್ಕೃತ ಸಂಧಿಗಳನ್ನು ಕೈಬಿಟ್ಟಿದ್ದಾರೆಂಬುದು ಸ್ಪಷ್ಟವಾಗಿ ಕಂಡುಬರುತ್ತದೆ. ಮಾಧ್ಯಮಿಕ ಹಂತದಲ್ಲಿ ಮಕ್ಕಳಿಗೆ ಸರಳ ವ್ಯಾಕರಣವನ್ನು ಬೋಧಿಸುವುದು ಉತ್ತಮವೆಂದರಿತ ಪೂಜಾರರು ನುಡಿಗನ್ನಡಿ ಭಾಗ-೨ರಲ್ಲಿ ವ್ಯಾಕರಣದ ಪರಿಭಾಷೆಗಳನ್ನು ಸರಳವಾಗಿ ಪರಿಚಯಿಸಿದ್ದಾರೆ. ಇದರಲ್ಲಿ ಕನ್ನಡ ಸಂಧಿಗಳನ್ನು ಮತ್ತು ಸಂಸ್ಕೃತ ಸಂಧಿಗಳನ್ನು ಪ್ರತ್ಯೇಕ ಅಧ್ಯಾಯಗಳಲ್ಲಿ ಪರಿಚಯಿಸಿದ್ದಾರೆ. ಅಂತೆಯೇ ಸಮಾಸ, ತದ್ಧಿತಾಂತ, ಅವ್ಯಯ, ವಾಕ್ಯವಿಭಜನೆ, ತದ್ಭವ ಇತ್ಯಾದಿ ಪರಿಭಾಷೆಗಳನ್ನು ಸಂಕ್ಷಿಪ್ತವಾಗಿ ವಿವರಿಸಿದ್ದಾರೆ.

ಪ್ರಾಥಮಿಕ, ಮಾಧ್ಯಮಿಕ ಹಂತಗಳನ್ನು ದಾಟಿ ಪ್ರೌಢಹಂತಕ್ಕೆ ಮಕ್ಕಳು ಬರುವ ಹೊತ್ತಿಗೆ ಭಾಷಾ ಪ್ರಭುತ್ವವನ್ನು ಹೊಂದಿರುತ್ತಾರೆಂಬ ಉದ್ದೇಶದಿಂದ, ಸಾಹಿತ್ಯದ ಪರಿಚಯವೂ, ಗದ್ಯಪದ್ಯ ಅಭ್ಯಾಸ ಮಾಡುವುದರಿಂದ ಈ ಹಂತದಲ್ಲಿ ಶಾಸ್ತ್ರೀಯ ವ್ಯಾಕರಣ ಬೋಧನೆ ಅಗತ್ಯವಿದೆ ಎಂಬುದನ್ನರಿತು ಕನ್ನಡ ನುಡಿಗನ್ನಡಿ ಭಾಗ-೩ನ್ನು ರಚಿಸಿದ್ದಾರೆ. ಈ ಪುಸ್ತಕದಲ್ಲಿ ವ್ಯಾಕರಣ ಪರಿಭಾಷೆಗಳು ಸೂತ್ರರೂಪದಿಂದ ಕೂಡಿವೆ.

ಕನ್ನಡ ಸಂಧಿಗಳೊಂದಿಗೆ ಸಂಸ್ಕೃತ ಸಂಧಿಗಳನ್ನು, ಸಮಾಸಗಳನ್ನು ಅಲಂಕಾರ ಛಂದಸ್ಸುಗಳನ್ನು ವಿವರಿಸಲಾಗಿದೆ. ಪ್ರೌಢಶಾಲಾ ಹಂತದಲ್ಲಿ ಶಾಸ್ತ್ರೀಯ ವ್ಯಾಕರಣದ ಅಗತ್ಯತೆ ಮಕ್ಕಳಿಗೆ ಬೇಕೆಂಬುದು ಪೂಜಾರರ ಅಭಿಪ್ರಾಯವಾಗಿದೆ.

ಶಿಕ್ಷಣದ ಈ ಮೂರು ಹಂತಗಳಲ್ಲಿ ವ್ಯಾಕರಣದ ಪ್ರಾಥಮಿಕ ತಿಳುವಳಿಕೆ ಮಕ್ಕಳಿಗೆ ಲಭ್ಯವಾದರೆ ಅವರು ಕನ್ನಡ ಭಾಷಾ ವಿಷಯದಲ್ಲಿ ಪ್ರಭುತ್ವವನ್ನು ಪಡೆಯುತ್ತಾರೆ. ಶಿಕ್ಷಣದ ಮುಂದಿನ ಹಂತಗಳಲ್ಲಿ ಸ್ವಾವಲಂಬಿಗಳಾಗಿಯೇ ಕಲಿಕೆಯಲ್ಲಿ ಮುಂದುವರೆದು ಪರಿಣತಿಯನ್ನು ಪಡೆಯಲು ಸಾಧ್ಯವಾಗುತ್ತದೆಂಬುದು ಲೇಖಕರ ಅಭಿಪ್ರಾಯವಾಗಿದೆ.

ಒಟ್ಟಿನಲ್ಲಿ ಪೂಜಾರರ ಈ ಮೂರು ಕೃತಿಗಳು ಮಕ್ಕಳ ವಯೋಮಾನಕ್ಕೆ ಅನುಗುಣವಾಗಿ ವ್ಯಾಕರಣಾಂಶಗಳನ್ನು ವಿವರಿಸುತ್ತವೆ. ಅಂದಿನ ಕಾಲಘಟ್ಟದಲ್ಲಿ ಕನ್ನಡ ಪಠ್ಯಗಳ ಜೊತೆಗೆ ಪ್ರತ್ಯೇಕವಾದ ವ್ಯಾಕರಣಾಂಶಗಳನ್ನೊಳಗೊಂಡ ವ್ಯಾಕರಣ ಕೃತಿಗಳನ್ನು ಕಲಿಸಿಕೊಡುತ್ತಿದ್ದರೆಂಬುದಕ್ಕೆ ಇವರ ಕೃತಿಗಳೇ ನಮಗೆ ಸಾಕ್ಷಿ. ವ್ಯಾಕರಣದ ಜೊತೆಗೆ ಛಂದಸ್ಸು ಮತ್ತು ಅಲಂಕಾರಗಳು ಪ್ರೌಢಶಾಲಾ ಹಂತಕ್ಕೆ ಮಾತ್ರ ಸೀಮಿತವಾಗಿದ್ದವೆಂಬುದು ಈ ಕೃತಿಗಳಿಂದ ತಿಳಿದುಬರುತ್ತದೆ.

ಹಳೆಯ ಮೈಸೂರು ಸಂಸ್ಥಾನದ ಸಾರ್ವಜನಿಕ ವಿದ್ಯಾಭ್ಯಾಸ ಇಲಾಖೆ ತನ್ನ ಆಡಳಿತಕ್ಕೆ ಒಳಪಟ್ಟ ಪ್ರಾಥಮಿಕ, ಮಾಧ್ಯಮಿಕ ಮತ್ತು ಪ್ರೌಢ ತರಗತಿಗಳಲ್ಲಿ ಓದುವ ವಿದ್ಯಾರ್ಥಿಗಳ ಉಪಯೋಗಕ್ಕಾಗಿ ಬೇಕಾಗುವ ಕನ್ನಡ ವ್ಯಾಕರಣ ಪುಸ್ತಕಗಳನ್ನು ಸಿದ್ಧಗೊಳಿಸಲು ಒಂದು ಸಮಿತಿಯನ್ನು ನೇಮಿಸಿತು. ಆ ಸಮಿತಿಯ ಸಲಹೆಗಳಿಗೆ ಅನುಗುಣವಾಗಿ ಡಾ.ಎ.ಎನ್.ನರಸಿಂಹಯ್ಯನವರು 'ಕನ್ನಡ ಪ್ರಥಮವ್ಯಾಕರಣ'ವನ್ನು ಪ್ರಾಥಮಿಕ ತರಗತಿಗಳಿಗಾಗಿಯೇ ೧೯೩೮ರಲ್ಲಿ ರಚಿಸಿದರು. ಈ ಕೃತಿಯಲ್ಲಿ ಒಟ್ಟು ಮೂರು ಭಾಗಗಳಿವೆ. ಇವುಗಳಲ್ಲಿ ಕ್ರಮವಾಗಿ ಭಾಗ ಒಂದರಲ್ಲಿ ೧೯ ಪಾಠಗಳು, ಭಾಗ ಎರಡರಲ್ಲಿ ೨೯ ಪಾಠಗಳು, ಭಾಗ ಮೂರರಲ್ಲಿ ೮ ಪಾಠಗಳಿವೆ. ಭಾಷೆಯ ರಚನೆಗೆ ಸಂಬಂಧಿಸಿದಂತೆ ಮಕ್ಕಳು ತಿಳಿಯಬೇಕಾದ ಮುಖ್ಯವಾದ ವ್ಯಾಕರಣಾಂಶಗಳು ಈ ಪಾಠಗಳಲ್ಲಿ ಸರಳವಾಗಿ ಅಡಕವಾಗಿವೆ. ಪ್ರತಿಯೊಂದು ಪಾಠವು ಮೊದಲು ಉದಾಹರಣೆಗಳಿಂದ ಬಳಿಕ ವ್ಯಾಕರಣಾಂಶಗಳು ಸ್ಪಷ್ಟವಾಗುವಂತೆ ವಿವರಣೆಯಿಂದ ಕೊನೆಗೆ ಅದು ವಾಕ್ಯವಿನ್ಯಾಸದಲ್ಲಿ ಮನವರಿಕೆಯಾಗುವಂತೆ ನಿದರ್ಶನಗಳಿಂದ ಕೂಡಿರುತ್ತದೆ. ಪ್ರತಿ ಪಾಠದ ಕೊನೆಯ ಅಭ್ಯಾಸದ ಭಾಗ ಮಕ್ಕಳ ಬುದ್ಧಿಗೆ ಕೆಲಸ ಕೊಡುತ್ತದೆ. ಸ್ವಂತ ವಿವೇಚನೆಯ ಮೂಲಕ ವ್ಯಾಕರಣ ಪ್ರಜ್ಞೆಯನ್ನು ಎಳೆವೆಯಲ್ಲಿಯೇ

ವ್ಯಾಕರಣದ ಮೂಲಾಂಶಗಳು ಖಚಿತವಾಗಿ ತಿಳಿಯುವುದಕ್ಕೆ ಈ ಕ್ರಮ ತುಂಬಾ ಸಹಕಾರಿಯಾಗಿದೆ. ಹಿಂದಿನ ಸಾಂಪ್ರದಾಯಿಕ ವ್ಯಾಕರಣಗಳಲ್ಲಿ ಹೇಳಿರುವಂತೆ ಇಲ್ಲಿ ಪಂಚಮಿ ವಿಭಕ್ತಿ ವಿಚಾರವನ್ನು ಹೇಳಿಲ್ಲ. ಪಂಚಮಿ ವಿಭಕ್ತಿಯ ಕಾರ್ಯವನ್ನು ತಿಳಿಸಲು ಪ್ರತ್ಯೇಕವಾದ ವಿಭಕ್ತಿ ಪ್ರತ್ಯಯವನ್ನು ಬಳಸದೆ ತೃತೀಯ ಸಹಾಯದಿಂದಲೇ ತಿಳಿಸಲಾಗುತ್ತದೆ ಎನ್ನುವ ಗ್ರಹಿಕೆ ಇತ್ತೀಚಿನ ಕಾಲದಲ್ಲಿ ರೂಢಿಗತವಾದದ್ದು. ಹಾಗಾಗಿ ಅದರ ವಿಚಾರವನ್ನು ಇಲ್ಲಿ ಕೈಬಿಡಲಾಗಿದೆ. ಪಂಚಮಿ ವಿಭಕ್ತಿಯ ವಿಚಾರ ಎಂದಿನಿಂದಲೂ ಚರ್ಚೆಯ ವಿಷಯವಾಗಿದ್ದು, ಅದರ ಸ್ವರೂಪ ಏನೇ ಇರಲಿ ಇಲ್ಲಿ ಅದರ ಉಲ್ಲೇಖವಿರಬೇಕಿತ್ತು. ಕನಿಷ್ಟಪಕ್ಷ ಪಂಚಮಿ ಕಾರ್ಯವುಂಟು, ಆ ಕಾರ್ಯಕ್ಕೆ ತೃತೀಯೆಯನ್ನು ಬಳಸಲಾಗುತ್ತದೆ ಎಂದಾದರೂ ಹೇಳಬೇಕಾಗಿತ್ತು. ಹಾಗಲ್ಲವಾದರೆ ಕರಣಾರ್ಥದ ತೃತೀಯೆಗೂ ಆಪಾದನಾರ್ಥದ ಪಂಚಮಿಗೂ ಇರುವ ಪ್ರತ್ಯೇಕತೆಯೇ ತಿಳಿಯದಂತಾಗುತ್ತದೆ. ಅಲ್ಲದೆ ಕಲಿಯುವ ಮಕ್ಕಳು ಚತುರ್ಥಿ ವಿಭಕ್ತಿಯಿದೆ, ಷಷ್ಠೀ ವಿಭಕ್ತಿಯಿದೆ. ನಡುವೆ ಪಂಚಮಿ ವಿಭಕ್ತಿ ಏಕಿಲ್ಲ ಎಂಬುದಾಗಿ ತಮ್ಮ ಶಿಕ್ಷಕರನ್ನೂ, ಪಾಲಕರನ್ನೂ ಪ್ರಶ್ನಿಸುವ ಸಾಧ್ಯತೆಯೂ ಇದೆ.

ಈ ಪುಸ್ತಕದ ಮೂರನೆ ಭಾಗದ ಸಂಧಿ ಪಾಠದಲ್ಲಿ ಕನ್ನಡ ಸಂಧಿಗಳಾದ ಲೋಪ, ಆಗಮ, ಆದೇಶ ಸಂಧಿಗಳನ್ನು ಮಾತ್ರ ವಿವರಿಸಲಾಗಿದೆ. ಸಂಸ್ಕೃತ ಸಂಧಿಗಳ ಪ್ರಸ್ತಾಪ ಎಲ್ಲಿಯೂ ಕಂಡುಬರುವುದಿಲ್ಲ. ಇಲ್ಲೂ ಸಹ ಗಮನಿಸಬೇಕಾದ ಅಂಶವೆಂದರೆ ಡಿ.ಎನ್.ಶಂಕರಭಟ್ಟ ಅವರ ಅಭಿಪ್ರಾಯ ಹೊಸದೇನಲ್ಲ. ಅಂದರೆ ಸಂಸ್ಕೃತ ಸಂಧಿಗಳನ್ನು ಬಹು ಹಿಂದೆಯೇ ಕೈಬಿಟ್ಟಿರುವುದು ಈ ಕೃತಿಯಿಂದ ತಿಳಿದುಬರುತ್ತದೆ. ಸಮಾಸ ಪಾಠದಲ್ಲಿ ತತ್ಪುರುಷ, ಕರ್ಮಧಾರೆಯ, ಬಹುವ್ರೀಹಿ, ದ್ವಂದ್ವ, ಅಂಶಿ, ಕ್ರಿಯಾ ಸಮಾಸಗಳನ್ನು ವಿವರಿಸಿದರೆ ದ್ವಿಗು ಸಮಾಸವನ್ನು ಹೇಳಿಲ್ಲ. ತದ್ಭವಗಳೆಂದು ಕರೆಯದೆ ಅಪಭ್ರಂಶಗಳೆಂದು ಹೇಳಿರುವುದು ಸಾಂಪ್ರದಾಯಿಕ ವ್ಯಾಕರಣಾಂಶವನ್ನು ಉಳಿಸಿಕೊಂಡು ಬಂದಿರುವುದು ಕಂಡುಬರುತ್ತದೆ.

ಮೈಸೂರು ವಿದ್ಯಾಭ್ಯಾಸದ ಇಲಾಖೆಯ ಆಡಳಿತಕ್ಕೆ ಒಳಪಟ್ಟ ಮಾಧ್ಯಮಿಕ ಶಾಲಾ ವಿದ್ಯಾರ್ಥಿಗಳಿಗಾಗಿಯೇ ತೀ.ನಂ.ಶ್ರೀಕಂಠಯ್ಯನವರು 'ಕನ್ನಡ ಮಧ್ಯಮವ್ಯಾಕರಣ' ಎಂಬ ಕೃತಿಯನ್ನು ೧೯೩೯ರಲ್ಲಿ ರಚಿಸಿದರು. ಈ ಕೃತಿಯಲ್ಲಿ ವಾಕ್ಯ–ಪದ–ವರ್ಣ, ಪ್ರಕೃತಿ–ಪ್ರತ್ಯಯ, ವರ್ಣಮಾಲೆ, ಸಂಧಿ ಇತ್ಯಾದಿ ಇಪ್ಪತ್ತೇಳು ಅಧ್ಯಾಯಗಳಿವೆ. ಈ ಕೃತಿಯಲ್ಲಿಯ ವ್ಯಾಕರಣಾಂಶಗಳ ನಿರೂಪಣೆ ಸರಳವೂ, ಸ್ಪಷ್ಟವೂ, ನಿರ್ದಿಷ್ಟವೂ ಆಗಿದೆ.

ಸಾಂಪ್ರದಾಯಿಕ ವ್ಯಾಕರಣಾಂಶಗಳಿಗಿಂತ ಭಿನ್ನವಾಗಿದ್ದು, ವ್ಯಾಕರಣ ಕೇವಲ ಸೂತ್ರಗಳ ಪಟ್ಟಿಯಾಗಬಾರದು. ಅದರಲ್ಲಿ ಸೂತ್ರಕ್ಕಿಂತ ಹೆಚ್ಚಾಗಿ ವಿವರಣೆಯೂ ವಿವರಣೆಗಿಂತ ಹೆಚ್ಚಾಗಿ ಉದಾಹರಣೆಗಳು ಕ್ರಮಬದ್ಧವಾಗಿದ್ದರೆ ಪಾಠ ಓದುವ ವಿದ್ಯಾರ್ಥಿಗೆ ವಿಷಯ ಗ್ರಹಿಸಲು ಸುಲಭವಾಗುತ್ತದೆಂಬುದು ಲೇಖಕರ ಅಭಿಪ್ರಾಯವಾಗಿದೆ. ಉದಾಹರಣೆಗೆ : ಗಂಡಸು, ಹೆಂಗಸು, ಮಗು, ಸೀತೆ, ಲಕ್ಷ್ಮಣ, ಶಂಕರ ಇವೆಲ್ಲವೂ ಮನುಷ್ಯರನ್ನು ಹೇಳುತ್ತವೆ. ರೂಢಿಯಲ್ಲಿ ಎಷ್ಟು ಬಗೆ ಪದಾರ್ಥಗಳಿಗೂ, ವಿಷಯಗಳಿಗೂ ಹೆಸರು ಉಂಟೆಂಬುದು ನಮಗಿಲ್ಲಿ ಗೊತ್ತಾಗುತ್ತದೆ. ಹೀಗೆ ಬಗೆ ಬಗೆಯ ವಿಷಯಗಳ ಹೆಸರನ್ನು ತಿಳಿಸುವ ಪದಕ್ಕೆ ನಾಮವಾಚಕಗಳೆಂದು ಹೇಳಲಾಗಿದೆ. ಇಂತಹ ಶೈಲಿಯಿಂದ ಓದುಗರಿಗೆ ಆಪ್ತತ್ವ ಉಂಟಾಗುತ್ತದೆ. ಅನೇಕ ಉದಾಹರಣೆಗಳಿರುವುದರಿಂದ ನಿಯಮವು ಸುಲಭವಾಗಿ ಅರ್ಥವಾಗುತ್ತದೆ. ಈ ಕೃತಿಯ ಎರಡನೆಯ ಮುಖ್ಯಗುಣವೆಂದರೆ ಹಿಂದಿನ ಶಾಲಾ ವ್ಯಾಕರಣಗಳಲ್ಲಿಲ್ಲದ ಹೆಚ್ಚುವರಿ ವಿವರಗಳನ್ನು ಸೇರಿಸಿರುವುದು. ವಾಕ್ಯಭೇದಗಳನ್ನು ವಿವರಿಸುವ ಅಧ್ಯಾಯದಲ್ಲಿ ಈ ಅಂಶವನ್ನು ಸ್ಪಷ್ಟವಾಗಿ ಕಾಣಬಹುದು. ಇಲ್ಲಿ ವಾಕ್ಯಗಳನ್ನು ವರ್ಗೀಕರಿಸಿರುವ ವಿಧಾನವು ಇಂಗ್ಲಿಷ್ ವ್ಯಾಕರಣಗಳನ್ನು ಅನುಸರಿಸಿದ್ದರೂ ವಿದ್ಯಾರ್ಥಿಗಳಿಗೆ ಕನ್ನಡ ವಾಕ್ಯಗಳ ಒಂದು ಸ್ಥೂಲ ಪರಿಚಯವನ್ನು ನೀಡುತ್ತದೆ.

ಸ್ವಾತಂತ್ರ್ಯಪೂರ್ವದಲ್ಲಿ **'ಕರ್ಣಾಟ ಬಾಲವ್ಯಾಕರಣಂ'** ಎಂಬ ಕೃತಿಯನ್ನು ಕೋಲಾರದ ಪಂಡಿತ ಕೆ.ಆರ್.ನರಸಿಂಹಯ್ಯನವರು ರಚಿಸಿರುವ ಈ ಕೃತಿಯನ್ನು ಮೈಸೂರು ಮಹಾರಾಜರ ಸರಕಾರದಲ್ಲಿಯ ಎಲ್ಲಾ ಹೈಸ್ಕೂಲು ತರಗತಿಗಳಿಗೂ ಪಠ್ಯಪುಸ್ತಕವನ್ನಾಗಿ ನೇಮಿಸಲಾಗಿತ್ತು. ಈ ಕೃತಿಯಲ್ಲಿ ಒಟ್ಟು ೨೩ ಅಧ್ಯಾಯಗಳಿವೆ. ಇದರಲ್ಲಿ ಬರುವ ವ್ಯಾಕರಣ ಸೂತ್ರಗಳು ಸರ್ವಸಾಮಾನ್ಯವಾಗಿದ್ದರೂ ಉದಾಹರಣೆಗಳನ್ನು ಹೊಸಗನ್ನಡ ರೂಪದಲ್ಲಿ ಬರೆದು, ಇವುಗಳ ಜೊತೆಯಲ್ಲಿ ಹಳೆಗನ್ನಡ ಸ್ವರೂಪ ತಿಳಿಸಲೋಸುಗ ವಿಭಕ್ತಿ ಮತ್ತು ಕ್ರಿಯಾ ಪ್ರತ್ಯಯಗಳನ್ನು, ಕ್ರಿಯಾರೂಪಮಾಲೆಯನ್ನು ಉದಾಹರಣೆಗಳೊಂದಿಗೆ ಅಲ್ಲಲ್ಲೆ ವಿವರಿಸಿ, ವಿಶೇಷ ಸಂಗತಿಗಳಿಗೆ ವಿವರವಾಗಿ ಕೆಳಗೆ ಟಿಪ್ಪಣಿ ಕೊಡಲಾಗಿದೆ.

ಆಂಗ್ಲಭಾಷೆಯನ್ನೋದುವ ವಿದ್ಯಾರ್ಥಿಗಳಿಗೆ ಕನ್ನಡ ಭಾಷೆಯು ಸುಲಭವಾಗಿ ಪರಿಚಯವಾಗಲೆಂದು ವಾಕ್ಯ ವಿಭಜನೆ, ರೂಪನಿಷ್ಪತ್ತಿ, ಛಂದೋಲಕ್ಷಣ, ಪ್ರತ್ಯಕ್ಷ ಪರೋಕ್ಷ ಕಥನ, ವ್ಯಾಕರಣದಲ್ಲಿ ಬರುವ ಸಂಕೇತ ಪದಗಳಿಗೆ ತಕ್ಕ ಇಂಗ್ಲಿಷ್ ಪದಗಳ ಪಟ್ಟಿ, ಈ ಪುಸ್ತಕದಲ್ಲಿರುವ ಕ್ಲಿಷ್ಟಪದಗಳಿಗೆ ಅಕಾರಾದಿಯಾಗಿ ಅರ್ಥ, ಧಾತುಮಾಲೆ, ಪ್ರಶ್ನೆಪತ್ರಿಕೆ,

ಷಟ್ಪದಿ ಕಾವ್ಯಗಳಲ್ಲಿಯೂ, ಜನಗಳ ವಾಡಿಕೆಯಲ್ಲಿಯೂ ಇರುವ ಕೆಲವು ಹೊಸಗನ್ನಡ ಪ್ರಯೋಗಗಳ ಪಟ್ಟಿಯನ್ನು ಕೊಡಲಾಗಿದೆ. ಹತ್ತನೆ ತರಗತಿಯ ವಿದ್ಯಾರ್ಥಿಗಳಿಗೆ ಶಬ್ದಾಲಂಕಾರಗಳಲ್ಲಿ ಮಾತ್ರವಲ್ಲದೆ ಕಾವ್ಯಲಕ್ಷಣ ರಸಪ್ರಕರಣಗಳಲ್ಲಿಯೂ ತಕ್ಕಮಟ್ಟಿಗೆ ಪರಿಚಯವಿರಬೇಕೆಂದು ಅವೆರಡನ್ನು ಇದರಲ್ಲಿ ಸೂಕ್ಷ್ಮವಾಗಿ ತಿಳಿಸಲಾಗಿದೆ. ಅಲ್ಲದೆ ವಿದ್ಯಾರ್ಥಿಗಳು ಪ್ರಮುಖವಾಗಿ ನೆನಪಿಟ್ಟುಕೊಳ್ಳಬೇಕಾದ ಕೆಲವು ಅಂಶಗಳನ್ನು ಸಂಗ್ರಹಿಸಿ ಕೊಡಲಾಗಿದೆ. ಇದು ಭಾಗಶಃ ವ್ಯಾಕರಣ ಕೃತಿಯಾಗಿದ್ದು, ಅನುಗಮನ ಪದ್ಧತಿಯಲ್ಲಿ ವಿವರಿಸಲಾಗಿದೆ. ಈ ಕೃತಿಯು ೧೯೪೭ರಲ್ಲಿ ೧೦ನೇ ಮುದ್ರಣವನ್ನು ಕಂಡಿರುವುದನ್ನು ಗಮನಿಸಿದಾಗ ಸ್ವಾತಂತ್ರ್ಯಪೂರ್ವದಲ್ಲಿಯೇ ಬೋಧಕರಿಗೆ ಮತ್ತು ವಿದ್ಯಾರ್ಥಿಗಳಿಗೆ ವ್ಯಾಕರಣ ಅಧ್ಯಯನಕ್ಕೆ ಜನಪ್ರೀಯತೆ ಪಡೆದ, ಯೋಗ್ಯವಾದ ಪುಸ್ತಕವೆಂಬುದು ತಿಳಿದುಬರುತ್ತದೆ.

೧೯೭೦ರಲ್ಲಿ ಮ.ಮಲ್ಲಪ್ಪನವರು **'ನುಡಿಗನ್ನಡಿ'** ಎಂಬ ಪ್ರೌಢಶಾಲಾ ವ್ಯಾಕರಣವನ್ನು ರಚಿಸಿದ್ದಾರೆ. ಇದರಲ್ಲಿ ಒಟ್ಟು ೧೪ ಅಧ್ಯಾಯಗಳಿವೆ. ಮಕ್ಕಳಿಗೆ ಕಲಿತ ವಿಷಯ ಮರೆತು ಹೋಗದೆ ಮುಂದಿನ ಜೀವನಕ್ಕೆ ನೆರವಾಗುವಂತೆ ವ್ಯಾಕರಣಭ್ಯಾಸವು ಸಾಗಲೆಂದು ಸಾಮಾನ್ಯ ವ್ಯಾಕರಣದ ಪೂರ್ಣಾಂಶಗಳನ್ನು ಅಳವಡಿಸಿ ವಿಷಯ, ವಿಷಯ ವಿವರಣೆ ಮತ್ತು ನಿರೂಪಣೆಯನ್ನು ಕೂಡಿಸಿ ಈ ಕೃತಿಯನ್ನು ರಚಿಸಲಾಗಿದೆ. ಬೋಧನಾ ನೂತನ ವಿಧಾನದಲ್ಲಿ ಉದಾಹರಣೆಗಳೊಂದಿಗೆ ವಿವರಿಸಿ, ಸೂತ್ರವನ್ನು ಮಕ್ಕಳಿಗೆ ಮನನ ಮಾಡಿಸಿದ ಅನಂತರ ಪಠ್ಯ ಹಾಗೂ ಉಪಪಠ್ಯಪುಸ್ತಕಗಳಲ್ಲಿ ಆಯಾ ವ್ಯಾಕರಣ ವಿಚಾರಗಳಿಗೆ ಸಂಬಂಧಿಸಿದ ಉದಾಹರಣೆಗಳನ್ನು ಆ ಮಕ್ಕಳಿಂದ ಆರಿಸುವಂತೆ ಮಾಡಬೇಕೆಂಬುದು ಲೇಖಕರ ಅಭಿಪ್ರಾಯವಾಗಿದೆ. ವಿದ್ಯಾರ್ಥಿಗಳ ಅಧ್ಯಯನದ ಅನಕೂಲಕ್ಕಾಗಿ ಪುಸ್ತಕದ ಕೊನೆಯಲ್ಲಿ ಅಭ್ಯಾಸಗಳನ್ನು ಕೊಡಲಾಗಿದೆ.

ಈ ಕೃತಿಯು ಪ್ರೌಢಶಾಲಾ ಹಂತದ ಮಕ್ಕಳಿಗಾಗಿಯೆ ರಚನೆ ಆಗಿರುವುದರಿಂದ ವ್ಯಾಕರಣಾಂಶಗಳ ಸ್ಥೂಲ ಪರಿಚಯದೊಂದಿಗೆ ಛಂದಸ್ಸು ಮತ್ತು ಅಲಂಕಾರಗಳನ್ನು ಪರಿಚಯಿಸುತ್ತದೆ. ಸಂಧಿ, ಸಮಾಸ ಅಧ್ಯಾಯಗಳಲ್ಲಿ ಕನ್ನಡ ಸಂಸ್ಕೃತವೆಂದು ಭೇದವೆಣಿಸದೆ ಎರಡು ರೂಪಗಳನ್ನು ವಿವರಿಸಲಾಗಿದೆ. ವ್ಯಾಕರಣದ ಪರಿಭಾಷೆಗಳನ್ನು ಸಾಂಪ್ರದಾಯಿಕ ವಿಧಾನದಲ್ಲಿ ವಿವರಿಸಿರುವುದು ಕಂಡುಬರುತ್ತದೆ

ಪಂಡಿತ ಎಸ್.ಚಿಕ್ಕಣ್ಣ ಅವರು ಬರೆದ 'ಸಿರಿಗನ್ನಡ ಪ್ರಥಮವ್ಯಾಕರಣ' ಎಂಬ ಕೃತಿಯನ್ನು ೧೯೫೫ರಲ್ಲಿ ವಿದ್ಯಾ ಇಲಾಖೆಯವರು ಪ್ರೈಮರಿ ನಾಲ್ಕನೆಯ ತರಗತಿಗಾಗಿ

ಪಠ್ಯಪುಸ್ತಕವನ್ನಾಗಿ ಅಂಗೀಕರಿಸಿದ್ದರು. ೧೯೮೦ರ ದಶಕದಲ್ಲಿ **'ಸಿರಿಗನ್ನಡ ಮಧ್ಯಮವ್ಯಾಕರಣ'** ಎಂಬ ಕೃತಿಯನ್ನು ಮಾಧ್ಯಮಿಕ ಶಾಲಾ ವಿದ್ಯಾರ್ಥಿಗಳಿಗೆ ಚಿಕ್ಕಣ್ಣನವರು ರಚಿಸಿದ ಇನ್ನೊಂದು ವ್ಯಾಕರಣ ಕೃತಿಯಾಗಿದೆ. ಮೊದಲ ಕೃತಿಯು ಒಟ್ಟು ೨೮ ಪಾಠಗಳನ್ನೊಳಗೊಂಡಿದ್ದರೆ, ಎರಡನೆಯದು ೧೯ ಪಾಠಗಳನ್ನೊಳಗೊಂಡಿದೆ. ಎರಡೂ ಪುಸ್ತಕಗಳಲ್ಲಿ ವ್ಯಾಕರಣಾಂಶಗಳನ್ನು ಆಧುನಿಕ ಬೋಧನಾ ಕ್ರಮಕ್ಕನುಗುಣವಾಗಿ ಆಕರ್ಷಣೀಯವಾದ ಚಿತ್ರಗಳು ಮತ್ತು ಉದಾಹರಣೆಗಳೊಂದಿಗೆ ವಿವರಿಸಿದ್ದಾರೆ. ಮಕ್ಕಳಿಗೆ ಗೊತ್ತಿರುವ ವಿಷಯಗಳ ಮೂಲಕವಾಗಿಯೇ ಪಾಠಗಳು ಸುಲಭವಾಗಿ ತಿಳಿಯುವಂತೆ ರಚಿಸಲಾಗಿದೆ. ಅಲ್ಲದೆ ಪ್ರತಿ ಪಾಠಕ್ಕೂ ಮಕ್ಕಳ ಅಭಿರುಚಿಗೆ ತಕ್ಕಂತೆ ಚಿತ್ರಗಳನ್ನು ಒದಗಿಸಲಾಗಿದೆ. ಪಾಠಗಳ ಕೊನೆಯಲ್ಲಿ ಅಭ್ಯಾಸಗಳನ್ನು ಕೊಡಲಾಗಿದೆ. ಇದರಿಂದ ಮಕ್ಕಳಿಗೆ ವ್ಯಾಕರಣವನ್ನು ಓದುವುದರಲ್ಲಿದ್ದ ಬೇಸರಿಕೆಯು ಹೋಗಿ ಆಸಕ್ತಿ ಹೆಚ್ಚಾಗುತ್ತದೆಂಬುದು ಲೇಖಕರ ಅಭಿಪ್ರಾಯವಾಗಿದೆ.

ಸಿರಿಗನ್ನಡ ಪ್ರಥಮವ್ಯಾಕರಣದಲ್ಲಿ ಇಲ್ಲದೇ ಇರುವಂತಹ ಕೆಲವು ವ್ಯಾಕರಣಾಂಶಗಳನ್ನು ಸಿರಿಗನ್ನಡ ಮಧ್ಯಮವ್ಯಾಕರಣದಲ್ಲಿ ಹೇಳಿರುವುದು ಕಂಡುಬರುತ್ತದೆ. ಸಂಸ್ಕೃತ ಸಂಧಿಗಳು, ಸಮಾಸಗಳು, ತತ್ಸಮ – ತದ್ಭವಗಳು, ಕನ್ನಡರಚನೆ, ಶುದ್ಧರೂಪಗಳು, ಲೇಖನ ಚಿಹ್ನೆಗಳು, ಪತ್ರಲೇಖನ, ಛಂದಸ್ಸು ಈ ವಿಷಯಗಳು ಸೇರ್ಪಡೆಯಾಗಿವೆ. ಈ ಮಾದರಿಯ ವ್ಯಾಕರಣಾಂಶಗಳನ್ನು ಇಂದಿನ ಮಾಧ್ಯಮಿಕ ಶಾಲಾ ಪಠ್ಯಗಳಲ್ಲಿ ಅಳವಡಿಸಿರುವುದು ಕಂಡುಬರುತ್ತದೆ. ಎರಡೂ ಕೃತಿಗಳಲ್ಲಿಯೂ ಆರಂಭದಲ್ಲಿ ಉದಾಹರಣೆಗಳನ್ನು ನೀಡಿ ಅವುಗಳಲ್ಲಿ ಕಂಡುಬರುವ ನಿಯಮವನ್ನು ತಿಳಿಸುವುದಾಗಿದೆ. ಅಂದರೆ ಅನುಗಮನ ಪದ್ಧತಿಯಲ್ಲಿ ವಿವರಿಸಲಾಗಿದೆ.

೧೯೪೬ರಲ್ಲಿ ಮ.ಪ್ರ.ಪೂಜಾರ ಅವರು ರಚಿಸಿದ **'ಕನ್ನಡ ನುಡಿಗನ್ನಡಿ ಮತ್ತು ಛಂದೋಮಂಜರಿ'** ಎಂಬ ವ್ಯಾಕರಣ ಕೃತಿಯು ಮಾಧ್ಯಮಿಕ ಮತ್ತು ಹೈಸ್ಕೂಲುಗಳ ಉಪಯೋಗಕ್ಕಾಗಿ ರಚಿಸಿದ್ದು ಮತ್ತು ಸರಕಾರದಿಂದ ಮಂಜೂರಾದದ್ದಾಗಿದೆ. ಈ ಕೃತಿಯಲ್ಲಿ ಒಟ್ಟು ಹದಿನಾರು ಅಧ್ಯಾಯಗಳಿವೆ. ಭಾಷೆಯ ರಾಚನಿಕ ನಿಯಮಗಳನ್ನು ತಿಳಿಸುವಂತಹ ವ್ಯಾಕರಣಾಂಶಗಳನ್ನು ಶಾಸ್ತ್ರೀಯವಾಗಿ ವಿವರಿಸಲಾಗಿದೆ. ಸಾಂಪ್ರದಾಯಿಕವಾಗಿ ವ್ಯಾಕರಣಾಂಶಗಳನ್ನು ನಿಗಮ ಪದ್ಧತಿಯಲ್ಲಿ ವಿವರಿಸಿರುವುದು ಸ್ಪಷ್ಟವಾಗಿ ಕಂಡುಬರುತ್ತದೆ. ವ್ಯಾಕರಣಾಂಶಗಳನ್ನು ಕನ್ನಡ ಸಂಸ್ಕೃತವೆಂದು ಪ್ರತ್ಯೇಕಗೊಳಿಸದೆ ಎರಡನ್ನು ಸಾಂಪ್ರದಾಯಿಕವಾಗಿ ಹೇಳಲಾಗಿದೆ. ಆದರೆ ವ್ಯಾಕರಣದ

ಒಂದು ಭಾಗವೆಂದು ತಿಳಿಯಲಾದ ಛಂದೋವಿಚಾರಗಳನ್ನು 'ಛಂದೋಮಂಜರಿ' ಶೀರ್ಷಿಕೆ ಅಡಿಯಲ್ಲಿ ಗಣ, ಪ್ರಾಸ, ಯತಿ, ಅಕ್ಷರ ವೃತ್ತಗಳು, ಮಾತ್ರಾ ವೃತ್ತಗಳನ್ನು ನಿದರ್ಶನಗಳೊಂದಿಗೆ ವಿವರಿಸಿರುವುದು ಪ್ರಮುಖವಾಗಿದೆ. ಇಲ್ಲಿ ವ್ಯಾಕರಣದೊಂದಿಗೆ ಛಂದಸ್ಸನ್ನು ವಿವರಿಸಿರುವುದನ್ನು ಗಮನಿಸಿದಾಗ ಉಳಿದ ಕೃತಿಗಳಿಗಿಂತ ಛಂದೋವಿಚಾರದಲ್ಲಿ ಭಿನ್ನತೆ ಕಂಡುಬರುತ್ತದೆ. ವ್ಯಾಕರಣಾಂಶಗಳ ಜೊತೆಗೆ ಛಂದಸ್ಸನ್ನು ಹೇಳಿರುವಂತಹ ಕೃತಿಗಳು ತುಂಬ ವಿರಳವೆಂದೇ ಹೇಳಬಹುದು. ಆದರೆ ಈ ಕೃತಿಯು ಎರಡು ಶಾಸ್ತ್ರವಿಷಯಗಳನ್ನು ವಿವರಿಸುತ್ತದೆ.

೧೯೩೭ರಲ್ಲಿ ಆರ್.ಎಸ್.ಸೂರ್ಯನಾರಾಯಣ ಮತ್ತು ಕೊಣನೂರು ಅಹೋಬಲ ಶಾಸ್ತ್ರಿಯವರು **'ತಿಳಿಗನ್ನಡ ವ್ಯಾಕರಣ'** (ಪ್ರಥಮ ಭಾಗ) ಕೃತಿಯನ್ನು ರಚಿಸಿದ್ದು ಲೇಖಕರೇ ಹೇಳುವಂತೆ ಇದು ಮುಖ್ಯವಾಗಿ ಲೋಯರ್ ಸೆಕೆಂಡರಿ ಮತ್ತು ಮಿಡಲ್ ಸ್ಕೂಲು ಪರೀಕ್ಷೆಗಳಿಗೆ ಓದುವ ವಿದ್ಯಾರ್ಥಿಗಳಿಗೆ ಸುಲಭವಾಗಿ ವ್ಯಾಕರಣಾಂಶಗಳನ್ನು ಗ್ರಹಿಸಲು ತಕ್ಕ ಕೈಪಿಡಿಯಾಗಿದೆ ಎಂದು ಅಭಿಪ್ರಾಯಪಟ್ಟಿದ್ದಾರೆ. ಅಲ್ಲದೆ ಸರಕಾರದವರ ಅಪೇಕ್ಷೆಯಂತೆ ತಕ್ಕ ತಿದ್ದುಪಡಿಗಳನ್ನು ಮಾಡಿ ಈ ಪುಸ್ತಕವನ್ನು ರಚಿಸಲಾಗಿದೆ. ಒಟ್ಟು ಮೂವತ್ತೊಂಬತ್ತು ವ್ಯಾಕರಣಾಂಶಗಳನ್ನು ಉದಾಹರಣೆಗಳ ಮೂಲಕ ವಿವರಿಸಲಾಗಿದೆ. ಸಂಧಿಪ್ರಕರಣದಲ್ಲಿ ಕನ್ನಡ ಸಂಧಿಗಳನ್ನು ಮಾತ್ರ ವಿವರಿಸಿದರೆ, ಸಮಾಸ ಪ್ರಕರಣದಲ್ಲಿ ತತ್ಪುರುಷ, ಕರ್ಮಧಾರೆಯ, ದ್ವಂದ್ವ, ಅಂಶಿ, ಬಹುವ್ರೀಹಿ ಈ ಐದು ಸಮಾಸಗಳನ್ನು ಮಾತ್ರ ವಿವರಿಸಲಾಗಿದೆ. ಪ್ರತಿಯೊಂದು ಅಧ್ಯಾಯದ ಕೊನೆಗೆ ಅಭ್ಯಾಸಗಳನ್ನು ಕೊಡಲಾಗಿದೆ. ಈ ಅಭ್ಯಾಸಗಳು ಮಕ್ಕಳ ಬುದ್ಧಿಕುಶಲತೆಯನ್ನು ಹೆಚ್ಚಿಸಿಕೊಳ್ಳಲು ಸಹಕಾರಿಗಳಾದ ವಿಷಯ ಮತ್ತು ಕ್ರಮಗಳು ಅನೇಕ ಅಭ್ಯಾಸಗಳಲ್ಲಿ ಕಂಡುಬರುತ್ತವೆ. ಮಕ್ಕಳ ಅಂತಸ್ತಿಗೆ ಮೀರಿದ ವ್ಯಾಕರಣಾಂಶಗಳನ್ನು ಈ ಪುಸ್ತಕದಲ್ಲಿ ಕೈಬಿಡಲಾಗಿದೆ. ವ್ಯಾಕರಣದ ಕೊನೆಯಲ್ಲಿ ಹೇಳಿರುವ ವಾಕ್ಯ ಪ್ರಕರಣದಲ್ಲಿ ವಾಕ್ಯದ ಪರಿಚಯ, ವಿಮರ್ಶೆ, ವ್ಯಾಸಂಗ ಅಂಶಗಳು ಕಂಡರೆ, ಕರ್ತರಿ ಕರ್ಮಣಿ ಪ್ರಯೋಗಗಳು ವಾಕ್ಯವಿಮರ್ಶೆಯ ಅಂಗಗಳಾಗಿವೆ. ಅನ್ವಯಕ್ರಮ, ಪದಸಂಬಂಧ, ಪದನಿರ್ದೇಶನ, ದ್ವಿರುಕ್ತಿ ಮತ್ತು ವಾಕ್ಯಗಳಲ್ಲಿನ ಪದಸ್ವರೂಪಕಥನ, ವಾಕ್ಯಭೇದಗಳು ಮತ್ತು ವಿಭಜನೆ ಇವುಗಳು ಮಕ್ಕಳಲ್ಲಿ ಭಾಷೆಯ ಆಂತರಿಕ ರಚನೆಯನ್ನು ತಿಳಿಯಲು ಸಹಾಯಕವಾಗುತ್ತವೆ.

೧೯೫೪ರಲ್ಲಿ ವಿ.ರಾಜಮ್ಮ ಮತ್ತು ಗೌರಮ್ಮ ಅವರು ರಚಿಸಿದ **'ಹೊಸಗನ್ನಡ ವಾಕ್ಯ ರಚನೆ'** ಎಂಬ ಕಿರು ಹೊತ್ತಿಗೆಯನ್ನು ಮೈಸೂರು ವಿದ್ಯಾಭ್ಯಾಸದ ಇಲಾಖೆಯವರು ಮೈಸೂರು, ತುಮಕೂರು, ಚಿಕ್ಕಮಗಳೂರು, ಮಂಡ್ಯ, ಬಳ್ಳಾರಿ ಮತ್ತು ಶಿವಮೊಗ್ಗ ಡಿಸ್ಟ್ರಿಕ್‌ಗಳಿಗೆ ಮಾಧ್ಯಮಿಕ ಶಾಲೆಯ ವಿದ್ಯಾರ್ಥಿಗಳಿಗಾಗಿ ವಾಕ್ಯರಚನೆಯ ಪಠ್ಯಪುಸ್ತಕವಾಗಿ ಅಂಗೀಕರಿಸಲಾಗಿತ್ತು. ಪ್ರಾಥಮಿಕ ಹಂತದಲ್ಲಿ ಮಕ್ಕಳು ವ್ಯಾಕರಣ ಮತ್ತು ವಾಕ್ಯ ರಚನೆಯ ವಿಚಾರವಾಗಿ ಕೆಲವು ಸಂಗತಿಗಳನ್ನು ತಿಳಿದಿರುತ್ತಾರೆಂಬ ಕಾರಣದಿಂದ ಲೇಖಕರು ಈ ಪುಸ್ತಕದಲ್ಲಿ ವಾಕ್ಯರಚನೆಯನ್ನು ಬರೆಯುವ ವಿಧಾನಕ್ಕೆ ಹೆಚ್ಚು ಗಮನಕೊಟ್ಟಿರುವುದು ಕಂಡುಬರುತ್ತದೆ. ಸಂದರ್ಭಕ್ಕನುಸಾರವಾಗಿ ಮಕ್ಕಳು ವಾಕ್ಯಗಳನ್ನು ಅರ್ಥಮಾಡಿಕೊಳ್ಳಲು ಚಿತ್ರಗಳನ್ನು ಕೊಡಲಾಗಿದೆ. ಚಿತ್ರಗಳನ್ನು ನೋಡುತ್ತಲೇ ವಾಕ್ಯಗಳ ರಚನೆಗೆ ತೊಡಗಲು ಅನುವುಮಾಡಿಕೊಡಲಾಗಿದೆ. ಮಕ್ಕಳು ವಾಕ್ಯರಚನೆಯಲ್ಲಿ ಮಾಡುವ ದೋಷಗಳಾದ ಕಾಗುಣಿತ ತಪ್ಪುಗಳು, ಸೂಕ್ತ ಲೇಖನ ಚಿಹ್ನೆಗಳನ್ನು ಬಳಸದಿರುವುದು, ಕಾಗದದ ಬರವಣಿಗೆಯಲ್ಲಿ ಮಾಡುವ ದೋಷಗಳು ಇತ್ಯಾದಿ ದೋಷಗಳನ್ನು ಸರಿಪಡಿಸಿಕೊಳ್ಳಲು ಈ ಪುಸ್ತಕ ನೆರವಾಗುತ್ತದೆ. ಮಕ್ಕಳ ಬರವಣಿಗೆ ದೋಷಹಿತವಾಗಿದ್ದು, ಅಂದವಾಗಬೇಕಾದರೆ ತಪ್ಪದೆ ಕಾಪಿ ಬರೆದು ಅಭ್ಯಾಸಮಾಡಬೇಕೆಂಬುದು ಲೇಖಕರ ಅಭಿಪ್ರಾಯವಾಗಿದೆ. ವ್ಯಾಕರಣ ಪರಂಪರೆಯಲ್ಲಿ ಮಹಿಳೆಯರು ರಚಿಸಿದ ಏಕೈಕ ವ್ಯಾಕರಣ ಹೊತ್ತಿಗೆಯಂದು ಈ ಪುಸ್ತಕವನ್ನು ಗುರುತಿಸಬಹುದು.

ಏಳು ಅಧ್ಯಾಯಗಳಲ್ಲಿ ಬರಣಿಗೆಯ ರೀತಿಯನ್ನು ತಿಳಿಸಿ, ಎಂಟನೆಯ ಅಧ್ಯಾಯದಲ್ಲಿ ಮಾದರಿಯ ಪ್ರಬಂಧಗಳನ್ನು ಕೊಡಲಾಗಿದೆ. ಪ್ರಾಣಿಗಳು, ಸಸ್ಯಗಳು, ಖನಿಜಗಳು, ಯಂತ್ರಗಳು, ಜೀವನ ಚರಿತ್ರೆ ಇವುಗಳಿಗೆ ಎರಡೆರಡು ಮಾದರಿಗಳನ್ನು ಕೊಟ್ಟು ವಿಮಾನ, ಹಬ್ಬ, ಆಟ, ನದಿ, ಜಾತ್ರೆ, ವ್ಯವಸಾಯ, ಕೈಗಾರಿಕೆಗಳು, ರೈಲು ಪ್ರಯಾಣ, ಹಕ್ಕಿಗಳು, ನಮ್ಮ ನೆಹರು ಇವುಗಳ ವಿಷಯವಾದ ಒಂದೊಂದು ಮಾದರಿಯ ಪುಟ್ಟ ಪ್ರಬಂಧಗಳನ್ನು ಕೊಡಲಾಗಿದೆ. ಹೆಚ್ಚು ವಿಷಯಗಳನ್ನು ಪುಸ್ತಕದಲ್ಲಿ ಕೊಡುವುದರಿಂದ ಮಕ್ಕಳ ಕಲಿಕೆಗೆ ಕಷ್ಟವಾಗಬಹುದೆಂದು ಈ ಪುಸ್ತಕವನ್ನು ಹೆಚ್ಚು ಮಾಡದೆ ಒಂದು ಮಿತಿಯೊಳಗೆ ಮಾಡಲಾಗಿದೆ. ಒಟ್ಟಿನಲ್ಲಿ ಮಕ್ಕಳು ವಾಕ್ಯರಚನೆಗೆ ತೊಡಗಿಕೊಳ್ಳಲು ಮಾರ್ಗದರ್ಶಿಯಾಗಿದೆ.

ಪಂಡಿತ ಜೆ.ಎ.ಕವಲಿ ಅವರು ಮಾಧ್ಯಮಿಕ ಶಾಲೆಗಳ ೧೯೫೪ರ ಅಭ್ಯಾಸ ಪತ್ರಿಕೆಗೆ ಅನುಸರಿಸಿ ರಚಿಸಿದ **'ಕನ್ನಡ ವ್ಯಾಕರಣ – ವಿವಿಧ ಸಾಹಿತ್ಯ'** ಪುಸ್ತಕವನ್ನು ೧೦ನೆ

ತರಗತಿ ವಿದ್ಯಾರ್ಥಿಗಳಿಗಾಗಿ ಅಂಗೀಕರಿಸಲಾಗಿದೆ. ಈ ಪುಸ್ತಕದಲ್ಲಿ ಅಧ್ಯಯನದ ಅನುಕೂಲಕ್ಕಾಗಿ ವ್ಯಾಕರಣಾಂಶಗಳನ್ನು 'ವ್ಯಾಕರಣ ವಿಚಾರ' ದಡಿಯಲ್ಲಿ ಹದಿನಾರು ಅಧ್ಯಾಯಗಳಲ್ಲಿ ಉದಾಹರಣೆಗಳೊಂದಿಗೆ ವಿವರಿಸಲಾಗಿದೆ. ಸಾಹಿತ್ತಿಕ ವಿಚಾರಗಳನ್ನು 'ವಿವಿಧ ಸಾಹಿತ್ಯ' ಶೀರ್ಷಿಕೆ ಅಡಿಯಲ್ಲಿ ಪರಿಚ್ಛೇದ ರಚನೆ, ಸಂಕ್ಷೇಪ ಲೇಖನ, ಕತೆಗಳನ್ನು ಕಟ್ಟುವುದು, ಸಂಭಾಷಣೆಗಳು, ಕಾವ್ಯ ರಸಸ್ವಾದನ ಮತ್ತು ಸರಳಾನುವಾದ, ಪತ್ರವ್ಯವಹಾರ, ಪ್ರಬಂಧಗಳು ಎಂಬ ಏಳು ಅಧ್ಯಾಯಗಳಲ್ಲಿ ವಿವಿಧ ಮಾದರಿಗಳಲ್ಲಿ ವಿಷಯಗಳನ್ನು ವಿವರಿಸಲಾಗಿದೆ. ಪುಸ್ತಕದ ಎರಡು ಭಾಗಗಳ ಪ್ರತಿಯೊಂದು ಅಧ್ಯಾಯದ ಕೊನೆಯಲ್ಲಿ 'ಬಳಕೆ ಮತ್ತು ಕೇಳಿಕೆ' ಶೀರ್ಷಿಕೆ ಅಡಿಯಲ್ಲಿ ಅಧ್ಯಾಯಕ್ಕೆ ಸಂಬಂಧಿಸಿದಂತೆ ಪ್ರಶ್ನಾವಳಿಯನ್ನು ನೀಡಲಾಗಿದೆ. ಇವು ಮಕ್ಕಳಿಗೆ ವ್ಯಾಕರಣದಲ್ಲಿ ಆಳವಾದ ಜ್ಞಾನ ಮತ್ತು ಭಾಷಾ ಶುದ್ಧತೆಯನ್ನು ಬೆಳೆಸುವಲ್ಲಿ ಸಹಕಾರಿಯಾಗಲಿವೆ. ಅಂದರೆ ಭಾಷೆಯ ರಾಚನಿಕ ನಿಯಮಗಳನ್ನು ಅರಿತು ಮಕ್ಕಳು ಸಂಕ್ಷಿಪ್ತವಾದ ಲೇಖನ ರಚಿಸುವುದು, ಕತೆಗಳನ್ನು ಕಟ್ಟುವುದು, ಹಳೆಗನ್ನಡ ಕಾವ್ಯಗಳ ವಾಚನ ಮತ್ತು ಸರಳಾನುವಾದ ಮಾಡುವುದು, ಪತ್ರವ್ಯವಹಾರ ಮುಂತಾದುವುಗಳನ್ನು ರಚಿಸಲು ಮಕ್ಕಳನ್ನು ಅಣಿಗೊಳಿಸುವುದಾಗಿದೆ. ವ್ಯಾಕರಣದ ಜೊತೆಗೆ ಛಂದಸ್ಸು ಮತ್ತು ಅಲಂಕಾರಗಳನ್ನು ವಿವರಿಸಲಾಗಿದೆ. ಗದ್ಯ ಪದ್ಯದ ಸ್ವರೂಪವನ್ನು ಅರಿಯಲು ವ್ಯಾಕರಣ, ಛಂದಸ್ಸು, ಅಲಂಕಾರಗಳು ಹತ್ತನೆ ತರಗತಿಯ ಮಕ್ಕಳಿಗೆ ಅಗತ್ಯವಾಗಿರಬೇಕೆಂಬುದು ಲೇಖಕರ ಅಭಿಪ್ರಾಯವಾಗಿದೆ.

ಡಿ.ಗಂಗರಾಜು ಅವರು ರಚಿಸಿದ **'ಹೊಸಗನ್ನಡ ವ್ಯಾಕರಣ ಮತ್ತು ವಾಕ್ಯರಚನೆ ಭಾಗ–೧'** ವ್ಯಾಕರಣ ಕೃತಿಯು ಹೈಯರ್ ಸೆಕೆಂಡರಿ ಎಂಟನೆಯ ತರಗತಿಗಾಗಿ ೧೯೬೬ ರಲ್ಲಿ ರಾಜ್ಯದ ಮೈಸೂರು, ಮಂಡ್ಯ, ಹಾಸನ, ಚಿಕ್ಕಮಗಳೂರು, ಶಿವಮೊಗ್ಗ, ಮಂಗಳೂರು ಮತ್ತು ಕೊಡಗು ಈ ಏಳೂ ಜಿಲ್ಲೆಗಳಿಗೂ ಪಠ್ಯಪುಸ್ತಕದ ಸಮಿತಿಯಿಂದ ಅಂಗೀಕೃತವಾಗಿದೆ. ಈ ಪುಸ್ತಕದಲ್ಲಿ ಅಕ್ಷರಪ್ರಕರಣ, ಶಬ್ದಪ್ರಕರಣ, ಸಂಧಿಪ್ರಕರಣ, ಪೃಕೃತಿಪ್ರಕರಣದ ಜೊತೆಗೆ ನಿಯಮಿತ ಹೊಸ ಪಾಠಪಟ್ಟಿಗೆ ಅನುಗುಣವಾಗಿ ವಾಕ್ಯರಚನೆಯ ಭಾಗವನ್ನು ಅಳವಡಿಸಲಾಗಿದೆ. ಪ್ರತಿ ಪ್ರಕರಣದ ಕೊನೆಯಲ್ಲಿ 'ಸಾರಸಂಗ್ರಹ' ಮತ್ತು ಅಭ್ಯಾಸಗಳನ್ನು ಸೇರಿಸಿರುವುದು ಇದರ ವೈಶಿಷ್ಟ್ಯ. ಸಾರಸಂಗ್ರಹವೆಂದರೆ ಒಂದು ಪರಿಭಾಷೆಯ ವಿವಿಧ ಪ್ರಕಾರಗಳನ್ನು ರೇಖೆಗಳ ಮುಖಾಂತರ ಪರಿಚಯಿಸುವುದೇ ಸಾರಸಂಗ್ರಹವಾಗಿದೆ. ಈ ಸಾರಸಂಗ್ರಹವನ್ನು ಪ್ರತಿ

ಅಧ್ಯಾಯದ ಕೊನೆಯಲ್ಲಿ ಕೊಡುವುದರಿಂದ ಇಡಿಯಾದ ಒಂದು ವಿಷಯವನ್ನು ಬಿಡಿಬಿಡಿಯಾಗಿ ಪರಿಚಯಿಸುವುದರಿಂದ ವಿಷಯಗಳನ್ನು ನೆನಪಿನಲ್ಲಿಟ್ಟುಕೊಳ್ಳುವುದರ ಜೊತೆಗೆ ಗೊಂದಲ ನಿವಾರಣೆಯಾಗುತ್ತದೆಂಬುದು ಲೇಖಕರ ಅಭಿಪ್ರಾಯವಾಗಿದೆ.

ಎರಡನೆಯ ಭಾಗವಾದ 'ವಾಕ್ಯರಚನೆ'ಯಲ್ಲಿ ಸಾರವಿಸ್ತರಣ, ಸಾರಸಂಗ್ರಹ, ಸಂವಾದ, ಕಾಗದ ಬರೆಯುವುದು, ಪ್ರಬಂಧರಚನೆ ಇವುಗಳಿಗೆ ನಿದರ್ಶನಗಳನ್ನು ಚಿತ್ರದಿಂದೊಡಗೂಡಿದ ಕಥೆಯ ಸಂವಾದಗಳನ್ನು ಕೊಡಲಾಗಿದೆ. ಈ ಮಾದರಿಗಳನ್ನು ಮಕ್ಕಳು ಓದಿ ಸ್ವತಃ ತಾವು ವಾಕ್ಯರಚನೆಯನ್ನು ಕಲಿಯಲು ಅನುವುಮಾಡಿಕೊಡಲಾಗಿದೆ. ಭಾಷಿಕ ರಚನೆಯ ನಿಯಮಗಳನ್ನು ತಿಳಿಸುವುದು ಒಂದು ಕಡೆಯಾದರೆ ತಿಳಿದ ನಿಯಮಗಳನ್ನು ಪ್ರಯೋಗಿಸುವುದು ಕಂಡುಬರುತ್ತದೆ.

೧೯೭೫ರಲ್ಲಿ ಬಿ.ಎಂ.ಸಿದ್ಧವೀರಯ್ಯನವರು ರಚಿಸಿದ **'ಕನ್ನಡ ಕೈಗನ್ನಡಿ' (೨ನೆಯ ಭಾಗ)** ಯು ಕರ್ನಾಟಕ ಸರಕಾರ ವಿದ್ಯಾ ಇಲಾಖೆಯವರು ಹೈದ್ರಾಬಾದ್ ಕರ್ನಾಟಕ ವಿಭಾಗಕ್ಕೆ ಕನ್ನಡ ೮, ೯ ಮತ್ತು ೧೦ನೆಯ ವರ್ಗಗಳಿಗಾಗಿಯೇ ಅಂಗೀಕರಿಸಲಾಗಿದೆ. ಈ ಪುಸ್ತಕದಲ್ಲಿ ಅಕ್ಷರಪ್ರಕರಣ, ಶಬ್ದಪ್ರಕರಣ, ಸಂಧಿಪ್ರಕರಣ, ವಾಕ್ಯಪ್ರಕರಣ, ಛಂದಸ್ಸು ಪ್ರಕರಣವೆಂದು ಐದು ಪ್ರಕರಣಗಳಲ್ಲಿ ವ್ಯಾಕರಣಾಂಶಗಳನ್ನು ನಿಗಮ ಪದ್ಧತಿಯಲ್ಲಿ ನಿರೂಪಿಸಲಾಗಿದೆ. ಪ್ರತಿ ಅಧ್ಯಾಯದ ಕೊನೆಯಲ್ಲಿ 'ಕೇಳಿಕೆ' ಶೀರ್ಷಿಕೆ ಅಡಿಯಲ್ಲಿ ಪ್ರಶ್ನಾವಳಿಗಳನ್ನು ನೀಡಲಾಗಿದೆ. ಛಂದಸ್ಸು ಪ್ರಕರಣದಲ್ಲಿ ಛಂದೋಮಟ್ಟುಗಳನ್ನು, ಶಬ್ದ ಮತ್ತು ಅರ್ಥಾಲಂಕಾರಗಳನ್ನು ನಿದರ್ಶನಗಳೊಂದಿಗೆ ವಿವರಿಸಲಾಗಿದೆ. ನವರಸಗಳನ್ನು, ಕೇಶಿರಾಜ ಹೇಳಿದ ಕನ್ನಡದ ಅಸಾಧಾರಣ ಲಕ್ಷಣಗಳನ್ನು ವಿವರಿಸಲಾಗಿದೆ. ಭಾಷೆಯ ರಾಚನಿಕ ನಿಯಮಗಳನ್ನು ಮತ್ತು ಪದ್ಯದ ರಚನೆಯ ನಿಯಮಗಳನ್ನೊಳಗೊಂಡ ಕೃತಿ ಇದಾಗಿದೆ.

ಮೈಸೂರು ರಾಜ್ಯದ ವಿದ್ಯಾಶಾಖೆಯ ವ್ಯಾಪ್ತಿಗೊಳಪಟ್ಟ ಪ್ರೌಢಶಾಲೆಗಳ ೮, ೯ ಮತ್ತು ೧೦ನೆಯ ವರ್ಗಗಳ ವಿದ್ಯಾರ್ಥಿಗಳ ಉಪಯೋಗಕ್ಕಾಗಿ ನೂತನ ಅಭ್ಯಾಸಕ್ರಮಕ್ಕನುಸರಿಸಿ ಒಂದು ವ್ಯಾಕರಣ ಪುಸ್ತಕವನ್ನು ರಚಿಸಿಬೇಕೆಂದೂ, ಅದರಲ್ಲಿ ಆಯಾ ತರಗತಿಗಳಿಗೆ ನಿಯಮಿತವಾದ ಅಲಂಕಾರ, ಛಂದಸ್ಸುಗಳ ಭಾಗವೂ ಇರಬೇಕೆಂದೂ ವಿದ್ಯಾಶಾಖೆಯವರು ತೀರ್ಮಾನಿಸಿ ಡಾ. ಶಿ. ಚ. ನಂದಿಮಠ, ಸಿ. ಎಂ. ಎರೇಸೀಮೆ, ಡಿ. ರೇವಣ್ಣಪ್ಪ ಇವರನ್ನೊಳಗೊಂಡ ಸಮಿತಿಯೊಂದನ್ನು ರಚಿಸಿ, ಈ

ಸಮಿತಿಯಿಂದ ೧೯೭೦ರಲ್ಲಿ ಹೊರತರಲಾದ ವ್ಯಾಕರಣ ಕೃತಿಯೇ 'ಕನ್ನಡ ವ್ಯಾಕರಣ ದರ್ಪಣ'.

ವಿದ್ಯಾಶಾಖೆಯವರು ನಿರ್ಣಯಿಸಿದ ಪಠ್ಯಕ್ರಮಕ್ಕನುಸರಿಸಿ ಪ್ರೌಢಶಾಲಾ ಮಕ್ಕಳ ಮಟ್ಟವನ್ನು ಗಮನದಲ್ಲಿಟ್ಟುಕೊಂಡು 'ಸುಲಭದಿಂದ ಕಠಿಣಕ್ಕೆ' ಎಂಬ ಬೋಧನಾ ತತ್ವಕ್ಕನುಗುಣವಾಗಿ ವಿಷಯ ನಿರೂಪಣೆ ಮಾಡಲಾಗಿದೆ. ಇದರಲ್ಲಿ ಪಠ್ಯಕ್ರಮದ ವ್ಯಾಪ್ತಿಯನ್ನು ಮೀರಿ ಅಲ್ಲಲ್ಲಿ ಕೆಲವು ವಿಷಯಗಳನ್ನು ಗ್ರಂಥದ ಪರಿಪೂರ್ಣತೆಗಾಗಿ, ಕನ್ನಡ ಭಾಷಾಭ್ಯಾಸಿಗಳ ಅನುಕೂಲಕ್ಕಾಗಿ ಹೇಳಿದ್ದರೂ ಕೂಡ ಉಪಾಧ್ಯಾಯರು ಅಂಥವುಗಳ ಕಡೆಗೆ ಹೆಚ್ಚು ಲಕ್ಷಕೊಡದೆ ಕೇವಲ ಪಠ್ಯಕ್ರಮದ ವ್ಯಾಪ್ತಿಗನುಗುಣವಾಗಿ ಬೋಧನಾ ವಿಷಯಗಳನ್ನು ಆರಿಸಿಕೊಂಡು ಪಾಠ ಹೇಳಬೇಕೆಂದು ಪುಸ್ತಕದ ಮುನ್ನುಡಿಯಲ್ಲಿ ಸಮಿತಿಯ ಪರವಾಗಿ ಶಿ. ಚ. ನಂದಿಮಠರವರು ಸೂಚನೆ ನೀಡಿದ್ದಾರೆ.

ಈ ಪುಸ್ತಕದಲ್ಲಿ ಸೂತ್ರಗಳನ್ನು ಹೇಳುವುದಕ್ಕೆ ಪೂರ್ವದಲ್ಲಿ ಸಾಕಷ್ಟು ವಿವರಣೆಯನ್ನು ಕೊಡಲಾಗಿದೆ. ಸುಲಭವಾದ ದೃಷ್ಟಾಂತಗಳನ್ನು ನೀಡಲಾಗಿದೆ. ಆ ವಿವರಣೆಯ ಆಧಾರದ ಮೇಲೆ ಸೂತ್ರ ರಚನೆಯನ್ನು ಮಕ್ಕಳಿಂದಲೇ ಮಾಡಿಸುವ ಬೋಧನಾ ನಿಯಮವನ್ನು ಶಿಕ್ಷಕರು ಅನುಸರಿಸಿ ವ್ಯಾಕರಣವು ಸುಲಭವಾದ ವಿಷಯವೆಂಬ ವಿಶ್ವಾಸವನ್ನು ಮಕ್ಕಳಲ್ಲಿ ಮೂಡಿಸುವುದು ಶಿಕ್ಷಕರ ಕರ್ತವ್ಯವೆಂದು ಅಭಿಪ್ರಾಯಪಡಲಾಗಿದೆ. ವಿದ್ಯಾರ್ಥಿಗಳ ಉಪಯೋಗದ ದೃಷ್ಟಿಯಿಂದ ಹೆಚ್ಚಾಗಿ ದೃಷ್ಟಾಂತಗಳನ್ನು ಅಳವಡಿಸಲಾಗಿದೆ.

ಅಲಂಕಾರಗಳು ಸುಲಭವಾಗಿ ಮಕ್ಕಳ ಮನಸ್ಸನ್ನು ತಲುಪಬೇಕೆಂಬ ಉದ್ದೇಶದಿಂದ ಗಾದೆಯ ಮಾತುಗಳ ಮತ್ತು ರೂಢಿಯೊಳಗಿನ ಮಾತುಗಳ ಸುಲಭ ದೃಷ್ಟಾಂತಗಳನ್ನು ಪ್ರಾರಂಭದಲ್ಲಿ ತಿಳಿಸಿ, ನಂತರ ಪದ್ಯಗಳನ್ನು ಹೇಳಿ, ವಿವರಣೆ ಮಾಡಿ ಸೂತ್ರಗಳನ್ನು ಹೇಳಲಾಗಿದೆ. ಪಠ್ಯಪುಸ್ತಕಗಳಲ್ಲಿ ಬಂದಿರುವ ಉದಾಹರಣೆಗಳತ್ತ ಹೆಚ್ಚು ಲಕ್ಷವಹಿಸಲಾಗಿದೆ. ಕೆಲವೆಡೆ ಪಠ್ಯಪುಸ್ತಕದ ಹೊರಗಿನ ಉದಾಹರಣೆಗಳನ್ನು ನೀಡಲಾಗಿದೆ.

ಪ್ರೌಢಶಾಲೆಯ ಮೂರು ಹಂತಗಳಲ್ಲಿಯೂ ಮಕ್ಕಳು ಹಳೆಗನ್ನಡ ಗದ್ಯಪದ್ಯ ಭಾಗವನ್ನು ಸ್ವಲ್ಪಮಟ್ಟಿಗಾದರು ಪರಿಚಯ ಮಾಡಿಕೊಳ್ಳಬೇಕಾಗಿರುವುದರಿಂದ ಅಲ್ಲಲ್ಲಿ ಹಳೆಗನ್ನಡ ಉದಾಹರಣೆಗಳನ್ನು ಕೊಡಲಾಗಿದೆ. ನಾಮವಿಭಕ್ತಿ ಪ್ರತ್ಯಯಗಳನ್ನು ವಿವರಣೆ ಮಾಡುವಾಗ ಹೊಸಗನ್ನಡ ಮತ್ತು ಹಳೆಗನ್ನಡ ಎರಡೂ ರೂಪಗಳನ್ನು ಹೇಳಲಾಗಿದೆ. ಸಮಾಸ ಪ್ರಕರಣದಲ್ಲಿ ಅನೇಕ ಹೊಸಗನ್ನಡ ಮತ್ತು ಹಳೆಗನ್ನಡದ ವಿಶೇಷ

ಉದಾಹರಣೆಗಳ ಪಟ್ಟಿಯನ್ನು ಕೊಡಲಾಗಿದೆ. ಕ್ರಿಯಾಪದ ಪ್ರಕರಣಾಂತ್ಯದಲ್ಲಿ ದೀರ್ಘವಾದ ಧಾತುಗಳ ಪಟ್ಟಿಯೊಂದನ್ನು ಕೊಟ್ಟು ಅದರಲ್ಲಿ ಹೊಸಗನ್ನಡ, ಹಳೆಗನ್ನಡ ಧಾತುರೂಪಗಳು ಮತ್ತು ಅವುಗಳ ಅರ್ಥ, ಕ್ರಿಯಾಪದದ ಒಂದೊಂದು ರೂಪವನ್ನು ಕೊಡಲಾಗಿದೆ. ಅಲ್ಲದೆ ಹಳೆಗನ್ನಡದಿಂದ ಹೊಸಗನ್ನಡಕ್ಕೆ ರೂಪಾಂತರ ಹೊಂದುವ ಅನೇಕ ಶಬ್ದಗಳ ಒಂದು ಪಟ್ಟಿಯನ್ನು ಮೂರನೆಯ ಅಧ್ಯಾಯದಲ್ಲಿ ಕೊಡಲಾಗಿದೆ. ಮಕ್ಕಳ ಅಭ್ಯಾಸ ದೃಷ್ಟಿಯಿಂದ ಪ್ರತಿ ಅಧ್ಯಾಯದ ಕೊನೆಯಲ್ಲಿ ಅಭ್ಯಾಸ ಪ್ರಶ್ನೆಗಳನ್ನು ಸಾಕಷ್ಟು ವೈವಿಧ್ಯಪೂರ್ಣವಾಗಿ ಕೊಡಲಾಗಿದೆ. ಪುಸ್ತಕದ ಕೊನೆಯಲ್ಲಿ ಬರವಣಿಗೆಯ ಕೇಂದ್ರ ಬಿಂದುಗಳಾದ ಲೇಖನ ಚಿಹ್ನೆಗಳ ಬಗೆಗೆ ವಿವರಿಸಲಾಗಿದೆ.

ಸಮಗ್ರವಾಗಿ ವ್ಯಾಕರಣವೇ ಆಗಿರುವಂತಹ ಈ ಮೇಲ್ಕಾಣಿಸಿದ ೨೦ ವ್ಯಾಕರಣ ಕೃತಿಗಳ ವಿಶ್ಲೇಷಣೆಯನ್ನು ಗಮನಿಸಿದಾಗ ಕಂಡುಬರುವ ಸಂಗತಿಗಳೆಂದರೆ ಶಾಲೆಯ ವಿವಿಧ ಹಂತಗಳಿಗನುಗುಣವಾಗಿ ವಿದ್ಯಾ ಇಲಾಖೆಯು ಪಠ್ಯದ ಜೊತೆಗೆ ವ್ಯಾಕರಣ ಕೃತಿಗಳನ್ನು ಪ್ರತ್ಯೇಕವಾಗಿ ಅಳವಡಿಸಲಾಗಿದೆ. ಇನ್ನು ಕೆಲವು ಕೃತಿಗಳು ಪ್ರಾದೇಶಿಕ ವಲಯಕ್ಕೆ ಮೀಸಲಿರುವುವು. ಅಂದರೆ ಮೈಸೂರು ಸಂಸ್ಥಾನದ ಜಿಲ್ಲೆಗಳಿಗೆ, ಹೈದ್ರಾಬಾದ್ ಕರ್ನಾಟಕ ಜಿಲ್ಲೆಗಳಿಗೆ, ಉತ್ತರ ಕರ್ನಾಟಕಕ್ಕೆ, ಪ್ರಾತಿನಿಧಿಕವಾಗಿ ಏಕೈಕ ಜಿಲ್ಲೆಗಳಿಗೋಸ್ಕರವಾಗಿ ನಿರ್ಧಿಷ್ಟವಾಗಿ ಕೆಲವು ವ್ಯಾಕರಣ ಕೃತಿಗಳನ್ನು ನಿಗದಿಪಡಿಸಿರುವುದು ಕಂಡುಬರುತ್ತದೆ. ಪ್ರಾದೇಶಿಕತೆಗೆ ಅನುಗುಣವಾಗಿ ವ್ಯಾಕರಣ ರಚನೆಯಾಗಿದೆ ಆದರೆ ಕೃತಿಯಲ್ಲಿ ಪ್ರಾದೇಶಿಕ ನುಡಿ ಚರ್ಚೆ ಆಗಿಲ್ಲ. ಬರಹದ ಕನ್ನಡದಲ್ಲೆ ಪ್ರಾದೇಶಿಕವಾಗಿ ಚರ್ಚೆಮಾಡಲಾಗಿದೆ. ಕೆಲವು ವ್ಯಾಕರಣ ಕೃತಿಗಳು ಸಂಸ್ಕೃತ ಸಂಧಿಗಳು, ಸಮಾಸಗಳು ಮೊದಲಾದ ಕ್ಲಿಷ್ಟ ವ್ಯಾಕರಣಾಂಶಗಳಿಂದ ಮುಕ್ತವಾಗಿದ್ದರೆ, ಇನ್ನೂ ಕೆಲವು ಕೃತಿಗಳು ಸಾಂಪ್ರದಾಯಿಕ ಶಾಸ್ತ್ರೀಯ ವ್ಯಾಕರಣಾಂಶಗಳನ್ನು ಒಳಗೊಂಡಿವೆ. ಇನ್ನೂ ಕೆಲವು ಲೇಖಕರ ಕೃತಿಗಳ ಪ್ರಕಾರ ಶಾಸ್ತ್ರೀಯ ವ್ಯಾಕರಣಾಂಶಗಳನ್ನು ಪ್ರೌಢಶಾಲಾ ಹಂತದಿಂದ ಕಲಿಸುವುದು ಸೂಕ್ತವೆಂಬ ಅಭಿಪ್ರಾಯವು ಕಂಡುಬರುತ್ತದೆ. ಮತ್ತೆ ಕೆಲವು ಪ್ರೈಮರಿ ಹಂತಕ್ಕೆ ರಚನೆಯಾದ ವ್ಯಾಕರಣ ಕೃತಿಗಳು ಚಿತ್ರಗಳೊಂದಿಗೆ ವ್ಯಾಕರಣಾಂಶಗಳನ್ನು ಪರಿಚಯಿಸಿದರೆ, ಇನ್ನೂ ಕೆಲವು ವ್ಯಾಕರಣದ ಜೊತೆಗೆ ಛಂದಸ್ಸು ಮತ್ತು ಅಲಂಕಾರಗಳನ್ನು ವಿವರಿಸುತ್ತವೆ. ಲಭ್ಯವಾದ ವ್ಯಾಕರಣ ಕೃತಿಗಳು ವ್ಯಾಕರಣಾಂಶಗಳನ್ನು ಕೆಲವು ಅನುಗಮನ ಪದ್ಧತಿಯಲ್ಲಿ ವಿವರಿಸಲ್ಪಟ್ಟರೆ, ಮತ್ತೆ ಕೆಲವು

ನಿಗಮನ ಪದ್ಧತಿಯಲ್ಲಿ ವಿವರಿಸಲ್ಪಟ್ಟಿರುವುದು ಸ್ಪಷ್ಟವಾಗಿ ಕಂಡುಬರುತ್ತದೆ. ಅಂದರೆ ಮಕ್ಕಳಿಗೆ ವ್ಯಾಕರಣಾಂಶಗಳನ್ನು ಕಲಿಸುವುದಕ್ಕಾಗಿ ಮಾಡಿಕೊಂಡ ಪದ್ಧತಿಗಳಾಗಿವೆ.

ಈ ವ್ಯಾಕರಣ ಕೃತಿಗಳಿಂದ ತಿಳಿದುಬರುವ ಸಂಗತಿಯೆಂದರೆ ಕನ್ನಡ ಭಾಷೆಯ ವ್ಯಾಕರಣದ ಅಧ್ಯಯನ ಕೂಡ ಒಂದೇ ನಿರ್ದಿಷ್ಟ ಮಾದರಿಗೆ ಯಾವಾಗಲೂ ಬದ್ಧವಾಗಿರುವುದಿಲ್ಲ. ಬದಲಾದ ಭಾಷಾನಿಯಮಗಳು, ಬದಲಾಗುತ್ತಿರುವ ಪಠ್ಯಕ್ರಮಗಳು, ಭಾಷೆಯನ್ನು ನೋಡುವ ಬದಲಾದ ದೃಷ್ಟಿ, ಮಾನವ ಭಾಷೆಗಳ ಬಗ್ಗೆ ಸಂಗ್ರಹವಾದ ಹೆಚ್ಚುವರಿ ಮಾಹಿತಿ ಇತ್ಯಾದಿಗಳಿಂದಾಗಿ ವ್ಯಾಕರಣ ಕೃತಿಗಳ ಅಧ್ಯಯನದಲ್ಲಿ ವ್ಯತ್ಯಾಸಗಳಾಗಿರುವುದು ಸ್ಪಷ್ಟವಾಗಿ ಕಂಡುಬರುತ್ತದೆ. ಕಾಲದಿಂದ ಕಾಲಕ್ಕೆ ಆದ ಮತ್ತು ಆಗುತ್ತಿರುವ ಇಂತಹ ಬದಲಾವಣೆಗಳು ಕನ್ನಡ ಭಾಷಾ ಶ್ರೀಮಂತಿಕೆಯನ್ನು ತಿಳಿಯಲು ಸಹಾಯಕವಾಗುತ್ತವೆ.

## ೧.೨ ಭಾಷಾವಿಜ್ಞಾನದ ಹಿನ್ನೆಲೆಯಲ್ಲಿ ರೂಪಿಸಿರುವ ಪಠ್ಯಗಳಲ್ಲಿ ಕಂಡುಬರುವ ವಿಚಾರಗಳು

ಕನ್ನಡ ಪಠ್ಯಪುಸ್ತಕಗಳಲ್ಲಿ ಬಳಕೆಯಲ್ಲಿರುವ ಹಲವು ಭಾಷಿಕ ಮಾದರಿಗಳನ್ನು ವಿಶ್ಲೇಷಣೆ ಮಾಡಲಾಗಿದೆ. ಅಂತಹ ಹಲವು ಭಾಷಿಕ ಮಾದರಿಗಳಲ್ಲಿ ಭಾಷಾವಿಜ್ಞಾನ ಮಾದರಿಯೂ ಹೌದು. ಪಠ್ಯಪುಸ್ತಕಗಳಲ್ಲಿನ ವ್ಯಾಕರಣ, ಭಾಷೆಯ ರಚನೆಯನ್ನು ಕಲಿಸುವುದಕ್ಕೆ ಭಾಷಾವಿಜ್ಞಾನದ ಹಿನ್ನೆಲೆಯಲ್ಲಿ ರೂಪಿಸಿರುವ ವ್ಯಾಕರಣ ವಿಚಾರಗಳನ್ನು ಈ ಅಧ್ಯಾಯದಲ್ಲಿ ಚರ್ಚೆಮಾಡುವ ಪ್ರಯತ್ನವನ್ನು ಮಾಡಲಾಗಿದೆ.

ಭಾಷಾವಿಜ್ಞಾನದ ಪ್ರಭಾವದಿಂದ ವ್ಯಾಕರಣ ಅಧ್ಯಯನದಲ್ಲಿ ಹಲವಾರು ವೈಜ್ಞಾನಿಕ ಚಿಂತನ ಧಾರೆಗಳು ಜರುಗಿವೆ. ಉದಾಹರಣೆಗೆ : ಕನ್ನಡ ಪಠ್ಯಪುಸ್ತಕದಲ್ಲಿ ಅಳವಡಿಸಿರುವ ಕಠಿಣಪದಗಳಿಗೆ ಅರ್ಥ, ವಿರುದ್ಧಾರ್ಥಕ ಪದಗಳು, ಸಮಾನಾರ್ಥಕ ಪದಗಳು, ನಾನಾರ್ಥಕ ಪದಗಳು, ಸಂಧಿ, ಸಮಾಸ ಮುಂತಾದ ವಿಚಾರಗಳನ್ನು ವಿಶ್ಲೇಷಣೆ ಮಾಡಿರುವ ಮಾದರಿ ಸರಿಯಾದದ್ದಲ್ಲ. ಪದಗಳಲ್ಲಿ ಅಥವಾ ಧ್ವನಿಗಳಲ್ಲಿ ಯಾವುದು ಸರಳ ಅಲ್ಲ. ಹಾಗೆಯೇ ಯಾವುದು ಕಠಿಣ ಅಲ್ಲ. ಈ ಸರಳ ಮತ್ತು ಕಠಿಣ ಪರಿಭಾಷೆಗಳು ಬಳಸುವವರ ಮನೋದೃಷ್ಟಿಕೋನದ ಮೇಲೆ ನಿಂತಿದೆ. ಸೃಜನಶೀಲ ಸಾಹಿತಿಗಳು ಈ ರೀತಿಯ ಸರಳ ಮತ್ತು ಕಠಿಣ ಎಂಬ ಪದಗಳ ವರ್ಗೀಕರಣವಿದ್ದರೆ ಅವರು (ಸಾಹಿತಿಗಳು) ಸರಳವಾಗಿರುವುದನ್ನೋ ಬಳಕೆ ಮಾಡುತ್ತಿದ್ದರೇನೋ? ಸಾಮಾಜಿಕರಿಗಾಗಿ ರಚನೆಯಾಗಿರುವ ಸೃಜನಶೀಲ ಸಾಹಿತ್ಯವನ್ನು ಗ್ರಹಿಸಿ ಸಾಮಾಜಿಕರ

ಮಾತುಗಳನ್ನೇ ಸೃಜನಶೀಲವಾಗಿ ಮಂಡಿಸಿರುವ ಮಾತುಗಳನ್ನು ವ್ಯಾಕರಣ ಪಂಡಿತರು ತಮ್ಮ ದೃಷ್ಟಿಕೋನದ ಮೂಲಕ ಸರಳ ಮತ್ತು ಕಠಿಣವೆಂಬ ವರ್ಗೀಕರಣದಡಿಯಲ್ಲಿ ಚರ್ಚೆಮಾಡಿದ್ದಾರೆ. ಈ ಮಾದರಿ ಸರಿಯಾದದ್ದಲ್ಲ ಎಂದು ಮನಗಂಡು ಪಠ್ಯಪುಸ್ತಕದ ರಚನಾ ಸಮಿತಿಯಲ್ಲಿ ಭಾಷಾವಿಜ್ಞಾನದ ಪ್ರಭಾವವಿರುವ ವ್ಯಕ್ತಿಗಳು ಆ ಪರಿಭಾಷೆಗಳನ್ನು ತೆಗೆದು ಹಾಕಿ ಭಾಷಾವಿಜ್ಞಾನದಿಂದ ಕಸಿಗೊಂಡ ರೂಪಗಳನ್ನು ಪಠ್ಯಪುಸ್ತಕಗಳಲ್ಲಿ ಬಳಸಿರುವುದು ಕಂಡುಬರುತ್ತದೆ.

ಮಾತು ಮತ್ತು ಬರಹ ಹತ್ತಿರ ಇರಬೇಕು. ಅರ್ಥವ್ಯತ್ಯಾಸಕ್ಕೆ ಅವಕಾಶವಿರಬಾರದು. ಪದಗಳ ತಪ್ಪು ಗ್ರಹಿಕೆ ಮತ್ತು ತಪ್ಪು ಉಚ್ಚಾರದಿಂದ ಬರಹ ವ್ಯತ್ಯಾಸದಿಂದ ಕೂಡಿರುತ್ತದೆ. ಹ್ರಸ್ವ, ದೀರ್ಘ, ಅಲ್ಪಪ್ರಾಣ, ಮಹಾಪ್ರಾಣ, ಋ, ಶ, ಷ, ಸ, 'ಅ'ಕಾರ, 'ಹ'ಕಾರ ಮೊದಲಾದ ಧ್ವನಿ ವ್ಯತ್ಯಾಸ ಮತ್ತು ಅರ್ಥ ವ್ಯತ್ಯಾಸಗಳನ್ನು ತಿಳಿಸಲೋಸುಗ ಕನ್ನಡದ ಶಿಷ್ಟ ಭಾಷಾರೂಪಗಳೊಂದಿಗೆ ಪ್ರಾದೇಶಿಕ, ಸಾಮಾಜಿಕ, ಸಾಂಸ್ಕೃತಿಕ ಪ್ರಭೇದವನ್ನು ಗಮನಿಸುತ್ತ, ಭಾಷಾ ಸಂಪ್ರದಾಯವನ್ನು ತಿರಸ್ಕರಿಸದೆ ಆಧುನಿಕತೆ ಮತ್ತು ದೇಶೀಯತೆಯ ಹಂಬಲದಿಂದ ಆಧುನಿಕ ಭಾಷಾವಿಜ್ಞಾನದ ನೆಲೆಯಲ್ಲಿ ಶುದ್ಧ ರೂಪಗಳು, ಶಿಷ್ಟ ರೂಪಗಳು, ರಚನಾ ರೂಪಗಳು, ಸರಿಯಾದ ರೂಪಗಳು, ಧ್ವನಿ ಉಚ್ಚಾರ ಮತ್ತು ಧ್ವನಿ ವ್ಯತ್ಯಾಸ ಎಂಬ ಕಸಿಗೊಂಡ ರೂಪಗಳನ್ನು ಸಮಕಾಲೀನ ಪಠ್ಯಪುಸ್ತಕಗಳಲ್ಲಿ ದಾಖಲಿಸಲಾಗಿದೆ.

ಉದಾಹರಣೆ

೧. ಶಿಷ್ಟರೂಪಗಳನ್ನು ಬರೆಯಿರಿ

**ಮಾದರಿ : ಛಲೋ – ಚನ್ನಾಗಿ**

ಬಾಳ – ..................

ಸಿಕ್ತು – ..................

ಆಯ್ತು – ..................

ದಿನಾಲೂ – ..................

ಮ್ಯಾಲೆ – ..................

೨. ಓದಿ – ಗಮನಿಸಿ ಅರ್ಥ ತಿಳಿಯಿರಿ

ಆರಿಸು – ಹಾರಿಸು
ಒಂದನೆ – ವಂದನೆ
ದನ – ಧನ

ಪ್ರದಾನ – ಪ್ರಧಾನ
ಸ್ಥಳ – ತಳ

೩. ಸರಿಯಾದ ರಚನಾ ರೂಪವನ್ನು ಬರೆಯಿರಿ

**ಮಾದರಿ : ಸಬ್ದ – ಶಬ್ದ**

| | | | | | |
|---|---|---|---|---|---|
| ಸಂಕರ | – | ........... | ಕೇಮ | – | .............. |
| ಎಸರು | – | ............ | ಆಶ್ಚರ | – | .............. |
| ಇವಲ | – | ............ | ವ್ಯತಾಸ | – | ............... |
| ವಿಲಾಸ | – | ........... | ಪೂಜರು | – | .............. |
| ವಿಶಾಂತಿ | – | ........... | ಮನುಷ | – | ............... |

೪. ಸರಿಯಾದ ರೂಪವನ್ನು ಗುರುತಿಸಿ ಬರೆಯಿರಿ

ಹೆಣ್ಣು – ಎಣ್ಣು ................
ತಾಇ – ತಾಯಿ .................
ಅಳು – ಹಳು .................
ಉಟ್ಟಿ – ಹುಟ್ಟಿ ..............

೫. ಸ್ಪಷ್ಟವಾಗಿ ಧ್ವನಿ ಉಚ್ಚಾರ ಮಾಡಿ – ಓದಿ ಅರ್ಥ ವ್ಯತ್ಯಾಸ ತಿಳಿಸಿ

ಬಳೆ – ಬಲೆ
ನಾಳೆ – ನಾಲೆ
ಓಲೆ – ಒಲೆ
ಹೆಮ್ಮೆ – ಎಮ್ಮೆ
ಚಿನ್ನ – ಚಿಣ್ಣ

ಸಮಕಾಲೀನ ಸಂದರ್ಭದ ಪಠ್ಯಪುಸ್ತಕಗಳಲ್ಲಿನ ವ್ಯಾಕರಣಾಂಶಗಳ ಪ್ರಕ್ರಿಯೆಯಲ್ಲಿ ಪುಲ್ಲಿಂಗ ಮತ್ತು ಸ್ತ್ರೀಲಿಂಗ, ವಿರುದ್ಧ ಪದಗಳು, ವಿರುದ್ಧಾರ್ಥಕ ಪದಗಳು ಎಂಬ ವರ್ಗೀಕರಣದಡಿಯಲ್ಲಿ ಚರ್ಚೆ ಮಾಡಲಾಗಿದೆ. ಭಾಷಿಕರಲ್ಲಿ ವಿರುದ್ಧ ಪದಗಳು ಬಳಕೆಯಲ್ಲಿ ಇಲ್ಲ. ಯಾವ ವ್ಯಕ್ತಿ ಯಾವ ಪದಕ್ಕೂ ವಿರುದ್ಧ ಅಲ್ಲ, ವಿರುದ್ಧವೆಂಬುದು ಭಾಷೆಯೊಳಗಿಲ್ಲ. ಬಳಸುವುದರಲ್ಲಿದೆ. ಗಂಡು ಹೆಣ್ಣಿಗೆ ವಿರುದ್ಧ, ತಾಯಿ ತಂದೆಗೆ ವಿರುದ್ಧ, ಅಕ್ಕ ತಮ್ಮನಿಗೆ ವಿರುದ್ಧ, ಅಣ್ಣ ಅಕ್ಕನಿಗೆ ವಿರುದ್ಧ ಎಂಬ ವ್ಯಾಕರಣಾಂಶಗಳನ್ನು ಗಮನಿಸಿದಾಗ ಭಾಷಾವಿಜ್ಞಾನದ ಹಿನ್ನೆಲೆಯಲ್ಲಿ ರೂಪಿಸಿರುವ ಪಠ್ಯಗಳಲ್ಲಿ ಬದಲಾವಣೆ ಆಗಿರುವುದು ಕಂಡುಬರುತ್ತದೆ. ಎಲ್ಲೂ ಮಕ್ಕಳಿಗೆ ವಿರುದ್ಧ ಎಂಬುದನ್ನು ನೇರವಾಗಿ

ಕಲಿಸದೆ ನಾವು ಸಾಮಾಜಿಕರಲ್ಲಿ ಬಳಕೆಯಲ್ಲಿರುವ ಹೆಣ್ಣು ಸೂಚಕ ಪದಗಳು, ಗಂಡು ಸೂಚಕ ಪದಗಳು (ಪುರುಷ ರೂಪಗಳು, ಸ್ತ್ರೀರೂಪಗಳು) ಎಂದು ದಾಖಲಿಸಲಾಗಿದೆ.

ಉದಾಹರಣೆ

೧. ಕೊಟ್ಟಿರುವ ಪದಗಳ ಸ್ತ್ರೀ ರೂಪ ಬರೆಯಿರಿ

| | | | |
|---|---|---|---|
| ಸದಸ್ಯ | ................. | ವೈದ್ಯ | .................. |
| ಅಧ್ಯಕ್ಷ | ................. | ತಜ್ಞ | .................. |
| ಶಿಕ್ಷಕ | ................. | ಕಾರ್ಯಕರ್ತ | .................. |
| ಗಾಯಕ | ................. | ನಾಯಕ | .................. |
| ಗೆಳೆಯ | ................. | ಅಜ್ಜ | .................. |
| ತಮ್ಮ | ................. | ಸಿಂಹ | .................. |
| ರಾಜ | ................. | ವಿದೂಷಕ | .................. |
| ಶಿಷ್ಯ | ................. | ಭಕ್ತ | .................. |

೨. ಕೊಟ್ಟಿರುವ ಪದಗಳ ಪುರುಷ ರೂಪ ಬರೆಯಿರಿ

| | | | |
|---|---|---|---|
| ಅಕ್ಕ | .............. | ಮಗಳು | .............. |
| ಲೇಖಕಿ | .............. | ಇವಳು | .............. |
| ಪಂಡಿತೆ | .............. | ವಿಜೇತೆ | ............... |
| ಒಡತಿ | .............. | ವಿದುಷಿ | ............... |
| ಪರಿಣಿತೆ | .............. | ಕಲಾವಿದೆ | ............... |
| ಗಾಯಕಿ | .............. | ಅಧ್ಯಾಪಕಿ | ............... |
| ಕವಯಿತ್ರಿ | .............. | ಅಧ್ಯಕ್ಷೆ | ............... |

ಹೆಣ್ಣು ಅಥವಾ ಗಂಡು ಎಂಬುದನ್ನು ಸೂಚಿಸುವ ಪದಗಳು ಮತ್ತು ಇತರೆ ವಸ್ತುಗಳನ್ನು ಸೂಚಿಸುವ ಪದಗಳನ್ನು ಕೆಳಗೆ ಮಾದರಿಯೊಂದಿಗೆ ಕೊಡಲಾಗಿದೆ. ಅವುಗಳನ್ನು ಓದಿ ತಿಳಿಯಿರಿ.

೧. ಶಬೀನ ಶಾಲೆಗೆ ಹೋಗುತ್ತಾಳೆ (ಹೆಣ್ಣು)

೨. ಶ್ರೀಧರ ಆಟವಾಡಿ ಹೊತ್ತು ಕಳೆದನು (ಗಂಡು)

೩. ದನ ಹುಲ್ಲನ್ನು ಮೇಯುತ್ತದೆ (ಪ್ರಾಣಿ)

೪. ಪುಸ್ತಕ ಮೇಜಿನ ಮೇಲಿದೆ (ವಸ್ತು)

ಇಲ್ಲಿ ವ್ಯಾಕರಣದ ಪರಿಭಾಷೆಗಳಾದ 'ಲಿಂಗಗಳು' ಪದಕ್ಕೆ ಪೂರಕವಾಗಿ ಗಂಡು, ಹೆಣ್ಣು, ಇವೆರಡಕ್ಕೂ ಹೊರತಾಗಿರುವ ಪ್ರಾಣಿ, ವಸ್ತುಗಳನ್ನು ಗುರುತಿಸಲು ಪ್ರಯತ್ನಿಸಲಾಗಿದೆ. ಪುಲ್ಲಿಂಗ, ಸ್ತ್ರೀಲಿಂಗ ಮತ್ತು ನಪುಂಸಕಲಿಂಗಗಳಿಗೆ ಬದಲಾಗಿ ಗಂಡು, ಹೆಣ್ಣು, ಉಳಿದವುಗಳು ಎಂದು ಹೇಳಿರುವುದು ಆಧುನಿಕ ಭಾಷಾ ವಿಜ್ಞಾನದಿಂದ ಕಸಿಗೊಂಡ ರೂಪಗಳೇ ಆಗಿವೆ.

ಪದಕೋಶವೆಂದರೆ ಪದಗಳನ್ನು ಅವುಗಳ ಅರ್ಥಗಳನ್ನು ಒಳಗೊಂಡ ಕೋಶಕ್ಕೆ ಪದಕೋಶವೆಂದು ಹೇಳಲಾಗುತ್ತದೆ. ಸ್ವಾತಂತ್ರ್ಯಪೂರ್ವದ ಪಠ್ಯಪುಸ್ತಕಗಳನ್ನು ಗಮನಿಸಿದಾಗ ಪಠ್ಯದ ನಂತರ 'ಶಬ್ದಾವಳಿ' ಭಾಗದಲ್ಲಿ ಒಂದು ಪದಕ್ಕೆ ಒಂದಕ್ಕಿಂತ ಹೆಚ್ಚು ಅರ್ಥವನ್ನು ನೀಡುವ ಭಾಗಕ್ಕೆ ಶಬ್ದಾವಳಿ ಎಂದು ಕರೆದರೆ, ಸ್ವಾತಂತ್ರ್ಯ ನಂತರದಲ್ಲಿ ಕಠಿಣ ಪದಗಳಿಗೆ ಅರ್ಥ ಎಂದು ಕರೆಯಲಾಗಿದೆ. ಆದರೆ ಸಮಕಾಲೀನ ಸಂದರ್ಭದ ಪಠ್ಯಪುಸ್ತಕಗಳನ್ನು ಗಮನಿಸಿದಾಗ ಓದಿ ತಿಳಿ, ಗಮನಿಸಿ ತಿಳಿ, ಪದ-ಗದ್ಯಾರ್ಥ, ಪದ-ಪದ್ಯಾರ್ಥ, ಶಬ್ದಾರ್ಥ, ಓದಿ ಅರ್ಥೈಸಿ, ಪದಕೋಶ, ಪದಕೋಠಿ, ಪದಕಣಜ, ನುಡಿಕಣಜ ಎಂದು ಕರೆಯಲಾಗಿದೆ. ಪದ ಗದ್ಯಾರ್ಥವೆಂದರೆ ಗದ್ಯಭಾಗದಲ್ಲಿ ಬರುವ ಕಠಿಣ ಪದಗಳ ಅರ್ಥವೆಂತಲೂ, ಪದ ಪದ್ಯಾರ್ಥವೆಂದರೆ ಪದ್ಯಭಾಗದಲ್ಲಿ ಬರುವ ಕಠಿಣ ಪದಗಳ ಅರ್ಥವೆಂತಲೂ ತಿಳಿಸಲಾಗಿದೆ. ಪಠ್ಯದ ಕೊನೆಯಲ್ಲಿ 'ಪದಗಳ ಸಂಗ್ರಹ' ಶೀರ್ಷಿಕೆಯಡಿ ಮೈಸೂರು ಸರಕಾರದ ಇಲಾಖೆ ಪಠ್ಯಪುಸ್ತಕಗಳಲ್ಲಿ ಇಡೀ ಪಠ್ಯದಲ್ಲಿಯ ಕಠಿಣ ಪದಗಳನ್ನು ಒಂದು ಕಡೆ ಸಂಗ್ರಹಿಸಿ ಕೊಡುವುದು ಪದಗಳ ಸಂಗ್ರಹವಾಗಿದೆ. ಸಮಕಾಲೀನ ಪಠ್ಯಪುಸ್ತಕಗಳಲ್ಲಿ ಪಠ್ಯಾಧಾರಿತ ಪದಕೋಶ, ಪಠ್ಯಾಧಾರಿತ ಪದಕೋಠಿ ಅಡಿಯಲ್ಲಿ ಇಡೀ ಪಠ್ಯದಲ್ಲಿ ಬರುವ ಕಠಿಣ ಪದಗಳನ್ನು ಉಗ್ರಾಣದಲ್ಲಿ ದವಸಧಾನ್ಯಗಳನ್ನು ಸಂಗ್ರಹಿಸುವಂತೆ ಪಠ್ಯಗಳ ಕೊನೆಯಲ್ಲಿ ಪದಗಳನ್ನು ಸಂಗ್ರಹಿಸಿ ಕೊಟ್ಟಿರುವುದು ಪಠ್ಯಾಧಾರಿತ ಪದಕೋಶ/ಪದಕೋಠಿಯಾಗಿದೆ. ಈ ಅಂಶಗಳನ್ನು ಗಮನಿಸಿದಾಗ ಇಲ್ಲಿ ತಿಳಿದುಬರುವ ಸಂಗತಿಗಳೆಂದರೆ ಸ್ವಾತಂತ್ರ್ಯ ಪೂರ್ವದಲ್ಲಿ ಸಂಸ್ಕೃತಕ್ಕೆ ಕನ್ನಡವನ್ನು, ಸ್ವಾತಂತ್ರ್ಯ ನಂತರದಲ್ಲಿ ಕನ್ನಡಕ್ಕೆ ಸಂಸ್ಕೃತವನ್ನು, ಸಮಕಾಲೀನ ಸಂದರ್ಭದಲ್ಲಿ ಕನ್ನಡಕ್ಕೆ ಕನ್ನಡವನ್ನು ಬಳಕೆ ಮಾಡಿರುವುದು ಗಮನಿಸುವಂತಹ ಅಂಶವಾಗಿದೆ.

ಉದಾಹರಣೆ

೧. ಶಬ್ದಾವಳಿ

ರೆಂಬೆ, ತುದಿ, ಓಟೆ, ಬೀಜ, ಚಿಗುರು, ತೊಗಟೆ, ಕೊಂಬೆಗಳು, ತೊಟ್ಟು, ಮಿಡಿ, ಸಂತೆ, ಅಂಗಡಿ, ಮಾರ್ಗ, ತರಕಾರಿಗಳು, ಪಾತ್ರೆಗಳು, ಜೀನಸು, ಉಪ್ಪು, ಕಾರ, ಹುಳಿ, ಮರಗಿಡಗಳು, ಹೊಲಗದ್ದೆಗಳು, ಹಣ್ಣುಹಂಪಲುಗಳು ಇತ್ಯಾದಿ.

೨. ಪದಗಳ ಸಂಗ್ರಹ

| | | | |
|---|---|---|---|
| ಅಗಾದ | ಅತ್ಯಂತ | ಅನ್ವಯಿಸು | ಅನುಯಾಯಿ |
| ಅಗ್ನಿಪರ್ವತ | ಅಧಿಕಾರ | ಅನಾಹುತ | ಅಪಮಾನ |
| ಅಚ್ಚುಕಟ್ಟುತನ | ಅಧಿವೇಶನ | ಅನುಭವ | ಅವಮಾನ |
| ಅಣಿಗೊಳಿಸು | ಅದ್ಭುತ | ಅನನುಭವಿ | ಅಪರಾಧ |
| ಅಣೆಕಟ್ಟು | ಅನ್ನದಾತ | ಅನುಮಾನ | ಅಪೌರ |

೩. ಅರ್ಥ ಸಹಿತ ಪದಕೋಶ

ಅಂಬುಧಿ – ಸಮುದ್ರ
ಅರ್ಧರಾತ್ರಿ – ಇರುಳಿನ ನಡುಭಾಗ

ಅಕ್ಕರೆ – ಪ್ರೀತಿ
ಅಧ್ಯಾಪಕಿ – ಉಪಾಧ್ಯಾಯಿ

ಅಕ್ಕರ– ಅಕ್ಷರ
ಅಕ್ಷರ – ನಾಶವಿಲ್ಲದ್ದು

ಅಜ್ಞಾನ – ತಿಳುವಳಿಕೆ ಇಲ್ಲದ
ಅರಣ್ಯ – ಕಾಡು

ಅಪೇಕ್ಷೆ – ಬಯಕೆ
ಅನುಕಂಪ – ಸಹಾನುಭೂತಿ

೪. ಅರ್ಥಸಹಿತ ಪದಕೋಶ

ಅಂಗ – ದೇಹದ ಒಂದು ಭಾಗ
ಅಂಧ – ಕುರುಡ

ಅಂಚಲ – ಸೆರಗು ತುದಿ
ಆಳ – ಗಂಭೀರ

ಅಂಜನ – ಕಾಡಿಗೆ
ಇಣಚಿ – ಅಳಿಲು

ಅಂಡ – ತತ್ತಿ, ಮೊಟ್ಟೆ
ಇನ – ಸೂರ್ಯ

ಅಂತ್ಯ – ಕೊನೆ
ಉಚ್ಚ – ಎತ್ತರ

೫. ಪಠ್ಯಾಧಾರಿತ ಪದಕೋಶ

ಅಂಗಾಲಾಚು – ಮೊರೆಯಿಡು, ಬೇಡು
ಅಲವಳಿಸು – ದುಖಿಃಸು

ಅಂಬರ – ಆಕಾಶ
ಅಳವೇ – ಅಸಾಧ್ಯ

ಅಂಬು – ಬಾಣ
ಅಳ್ಕಿ – ನಾಚಿ

ಅಂಬುಜ – ತಾವರೆ, ಕಮಲ
ಉಸುಬು – ಮರಳು

ಅಮರ – ಶಾಶ್ವತ
ಎಳೆವೆ – ಬಾಲ್ಯ

ಭಾಷೆಯನ್ನು ಪರಿಣಾಮಕಾರಿಯಾಗಿ ಬಳಸುವ ಹಿನ್ನೆಲೆಯಲ್ಲಿ ಒಂದು ಪದದ ಜೊತೆಗೆ ಅದೇ ಅರ್ಥ ಛಾಯೆಯುಳ್ಳ ಅಥವಾ ಅದಕ್ಕೆ ಪೂರಕ ಅರ್ಥದ ಮತ್ತೊಂದು ಪದವನ್ನು ಜೊತೆಗೂಡಿಸಿ ಬಳಸುವಂತಹ ನುಡಿಗಳನ್ನು ಜೋಡುನುಡಿಗಳೆಂದು ಕರೆಯುವರು. ಸಮಕಾಲೀನ ಸಂದರ್ಭದ ಪಠ್ಯಪುಸ್ತಕಗಳಲ್ಲಿ ಜೋಡುಪದಗಳು, ಜೋಡಿಪದಗಳು, ಸಾಮ್ಯಪದಗಳು ಎಂಬ ಕಸಿಗೊಂಡ ರೂಪಗಳನ್ನು ದಾಖಲಿಸಲಾಗಿದೆ.

ಉದಾಹರಣೆ

೧. ಕೊಟ್ಟಿರುವ ಪದಗಳಿಗೆ ಜೋಡಿಪದಗಳನ್ನು ಹೇಳಿ

**ಮಾದರಿ : ಭೂಮಿ – ಆಕಾಶ**

ಬೆಟ್ಟ ................ ಪಂಚೆ ................

ಪಾಠ ................ ತಮ್ಮ ................

ಅಣ್ಣ ................ ಮುತ್ತು ................

ನೋವು ................ ಹಳ್ಳ ................

ಗಿಡ ................ ಅಪ್ಪ ................

೨. ಕೊಟ್ಟಿರುವ ಜೋಡುಪದಗಳನ್ನು ಹೇಳಿ

ಮರಬಳ್ಳಿ ಪೈರುಪಚ್ಚೆ

ಬಂಧುಬಳಗ ಹೊಲಗದ್ದೆ

ಮನೆಮಠ ಹಿರಿಮೆಗರಿಮೆ

ತಿಂಡಿತೀರ್ಥ ಊಟುಪಚಾರ

ಗಿಡಗಂಟೆ ಆಟಪಾಟ

ಒನಪುಒಯ್ಯಾರ ಹಳ್ಳಕೊಳ್ಳ

೩. ಕೊಟ್ಟಿರುವ ಪದ ಓದಿ ಅದೇ ತೆರನಾದ ಸಾಮ್ಯಪದ ಬರೆಯಿರಿ

ಮೃಗ – ಖಗ ............................

ಶುಕ – ಪಿಕ ............................

ಹಾಲು – ಹಣ್ಣು ............................

ಗಿಡ – ಗಂಟೆ ............................

ಕಾಡು – ಮೇಡು ............................

ಮರ – ಮುಟ್ಟು ............................

ವಿರುದ್ಧಾರ್ಥಕ ನುಡಿಗಳನ್ನು ಸ್ವಾತಂತ್ರ್ಯ ಪೂರ್ವದಲ್ಲಿ ವಿಪರೀತಾರ್ಥ ನುಡಿಗಳೆಂದು, ಮಾರ್ನುಡಿಗಳೆಂತಲೂ ಕರೆಯುತ್ತಿದ್ದರು. ಮೈಸೂರು ಸರಕಾರದ ಇಲಾಖೆ ಪಠ್ಯಪುಸ್ತಕಗಳಲ್ಲಿ ಎದುರು ಪದಗಳೆಂದು ಕರೆಯುತ್ತಿದ್ದರೆ, ಸಮಕಾಲೀನ ಪಠ್ಯಪುಸ್ತಕಗಳಲ್ಲಿ ವಿರುದ್ಧ ಪದಗಳು, ವಿರೋಧ ಪದಗಳು, ವಿರುದ್ಧಾರ್ಥಕ ಪದಗಳೆಂದು ದಾಖಲಿಸಲಾಗಿದೆ. ಈ ವಿರುದ್ಧ ಪದಗಳು ಎರಡು ಪದಗಳಿದ್ದು ಒಂದರ ವಿರುದ್ಧಾರ್ಥ ಕೊಡುವ ಇನ್ನೊಂದು ಪದವಿರುತ್ತದೆ. ಕಾರಣ ಇವುಗಳನ್ನು ವಿರುದ್ಧಾರ್ಥಕ ಜೋಡುನುಡಿಗಳೆಂತಲೂ ಕರೆಯಲಾಗುತ್ತದೆ.

ಉದಾಹರಣೆ

೧. ವಿಪರೀತಾರ್ಥ ನುಡಿಗಳು

| | |
|---|---|
| ತಪ್ಪು X ಒಪ್ಪು | ಆಸ್ತಿಕ X ನಾಸ್ತಿಕ |
| ಉಪಕಾರ X ಅಪಕಾರ | ಅಳಿವು X ಉಳಿವು |
| ಶತೃ X ಮಿತ್ರ | ಬಡತನ X ಸಿರಿತನ |
| ಸತ್ಯ X ಮಿಥ್ಯ | ಉದಯ X ಅಸ್ತ |
| ಚಿಕ್ಕದು X ದೊಡ್ಡದು | ಮೇಲು X ಕೀಳು |

೨. ಎದುರು ಪದಗಳು

| | |
|---|---|
| ಮುಂದು X ಹಿಂದು | ಎಡ X ಬಲ |
| ಕೊಳ್ಳುವುದು X ಮಾರುವುದು | ಜ್ಞಾನ X ಅಜ್ಞಾನ |
| ದೂರ X ಹತ್ತಿರ | ಶ್ರೇಷ್ಠ X ಕನಿಷ್ಠ |
| ಈಗ X ಆಗ | ಉಚ್ಚ X ನೀಚ |

೩. ವಿರುದ್ಧ / ವಿರುದ್ಧಾರ್ಥಕ ಪದಗಳು

| | | |
|---|---|---|
| ಬಾಲ್ಯ | ................. | ನೀಡುತ X ಬೇಡುತ |
| ಕೋಪ | ................. | ಹಾಕುತ X ತೆಗೆಯುತ |
| ಅಳು | ................. | ಮುರಿಯುತ X ಕೂಡಿಸುತ |
| ರಕ್ಷಣೆ | ................. | ಏರುತ X ಇಳಿಯುತ |
| ದುಷ್ಟ | ................. | ಎಳೆಯುತ X ನೂಕುತ |

೪. ವಿರೋಧಾರ್ಥಕ ಪದಗಳು

| | | | |
|---|---|---|---|
| ಸಜ್ಜನ | X ದುರ್ಜನ | ಜ್ಞಾನ | X ಅಜ್ಞಾನ |
| ಆಚಾರ | X ಅನಾಚಾರ | ಹಳೆ | X ಹೊಸ |
| ಧರ್ಮ | X ಅಧರ್ಮ | ಸಾಕು | X ಬೇಕು |
| ಅಂತರಂಗ | X ಬಹಿರಂಗ | ಹಿಡಿ | X ಬಿಡು |
| ಯೋಗ್ಯ | X ಅಯೋಗ್ಯ | ಜಯ | X ಅಪಜಯ |

ದ್ವಿರುಕ್ತಿ ಎಂಬ ಶಬ್ದವನ್ನು ಬಿಡಿಸಿ ನೋಡುವುದಾದರೆ 'ದ್ವಿ' ಎಂದರೆ ಎರಡು, 'ಉಕ್ತಿ' ಎಂದರೆ ಮಾತು ಎಂದರ್ಥ. ಒಂದು ವಿಶೇಷಾರ್ಥವನ್ನು ವ್ಯಕ್ತಪಡಿಸುವುದಕ್ಕಾಗಿ ಒಂದು ಪದವನ್ನು ಅವಕಾಶ ಅಥವಾ ಬಿಡುವಿಲ್ಲದೆ ಎರಡು ಸಲ ಪ್ರಯೋಗಿಸುವುದನ್ನು ದ್ವಿರುಕ್ತಿ ಎಂದು ಕರೆಯಲಾಗುತ್ತದೆ. ಶಾಲಾ ವ್ಯಾಕರಣಗಳಲ್ಲಿ ಮತ್ತು ಸ್ವಾತಂತ್ರ್ಯ ಪೂರ್ವ ಹಾಗೂ ನಂತರದ ಪಠ್ಯಪುಸ್ತಕಗಳಲ್ಲಿ 'ದ್ವಿರುಕ್ತಿ' ಎಂಬ ಮಾತನ್ನು ಉಳಿಸಿಕೊಂಡು ಬರಲಾಗಿದೆ. ಆದರೆ ಸಮಕಾಲೀನ ಪ್ರಾಥಮಿಕ ಶಾಲಾ ಕನ್ನಡ ಪಠ್ಯಪುಸ್ತಕಗಳಲ್ಲಿ ದ್ವಿರುಕ್ತಿಗೆ ಬದಲಾಗಿ ಪುನರಾವರ್ತಿತ ರೂಪಗಳು, ಪುನರುಚ್ಚರಿತ ರೂಪಗಳು ಎಂದು ದಾಖಲಿಸಲಾಗಿದೆ.

ಉದಾಹರಣೆ

೧. ಕೊಟ್ಟಿರುವ ಪುನರಾವರ್ತಿತ ರೂಪಗಳನ್ನು ಸ್ಪಷ್ಟವಾಗಿ ಓದಿ

| | | |
|---|---|---|
| ಹೌದುಹೌದು | ನಿಲ್ಲುನಿಲ್ಲು | ನಡೆನಡೆ |
| ಮನೆಮನೆ | ಹೋಗುಹೋಗು | ಊರುಊರು |
| ಬನ್ನಿಬನ್ನಿ | ಮೇಲೆಮೇಲೆ | ಆಗಲಿಆಗಲಿ |
| ಬೇಡಬೇಡ | ಇರಲಿಇರಲಿ | ಓಡುಓಡು |
| ಹಿಡಿಹಿಡಿ | ಹಾವುಹಾವು | ಬರಲಿಬರಲಿ |

೨. ಕೊಟ್ಟಿರುವ ಪದಗಳನ್ನು ಪುನರುಚ್ಚರಿಸಿರಿ

| | | | |
|---|---|---|---|
| ತಮ್ಮ | – | ತಮ್ಮಲ್ಲಿ | ಗುಡುಗುಡು |
| ಮೆಲ್ಲ | – | ಮೆಲ್ಲನೆ | ಗಡಗಡ |
| ಕಿಲ | – | ಕಿಲನೆ | ಡಬಡಬ |
| ನಗು | – | ನಗುತ್ತಾ | ಧೋಧೋ |

ಭಾಷೆಯಲ್ಲಿ ಒಂದು ಅರ್ಥವನ್ನು ಸೂಚಿಸುವ ಹಲವು ಪದಗಳು ಚಲಾವಣೆಯಲ್ಲಿರುತ್ತವೆ. ಈ ಪದಗಳು ಹಲವಾರು ಸಲ ಒಂದೇ ಅರ್ಥದ

ಛಾಯೆಯನ್ನು ಹೊಂದಿರುತ್ತವೆ. ಇಂಥ ನುಡಿಗಳನ್ನು ನಾವು ಸಮಾನಾರ್ಥಕ ಪದಗಳೆಂದು ಕರೆಯುತ್ತೇವೆ. ಈ 'ಸಮಾನಾರ್ಥಕಪದ'ಕ್ಕೆ ಪೂರಕವಾಗಿ ಸಮಕಾಲೀನ ಪಠ್ಯಪುಸ್ತಕಗಳಲ್ಲಿ ಸಮಾನಾರ್ಥಕ ಪದಬಳ್ಳಿ, ನೆನಪಿನಂಗಳದ ಪದಬಳ್ಳಿ, ಪದಬಳ್ಳಿ, ನೆನಪಿನಂಗಳದ ಪದಗಳು, ಒಂದೇ ಅರ್ಥದ ಶಬ್ದಗಳು, ಸಮಾನ ಅರ್ಥಕೊಡುವ ಪದಗಳು, ಪರ್ಯಾಯ ಪದಗಳು ಎಂಬ ಆಧುನಿಕ ಭಾಷಾವಿಜ್ಞಾನದಿಂದ ಕಸಿಗೊಂಡ ರೂಪಗಳನ್ನು ದಾಖಲಿಸಲಾಗಿದೆ.

ಉದಾಹರಣೆ

೧. ಸಮಾನಾರ್ಥಕ ಪದಗಳು

**ಅರಸ** : ರಾಜ, ದೊರೆ, ಪ್ರಭು, ರಾಯ, ಚಕ್ರವರ್ತಿ, ನೃಪ, ಒಡೆಯ

**ಕಾಂತಾರ** : ಕಾಡು, ಅಡವಿ, ಅರಣ್ಯ, ಕಾನನ, ವನ

**ಆಕಾಶ** : ಆಗಸ, ಮುಗಿಲು, ಗಗನ, ನಭ, ಅಂತರಿಕ್ಷ

**ಸಂಗ್ರಾಮ** : ಯುದ್ಧ, ಕದನ, ಕಾಳಗ, ರಣರಂಗ

**ದೇವಾಲಯ** : ಮಂದಿರ, ಗುಡಿ, ದೇಗುಲ, ದೇವಸ್ಥಾನ, ದೇವರಮನೆ

೨. ಸಮಾನಾರ್ಥಕ ಪದಬಳ್ಳಿ / ನೆನಪಿನಂಗಳದ ಪದಬಳ್ಳಿ

**ಅರಿವು** : -> ತಿಳುವಳಿಕೆ -> ಕಲಿಕೆ -> ಗ್ರಹಿಕೆ -> ಜ್ಞಾನ

**ಸಂಹಾರ** : -> ಕೊಲ್ಲು -> ಸಾಯಿಸು -> ಜೀವತೆಗೆ -> ಪ್ರಾಣಹಾನಿ

**ಬಾಲ್ಯ** : -> ಎಳೆತನ -> ಎಳೆಯ -> ಹುಡುಗುತನ -> ಕಿರಿಯ

**ಮುಖ** : -> ವದನ -> ಆನನ -> ಮಾರಿ -> ಮೊಗ

**ಸೌಂದರ್ಯ** : -> ಸುಂದರ -> ಚಂದ -> ಅಲಂಕಾರ -> ಸೊಬಗು

೩. ಪದಬಳ್ಳಿ / ನೆನಪಿನಂಗಳದ ಪದಬಳ್ಳಿ

**ಕುಣಿ** : -> ಜಿಗಿ -> ನೆಗೆ -> ಹಾರು -> ನಲಿ -> ನರ್ತಿಸು

**ಭಯ** : -> ಹೆದರು -> ಅಂಜಿಕೆ -> ಗಾಬರಿ -> ನಡುಗು -> ಬೆದರು

**ಸಂತೋಷ** : -> ಆನಂದ -> ಸಂತಸ -> ಉಲ್ಲಾಸ -> ಹಿಗ್ಗು -> ತಣಿ

**ಆಸೆ** : -> ಬಯಕೆ -> ಇಚ್ಛೆ -> ಅಪೇಕ್ಷೆ -> ಅಭಿಲಾಷೆ -> ಆಕಾಂಕ್ಷೆ

೪. ಒಂದೇ ಅರ್ಥ ಕೊಡುವ ಪದಗಳು

**ಕಂದ** : ಮಗು, ಕೂಸು, ಕುಮಾರ, ಪುತ್ರ, ಸುತ, ಅಣುಗ, ತನುಜ

**ಬಂಗಾರ** : ಚಿನ್ನ, ಕಸವರ, ಅಪರಂಜಿ, ಸ್ವರ್ಣ, ಸುವರ್ಣ

**ಎಸಳು** : ದಳ, ಪದರು, ಪಟಲ

**ಬಾಲೆ** : ಬಾಲಕಿ, ತರಳೆ, ಕಿಶೋರಿ, ಪೋರಿ, ಹುಡುಗಿ

೫. ಸಮಾನ ಅರ್ಥಕೊಡುವ ಪದಗಳು

**ಬರ** : ಕ್ಷಾಮ, ದುರ್ಭಿಕ್ಷೆ, ಅಭಾವ

**ಸೊಬಗು** : ಸೌಂದರ್ಯ, ಚೆಲುವು, ಅಂದ

**ಗುಂಗು** : ಮೋಹ, ಗೀಳು, ಮತ್ತು

**ಗಣ್ಯರು** : ಪ್ರಮುಖರು, ಮಾನ್ಯರು

ಒಂದು ಶಬ್ದಕ್ಕೆ ವಿಶಿಷ್ಟ ಸಂದರ್ಭ, ಸನ್ನಿವೇಶಗಳ ಹಿನ್ನೆಲೆಯಲ್ಲಿ ಬೇರೆ ಬೇರೆ ಅರ್ಥಗಳು ಹೊರಹೊಮ್ಮುತ್ತವೆ. ಹೀಗಾಗಿ ಅನೇಕ ಸಲ ಒಂದು ಶಬ್ದದ ನಿರ್ಧಿಷ್ಟ ಅರ್ಥವನ್ನು ಸಂದರ್ಭದ ವಿಶೇಷವನ್ನು ಗಮನಿಸಿಯೇ ಹೇಳಬೇಕಾಗುತ್ತದೆ. ಮಕ್ಕಳಲ್ಲಿ ಪದಸಂಪತ್ತನ್ನು ಬೆಳೆಸುವ ಉದ್ದೇಶದಿಂದ ಸಮಕಾಲೀನ ಪಠ್ಯಪುಸ್ತಕಗಳಲ್ಲಿ ವಿವಿಧಾರ್ಥಕ ಪದಗಳ, ಭಿನ್ನಾರ್ಥಕ ಪದಗಳು, ಬೇರೆ ಬೇರೆ ಅರ್ಥ ಪದಗಳು, ನಾನಾರ್ಥಕ ಪದಗಳು ಎಂಬ ಕಸಿಗೊಂಡ ರೂಪಗಳನ್ನು ದಾಖಲಿಸಲಾಗಿದೆ. ಈ 'ನಾನಾರ್ಥಕ ಪದಗಳು' ಶೀರ್ಷಿಕೆ ಅಡಿಯಲ್ಲಿ ಮಗು ಕಲಿತ ಪದಗಳನ್ನು ನೆನಪಿಸಿ ಬರೆಯುವುದು, ಅದರೊಡನೆ ವಾಕ್ಯ ಕಟ್ಟುವ ಸೃಜನಾತ್ಮಕತೆಯನ್ನು ಕಲ್ಪಿಸಲಾಗಿದೆ.

ಉದಾಹರಣೆ

೧. ವಿವಿಧಾರ್ಥ ಪದಗಳು

**ಬಾಲ** : ಹುಡುಗ, ಪ್ರಾಣಿಗಳ ಪುಚ್ಛ, ದಡ್ಡ

**ಅರಿ** : ಶತೃ, ತಿಳಿ, ಕತ್ತರಿಸು

**ಅಡಿ** : ಪಾದ, ತಳಭಾಗ, ಅಳತೆಯ ಪ್ರಮಾಣ

**ಸಾರು** : ಸಾಂಬಾರು, ಡಂಗುರ ಸಾರು, ಸಮೀಪಿಸು

**ನಾಮ** : ಹೆಸರು, ಲಾಂಛನ, ಮೋಸ

೨. ಭಿನ್ನಾರ್ಥಕ ಪದಗಳು

**ಕರಿ** : ಆನೆ, ಹಬ್ಬದ ಮರುದಿನ, ಕರಿ ಹರಿಯುವುದು, ಕಪ್ಪು ಬಣ್ಣ

**ಗುರು** : ವಿದ್ಯೆ ಕೊಡುವವ, ಒಂದು ಗ್ರಹ, ವಾರದದಿನ, ಛಂದಸ್ಸಿನಲ್ಲಿಯ ಗುರು

**ಕಳೆ** : ಕಾಂತಿ, ನಷ್ಟವಾಗು, ಕಳೆತೆಗೆಯುವುದು

ಮರಳು : ಉಸುಕು, ಹಿಂತಿರುಗು

ನೆನೆ : ಸ್ಮರಿಸು, ಒದ್ದೆಯಾಗು, ಮೊಗ್ಗು

೩. ಬೇರೆ ಬೇರೆ ಅರ್ಥಕ ಪದಗಳು

ಕಲಿ : ಶೂರ, ತಿಳಿ, ಕಲಿಯುಗ

ನರ : ಮನುಷ್ಯ, ತಂತು, ಅರ್ಜುನ

ಕಾಡು : ಪೀಡಿಸು, ಅರಣ್ಯ, ಅನಾಗರೀಕ, ಸ್ಮಶಾನ

ಹೊಳೆ : ನದಿ, ಕಾಂತಿ, ಗೋಚರಿಸು

೪. ನಾನಾರ್ಥಕ ಪದಗಳು

ಮಡಿ : ನಿಧನ, ಶುದ್ಧ, ಸಸಿಗಳ ಮಡಿ

ವರ್ಣ : ಬಣ್ಣ, ಅಕ್ಷರ, ಜಾತಿ

ಅಲೆ : ತೆರೆ, ತರಂಗ, ತಿರುಗಾಡು

ಫಲ : ಹಣ್ಣು, ಫಲಿತಾಂಶ, ಸಂತಾನ

ಕಟ್ಟು : ಹೊಂದಿಸು, ತಡೆ, ನಿಯಮ, ಹೊರೆ

ಅಕ್ಷರ ಅಕ್ಷರ ಸೇರಿದರೆ ಪದವಾಗುವುದು. ಪದಕ್ಕೆ ಪದ ಸೇರಿದರೆ ಪದಪುಂಜವಾಗುವುದು. ಪದಗಳನ್ನು ಪದಪುಂಜಗಳನ್ನು ಅರ್ಥಕ್ಕೆ ಧಕ್ಕೆ ಬರದ ಹಾಗೆ ಅಥವಾ ಮೂಲಾರ್ಥಕ್ಕೆ ಚ್ಯುತಿ ಬರದ ಹಾಗೆ ಅವುಗಳನ್ನು ವಿಭಾಗಿಸುವುದು ಅಥವಾ ವಿಚ್ಛೇದನ ಮಾಡಿ ಬರೆಯುವುದು. ವಿಭಾಗಿಸಿದ ಪದಗಳನ್ನು ಕೂಡಿಸಿ ಬರೆಯುವ ರೂಪಗಳು ಸಮಕಾಲೀನ ಸಂದರ್ಭದ ಪಠ್ಯಪುಸ್ತಕಗಳಲ್ಲಿ ಕಂಡುಬರುತ್ತವೆ. ಪದಗಳನ್ನು ಬಿಡಿಸಿರಿ, ಪದಗಳನ್ನು ವಿಂಗಡಿಸಿ ಹೇಳಿರಿ, ಪದವಿಭಜನೆ ಮಾಡಿರಿ ಎಂಬ ಶೀರ್ಷಿಕೆಗಳಡಿ ದಾಖಲಿಸಲಾಗಿದೆ.

ಉದಾಹರಣೆ



೧. ಪದಗಳನ್ನು ವಿಂಗಡಿಸಿ ಬರೆಯಿರಿ

| | | |
|---|---|---|
| ಕೆಂಪಡರ್ದ | ಹೊಡೆದಾಡದಿರಿ | ಸಿಡಿದಬ್ಬರಿಪುದು |
| ದಂಡೆಯೊಪ್ಪುವು | ಕುಲವನೇನಾದರು | ಕರಗುವಿಬ್ಬನಿವೊಲಿರಲು |
| ಹರುಷಾರಣ್ಯ | ಸರ್ವೋತ್ತಮ | ಪರೆಗಳಚಿ |
| ಮನದಣಿಯೆ | ಬೊಬ್ಬುಳಿಯಂತೆ | ಮೋಹದಜ್ಞಾನಕ್ಕೆ |
| ಸುಗಿದೆತ್ತಿ | ದೀಪದೆದುರಿಗೆ | ಮತವೆಂಬ |

೨. ಪದಗಳನ್ನು ಬಿಡಿಸಿ ಬರೆಯಿರಿ

| | | |
|---|---|---|
| ಜೊತೆಗೂಡಿ | ಕಿತ್ತೊಗೆ | ಕಂಬನಿ |
| ಕಾಡೆಮ್ಮೆ | ಹಿಂಜರಿ | ಹುಲ್ಲುಗಾವಲು |
| ಯೋಜನೆಯನ್ನು | ಕಳೆದಿಡು | ಗಣೇಶ |
| ಮೋಹಕವಾಗಿ | ಗಾಳಿಗುದುರೆ | ಹಿಮಾಲಯ |
| ಕಿರುತೆರೆ | ಹೌದೌದು | ಗಿರೀಶ |

೩. ಪದವಿಭಜನೆ ಮಾಡಿರಿ

| | | |
|---|---|---|
| ಮಾಡಿದರಾಯ್ತು | ಮನೆಯಲ್ಲಿ | ಹುಲಿದೊಗಲು |
| ಯಾರೊಬ್ಬರು | ಹೂದೋಟ | ನುಡಿಗಟ್ಟು |
| ತಿರುಳುಳ್ಳ | ಹೊಸಗನ್ನಡ | ಮರಗಾಲು |
| ಸುಲಭವಾದುದು | ಮಳೆಗಾಲ | ನಿಟ್ಟುಸಿರು |
| ಮಗುವಿಗೆ | ಕಂಬನಿ | ಶಿವಾನುಭವ |

೪. ವಿಂಗಡಿಸಿ ಕೊಟ್ಟಿರುವ ಪದಗಳನ್ನು ಕೂಡಿಸಿ ಬರೆಯಿರಿ

| | |
|---|---|
| ಅಲ್ಲಿ + ಅಲ್ಲಿ = .............. | ಹಿರಿದಾದ + ಜೇನು = .............. |
| ಕೆಳಗೆ + ಇಡು = .............. | ಇತಿ + ಆದಿ = .............. |
| ಕೈ + ಅನ್ನು = .............. | ಪ್ರತಿ + ಉತ್ತರ = .............. |
| ಮೈ + ತೊಳೆ = .............. | ಮೂರು + ಕಾಲು = .............. |
| ಎರಡು + ಮಡಿ = .............. | ಎರಡು + ತಂಡ = .............. |

ಕನ್ನಡ ಭಾಷೆಯಲ್ಲಿ ಬಳಸುವ ಶಬ್ದಗಳಲ್ಲಿ ಬಹುಪಾಲು ಅಚ್ಚಗನ್ನಡ ಶಬ್ದಗಳಾಗಿರುತ್ತವೆ. ಅವುಗಳನ್ನು ದೇಶೀಯ ಶಬ್ದಗಳೆಂದು ಕರೆಯುತ್ತೇವೆ. ಇವುಗಳಲ್ಲದೆ ಸಂಸ್ಕೃತ, ಪ್ರಾಕೃತ ಇತ್ಯಾದಿ ಭಾಷೆಗಳಿಂದ ಬಂದ ಅನೇಕ ಶಬ್ದಗಳು ಕನ್ನಡದಲ್ಲಿ ಬಳಸಲ್ಪಡುತ್ತವೆ. ಸಂಸ್ಕೃತದಿಂದ ಎತ್ತಿಕೊಂಡ ಶಬ್ದಗಳನ್ನು ಸಮ ಸಂಸ್ಕೃತವೆಂದೂ, ತತ್ಸಮವೆಂದು ಕರೆಯಲಾಗುತ್ತದೆ. ಸಂಸ್ಕೃತದಿಂದಲೂ ಇತರ ಭಾಷೆಗಳಿಂದಲೂ ಶಬ್ದಗಳನ್ನು ಕನ್ನಡದಲ್ಲಿ ಬಳಸುವಾಗ ಅನೇಕ ವೇಳೆ ಶಬ್ದಗಳು ವಿಕಾರ ರೂಪವನ್ನು ಪಡೆಯುತ್ತವೆ ಅವುಗಳನ್ನು ತದ್ಭವಗಳೆಂದು ಕರೆಯುತ್ತೇವೆ. ಹೀಗೆ ಹೊಂದುವ ವಿಕಾರವು ಪದದ ಮಧ್ಯದಲ್ಲಿಯೋ, ಅಂತ್ಯದಲ್ಲಿಯೋ, ಆದಿಯಲ್ಲಿಯೋ ಕಂಡುಬರುವುವು. ಈ ಅಂಶಗಳನ್ನು ತತ್ಸಮ-ತದ್ಭವ ಶೀರ್ಷಿಕೆ ಅಡಿಯಲ್ಲಿ ಪಠ್ಯಪುಸ್ತಕಗಳಲ್ಲಿ

ಕಲಿಸಿಕೊಡಲಾಗುತ್ತಿದೆ. ಸಾಮಾನ್ಯವಾಗಿ ಕನ್ನಡ ಭಾಷೆಯ ಪದಕೋಶವನ್ನು ತತ್ಸಮ, ತದ್ಭವ, ಸಮಸಂಸ್ಕೃತ, ಅನ್ಯದೇಶ್ಯ ಎಂದು ವಿಭಜಿಸಲಾಗುತ್ತದೆ. ಈ ವಿಭಜನೆಯಲ್ಲಿ ಪದಗಳ ಅರ್ಥಕ್ಕೆ ಯಾವ ಗಮನವನ್ನೂ ನೀಡದಿರುವುದು ಕಂಡುಬರುತ್ತದೆ. ಉದಾಹರಣೆಗೆ ವರ್ಣ, ವ್ಯವಸಾಯ, ವೈಶಾಖ ಎಂಬ ಸಂಸ್ಕೃತ ಪದಗಳು ಕನ್ನಡದಲ್ಲಿ ಬಣ್ಣ, ಬೇಸಾಯ, ಬೇಸಗೆ ಎಂದು ಬಳಕೆಯಾಗುತ್ತಿವೆ. ವರ್ಣ, ವ್ಯವಸಾಯ, ವೈಶಾಖ ತತ್ಸಮಗಳಾದರೆ, ಬಣ್ಣ, ಬೇಸಾಯ, ಬೇಸಗೆ ತದ್ಭವಗಳು. ಇಲ್ಲಿ ರೂಪವ್ಯತ್ಯಾಸ ಮಾತ್ರ ಗಣನೆಗೆ ಬಂದಿದೆ. ಅಂದರೆ ತತ್ಸಮ, ತದ್ಭವಗಳ ಗಣನೆಯಲ್ಲಿ ರೂಪವ್ಯತ್ಯಾಸಕ್ಕೆ ಮಾತ್ರ ಮಹತ್ವವಿದೆ. ಅರ್ಥಕ್ಕೆ ಅಲ್ಲ ಎಂಬುದು ತಿಳಿದುಬರುತ್ತದೆ. ಸಮಕಾಲೀನ ಸಂದರ್ಭದ ಪಠ್ಯಪುಸ್ತಕಗಳಲ್ಲಿ ತತ್ಸಮ–ತದ್ಭವ ರೂಪಗಳು, ಕನ್ನಡರೂಪ, ಸಂಸ್ಕೃತ ರೂಪಗಳು, ಪದರೂಪಗಳು, ರೂಪಾಂತರಗಳು, ಬೇರೆ ರೂಪಗಳು, ಅರ್ಥ ತಿಳಿಯಿರಿ ಎಂಬ ಕಸಿಗೊಂಡ ರೂಪಗಳನ್ನು ದಾಖಲಿಸಲಾಗಿದೆ.

ಉದಾಹರಣೆ

೧. ತತ್ಸಮ – ತದ್ಭವ ರೂಪಗಳು

| | |
|---|---|
| ಕಥಾ > ಕಥೆ | ವಸತಿ > ಬಸದಿ |
| ಕಾರ್ಯ > ಕಜ್ಜ | ರಾಕ್ಷಸ > ರಕ್ಕಸ |
| ಮುಕ್ತಿ > ಮುಕುತಿ | ಶ್ರೇಷ್ಠಿ > ಶೆಟ್ಟಿ |
| ಮೃಗ > ಮಿಗ | ಮಲ್ಲಿಕಾ > ಮಲ್ಲಿಗೆ |
| ಸಂಸ್ಕೃತ > ಸಕ್ಕದ | ಕವಿ > ಕಬ್ಬಿಗ |

೨. ಕೊಟ್ಟಿರುವ ಪದರೂಪವನ್ನು ಗಮನಿಸಿ ಓದಿ

| ಸಂಸ್ಕೃತ ರೂಪಗಳು | | ಕನ್ನಡ ರೂಪಗಳು |
|---|---|---|
| ಮೃದು | – | ಮಿದು |
| ನಿದ್ರಾ | – | ನಿದ್ದೆ |
| ಕುಮಾರಿ | – | ಕುವರಿ |
| ಆಕಾಶ | – | ಆಗಸ |
| ಚಂದ್ರ | – | ಚಂದಿರ |
| ಸುಖ | – | ಸೊಗ |

೩. ಕೊಟ್ಟಿರುವ ಪದಗಳ ರೂಪಾಂತರ ತಿಳಿಯಿರಿ

| ಸಂಸ್ಕೃತ ರೂಪ | | ಕನ್ನಡ ರೂಪ |
|---|---|---|
| ಅಟವೀ | – | ಅಡವಿ |
| ಸ್ವರ್ಗ | – | ಸಗ್ಗ |
| ಪ್ರತಿ | – | ಪಡಿ |
| ವನ | – | ಬನ |
| ವಲ್ಲಿ | – | ಬಳ್ಳಿ |

೪. ಕೆಳಗಿನ ಪದಗಳ ಕನ್ನಡ ರೂಪ ಬರೆಯಿರಿ

ವಿದ್ಯೆ, ಅಕ್ಷರ, ಶಾಲಾ, ಕಾವ್ಯ, ವಿಜ್ಞಾನ, ಸ್ನೇಹ, ಭಕ್ತಿ, ಸಂತೋಷ, ಸಂಸ್ಥಾ, ಧ್ವನಿ, ಕಾರ್ಯ, ದೃಷ್ಟಿ, ಪ್ರಣತಿ, ಆಕಾಶ, ಮಾಲಾ, ಆಶೆ, ರಾಶಿ, ಸೀತಾ ಇತ್ಯಾದಿ.

೫. ಈ ಪದಗಳ ಬೇರೆ ರೂಪಗಳನ್ನು ಗಮನಿಸಿ

| | | |
|---|---|---|
| ಅಡವಿ | – | ಅಟವಿ |
| ರಕ್ಕಸ | – | ರಾಕ್ಷಸ |
| ಬಸದಿ | – | ವಸತಿ |
| ಪಯಣ | – | ಪ್ರಯಣ |
| ಸಿಂಗಾರ | – | ಶೃಂಗಾರ |
| ಚಾಗ | – | ತ್ಯಾಗ |
| ಬೆನಕ | – | ವಿನಾಯಕ |
| ಹಸಾದ | – | ಪ್ರಸಾದ |

೬. ಇವುಗಳ ಅರ್ಥ ತಿಳಿಯಿರಿ

| | | | | | |
|---|---|---|---|---|---|
| ಆಶ್ಚರ್ಯ | – | ಅಚ್ಚರಿ | ಸ್ಥಾನ | – | ತಾಣ |
| ಸಂತೋಷ | – | ಸಂತಸ | ಸ್ನೇಹ | – | ನೇಹ |
| ಪಾದುಕ | – | ಹಾವುಗೆ | ಪುಸ್ತಕ | – | ಹೊತ್ತಿಗೆ |
| ಸಿದ್ಧ | – | ಸಜ್ಜು | ಕ್ಷಣ | – | ಚಣ |
| ಬಿತ್ತರ | – | ವಿಸ್ತಾರ | ಬಸಂತ | – | ವಸಂತ |

ಸ್ವಾಂತಂತ್ರ್ಯ ಪೂರ್ವ, ಸ್ವಾತಂತ್ರ್ಯ ನಂತರ ಮತ್ತು ಸಮಕಾಲೀನ ಸಂದರ್ಭದ ಪಠ್ಯಪುಸ್ತಕಗಳಲ್ಲಿ ಗದ್ಯ, ಪದ್ಯಗಳಲ್ಲಿ ಬರುವ 'ಕಠಿಣ ಪದಗಳ ಅರ್ಥ' ಶೀರ್ಷಿಕೆ

ಅಡಿಯಲ್ಲಿ ಪದಕ್ಕೆ ಅರ್ಥಗಳನ್ನು ಕೊಡುತ್ತಾ ಬಂದಿರುವುದು ಕಂಡುಬರುತ್ತದೆ. ಆದರೆ ಆರಂಭದ ಕಾಲಘಟ್ಟದಿಂದ ಸಮಕಾಲೀನ ಕಾಲಘಟ್ಟದವರೆಗೂ 'ಕಠಿಣ ಪದಗಳ ಅರ್ಥ' ಶೀರ್ಷಿಕೆಯೇ ಉಳಿದುಕೊಂಡುಬರದೆ ಕಸಿಗೊಂಡ ರೂಪಗಳು ಬಳಕೆಯಾಗಿರುವುದು ಸಮಕಾಲೀನ ಸಂದರ್ಭದ ಪಠ್ಯಪುಸ್ತಕಗಳಲ್ಲಿ ಕಂಡುಬರುತ್ತದೆ. ಅಂದರೆ ಕಠಿಣ ಪದಗಳ ಅರ್ಥ ಶೀರ್ಷಿಕೆಗೆ ಬದಲಾಗಿ ಶಬ್ದಾರ್ಥ, ಪದಗಳ ಅರ್ಥ, ಪದ – ಗದ್ಯಾರ್ಥ, ಪದ – ಪದ್ಯಾರ್ಥ, ಗಮನಿಸಿ – ತಿಳಿ, ಓದಿ –ತಿಳಿ, ಓದಿ – ಅರ್ಥೈಸಿ, ಗಮನಿಸಿ – ತಿಳಿಯಿರಿ, ಓದಿ – ಹೇಳಿ, ಓದಿ – ತಿಳಿ, ಗಮನಿಸಿ –ಹೇಳಿ, ಅರ್ಥ ತಿಳಿಯಿರಿ ಎಂಬ ರೂಪಗಳನ್ನು ದಾಖಲಿಸಲಾಗಿದೆ.

ಉದಾಹರಣೆ

೧. ಕಠಿಣ ಪದಗಳ ಅರ್ಥ

ಮೋಜು – ವಿನೋದ. ಪುರಾತನ – ಪ್ರಾಚೀನ, ಹಳೆಯ. ಸಹಸ್ರಾಕ್ಷ – ಇಂದ್ರ (ಅನೇಕ ಕಣ್ಣುಳ್ಳವನು) ಜುಲ್ಮಾನೆ – ದಂಡ. ಅದೃಷ್ಟ – ಕಣ್ಣಿಗೆ ಕಾಣದ ದೈವ. ಕುದುರು – ಅಂಕುರಿಸು. ಪುನೀತ – ಪವಿತ್ರ. ಲವಲೇಶ – ಎಳ್ಳಷ್ಟೂ. ಅರಕ್ಷಿತ – ರಕ್ಷಕರಿಲ್ಲದಿರುವುದು. ಭಗೀರಥ ಪ್ರಯತ್ನ – ಅತಿ ಸಾಹಸ. ಜೋತ್ಸ್ನ– ಬೆಳದಿಂಗಳು. ಪ್ರಾಯಶ್ಚಿತ್ತ – ತಪ್ಪಿಗೆ ತಕ್ಕ ಶಿಕ್ಷೆ. ಅನಿರೀಕ್ಷಿತ – ಆಕಸ್ಮಿಕ. ಅನಾಥೆ – ದಿಕ್ಕಿಲ್ಲದವಳು. ಚೋದ್ಯ – ಆಶ್ಚರ್ಯ. ಕೃತಾರ್ಥ – ಧನ್ಯ. ಪುನರುಜ್ಜೀವನ – ಮರಳಿ ಜೀವ ತುಂಬುವುದು. ಕೈದು – ಆಯುಧ. ವಿಸ್ಮೃತಿ – ಮರೆವು.

೨. ಶಬ್ದಾರ್ಥ

ಗಿನಿ – ಆಫ್ರಿಕಾದ ನಾಣ್ಯ. ಹಿರೇಜೇನು – ಹೆಜ್ಜೇನು. ಸಮಷ್ಟಿ – ಸಮಗ್ರ. ಪಾಡು– ಅವಸ್ಥೆ. ತೊಪ್ಪಲು – ಎಲೆ. ಸೊಡರು – ದೀಪ. ಬೈರಾಗಿ – ವಿರಾಗಿ, ಸನ್ಯಾಸಿ. ತುಡುಗುದನ–ಪೋಲಿದನ. ಕುಂಜರ – ಆನೆ. ಲೇಸು – ಒಳ್ಳೆಯದು. ಧಾವತಿ – ಗಡಿಬಿಡಿ. ನಿಚ್ಚಳ – ಸ್ಪಷ್ಟ. ಕಡಲು – ಸಮುದ್ರ. ಒದರು – ಕಿರುಚು. ಅಂಬೆ – ತಾಯಿ. ನೀರವ ಕಾಲ – ಮೌನ. ಕವಿಗಣ – ಕವಿಗಳ ಗುಂಪು. ನಾಕ – ಸ್ವರ್ಗ. ಧರೆ – ಭೂಮಿ. ಹಂತಿ – ಸಾಲು.

೩. ಪದಗಳ ಅರ್ಥ

ಶ್ರವಣ – ಆಲಿಸು. ರಾಸು – ಜಾತಿ. ಧನಿಕ – ಶ್ರೀಮಂತ. ಗಾಢ – ಆಳ. ದಿಗ್ಭ್ರಮೆ – ಆಶ್ಚರ್ಯ. ಬೀಳ್ಕೊಡು – ಕಳುಹಿಸಿಕೊಡು. ಘರ್ಷಣೆ – ತಿಕ್ಕಾಟ. ಉದ್ಯಾನ –

ಹೂದೋಟ. ನಿರ್ಮಲ – ಶುದ್ಧ. ನಶಿಸು – ನಾಶವಾಗು. ಪ್ರಾಕಾರ – ಪೌಳಿ. ವಿಗ್ರಹ – ಮೂರ್ತಿ. ಮೆಟ್ಟಿಲು – ಪಾವಟಿಗೆ. ಲೀಲೆ – ಆಟ. ಉಗ್ರ – ಭಯಂಕರ. ಅಳಿವು – ನಾಶ. ನಿಸರ್ಗ – ಪ್ರಕೃತಿ. ಬೆದರಿಕೆ – ಅಂಜಿಕೆ. ಸುವರ್ಣ – ಬಂಗಾರ. ಸೆಲೆ – ಬುಗ್ಗೆ. ಸ್ಫೂರ್ತಿ – ಉತ್ಸಾಹ. ಸೊಲ್ಲು – ಧ್ವನಿ

೪. ಪದ – ಗದ್ಯಾರ್ಥ

ಹರಟೆ – ಕಾಲಹರಣವ ಮಾಡು. ಅಸ್ಥಿರತೆ – ಸ್ಥಿರವಲ್ಲದ ಸ್ಥಿತಿ. ಸಮಯಸಾಧಕತನ – ಅವಕಾಶವಾದ. ಮರ್ಜಿ – ಕಾಳಜಿ. ವಾಣಿ – ಮಾತು. ಪಳಗಿದವನು – ಅನುಭವಿ. ತರಾತುರಿ – ಆತುರ. ಮುಂಡಾಸು – ಪೇಟ, ತಲೆಯುಡಿಗೆ. ಹಾಲುಗಲ್ಲು – ಅಮೃತಶಿಲೆ. ಮೊಳಗು – ಧ್ವನಿಮಾಡು. ಅನುಪಮ – ಎಣೆಯಿಲ್ಲದ. ಅಮರ – ಶಾಶ್ವತ. ವ್ಯೋಮ – ಆಕಾಶ. ತಾರಕಸ್ವರ – ಏರು ದನಿ. ಶಾಸ್ತಿ – ದಂಡನೆ, ಶಿಕ್ಷೆ. ಅಹಂ – ಜಂಬ. ಕೇರಿ – ಮನೆಗಳ ಸಾಲು. ಖಬರು – ಅರಿವು. ಗತ್ತು – ಠೀವಿ. ಅಂಗಲಾಚು – ಮೊರೆಯಿಡು

೫. ಪದ–ಪದ್ಯಾರ್ಥ

ಭವ – ಜನ್ಮ. ನಿವಾರಣೆ – ಪರಿಹಾರ. ಕದಂಬ – ಸಮೂಹ. ಲೋಚನ – ಕಣ್ಣು. ಸ್ರಜ – ಹೂಮಾಲೆ. ತಂಡುಲ – ಅಕ್ಕಿ. ವಿಭು – ಪ್ರಭು. ಮಡಗು – ಅಡಗಿಸು. ಮೂದಲಿಸು – ಹಂಗಿಸು. ಶಿರ – ತಲೆ. ನಭ – ಆಕಾಶ. ತರು – ಮರ. ಚಿತ್ತ – ಮನಸ್ಸು. ದಿನ್ನಿ – ದಿಬ್ಬ. ಪದತಳ – ಕಾಲಿನ ಕೆಳಗೆ. ಹಿಮಾದ್ರಿ – ಹಿಮಪರ್ವತ. ಬಿನ್ನಹ – ಅರಿಕೆ. ಭೂತಳ – ಭೂಮಿ. ಚಕ್ರಿ – ಚಕ್ರವರ್ತಿ. ಹೇಮ – ಚಿನ್ನ. ಎಸೆ – ಶೋಭಿಸು.

೬. ಗಮನಿಸಿ–ತಿಳಿ

| | | |
|---|---|---|
| ಕಾರ್ಯಾಗಾರ | – | ವಿಷಯವನ್ನು ಕುರಿತು ವ್ಯವಸ್ಥಿತವಾಗಿ ಒಂದೆಡೆ ನಡೆಸುವ ಕಾರ್ಯಕ್ರಮ, ವಿಚಾರ, ಚರ್ಚಾ ಮಂಥನ ಕಾರ್ಯಕ್ರಮ. |
| ರುಮಾಲು | – | ತಲೆಗೆ ಸುತ್ತಿಕೊಳ್ಳುವ ತೆಳುವಾದ ಬಟ್ಟೆ (ಪೇಟ). |
| ಉಪನಿಷತ್ತು | – | ವೇದಗಳ ಸಾರವನ್ನು ಕಥೆಗಳ ಮೂಲಕ ಹೇಳಿರುವುದು. |
| ವೇದಾಂತಿ | – | ವೇದಾಂತ ಹೇಳುವ ಆಧ್ಯಾತ್ಮ ತತ್ವಗಳನ್ನು ಅನುಸರಿಸುವವನು. |
| ವಿವೇಚನೆ | – | ಸರಿ – ತಪ್ಪು ತಿಳಿಯುವ ಜಾಣ್ಮೆ. |
| ಪವಾಡ | – | ಅಘಟಿತ ಘಟನೆ ಜರುಗುವುದು. |

| | | |
|---|---|---|
| ಕ್ರಾಂತಿ | – | ಒಮ್ಮಿಂದೊಮ್ಮೆಲೆ ಆಗುವ ಬದಲಾವಣೆ. |
| ಬಡಗಿ | – | ಮರದ ಕೆಲಸ ಮಾಡುವವ. |
| ಅತ್ಯಾನಂದ | – | ಅತಿಯಾದ ಆನಂದ. |
| ಜಲಾಶಯ | – | ದೊಡ್ಡ ಪ್ರಮಾಣದಲ್ಲಿ ನೀರನ್ನು ಒಂದೆಡೆ ಸಂಗ್ರಹಿಸುವ ತಾಣ. |
| ಮಾಸಾಶನ | – | ಸರ್ಕಾರ ಪ್ರತಿ ತಿಂಗಳು ನೀಡುವ ಧನ ಸಹಾಯ. |
| ಜನಕರಾಯ | – | ಇಕ್ಷ್ವಾಕು ರಾಜನ ಮಗ, ಸೀತೆಯ ತಂದೆ. |
| ಸಂಚಿ | – | ಎಲೆ ಅಡಿಕೆ ಚೀಲ. |
| ಭೃಗು | – | ವರುಣ ಋಷಿಯ ಮಗ ಬ್ರಹ್ಮರ್ಷಿ. |
| ಮಲೆ | – | ಬೆಟ್ಟದಿಂದ ಕೂಡಿದ ಪ್ರದೇಶ. |
| ತಿಲಕ | – | ಹಣೆಗೆ ಇಟ್ಟುಕೊಳ್ಳುವ ಬೊಟ್ಟು. |
| ಸೈಕ್ಲೋನ್ | – | ಬಿರುಗಾಳಿ ಜೊತೆ ಮೋಡ ಬಂದು ಮಳೆ ಸುರಿಯುವುದು. |
| ಪ್ರವಾಹ | – | ನದಿ ತುಂಬಿ ಉಕ್ಕಿ ಹರಿಯುವುದು. |
| ಕಲ್ಯಾಣಸೇವೆ | – | ಕಡಲೆಯನ್ನು ಸಕ್ಕರೆಯ ಪಾಕಕ್ಕೆ ಹಾಕಿ ಮಾಡಿದ ಸಿಹಿ ತಿಂಡಿ. |
| ಬಿಲ್ವಿದ್ಯೆ | – | ಬಾಣಗಳನ್ನು ಗುರಿಯಿಟ್ಟು ಹೊಡೆಯುವ ಕೌಶಲ. |
| ಪ್ರಥಮ ಚಿಕಿತ್ಸೆ | – | ಆಕಸ್ಮಿಕ ಅಪಘಾತ ಉಂಟಾದಾಗ ತಕ್ಷಣ ನೀಡುವ ಚಿಕಿತ್ಸೆ. |

೭ ಓದಿ–ಹೇಳಿ

ಸಿಂಗರಿಸು – ಅಲಂಕರಿಸು. ನಮಿಸು – ನಮಸ್ಕರಿಸು, ವಂದಿಸು. ಮೆಲ್ಲಗೆ – ನಿಧಾನ. ಬೇಗ – ಕೂಡಲೆ. ಬಯಲು – ಮೈದಾನ. ಸಡಗರ – ಸಂತೋಷ. ಏರು – ಹತ್ತು. ರಂಗು – ಬಣ್ಣ. ಆಸರೆ – ಆಶ್ರಯ. ಸಮೃದ್ಧಿ – ಹೇರಳ. ಅದ್ಭುತ – ಆಶ್ಚರ್ಯ. ಕರತಲಾಮಲಕ – ಕರಗತ. ಪಾಷಾಣ – ವಿಷ. ವ್ಯಯ – ಖರ್ಚು. ತಿರುಕ – ಭಿಕ್ಷುಕ. ಕರಿ – ಆನೆ. ಓಲಗ – ಸಭೆ. ಅನಿತು – ಅಷ್ಟು. ಜೀಯ – ಒಡೆಯ. ಅಖಿಳ – ಸಮಸ್ತ.

೮. ಓದಿ – ಅರ್ಥೈಸಿ

ಪ್ರಗತಿ – ಅಭಿವೃದ್ಧಿ. ಸಿಗುರು – ಸಿಪ್ಪೆ. ನಲುಗು – ಸೊರಗು. ಅಳಿ – ನಾಶ. ಕಂಕಣ – ಸಂಕಲ್ಪ. ದಿವಾನ – ಮಂತ್ರಿ. ಪ್ರವೀಣ – ನಿಷ್ಣಾತ. ಪರಿಷ್ಕರಣೆ – ತಿದ್ದಿದ. ಇಂಬು – ಆಶ್ರಯ. ಅಚ್ಚುಕೂಟ – ಮುದ್ರಣಾಲಯ. ಬಾವುಟ – ಧ್ವಜ. ಲಾಂಛನ – ಗುರುತು. ನಂಜು – ವಿಷ. ಅಂಕುರ – ಚಿಗುರು. ಅರಿವು – ತಿಳಿವು. ಈಯು – ಕೊಡು.

ಪೀಡೆ – ಬಾಧೆ. ಶಾಮಕ – ಗುಣಪಡಿಸು. ಮಲ್ಲಯುದ್ಧ – ಕುಸ್ತಿ. ಭಲ್ಲೆ – ಭರ್ಚಿ. ಕಲಂಕ – ದೋಷ.

೯. ಓದಿ – ಹೇಳಿ, ಓದಿ – ತಿಳಿ

ಜೇಬು – ಕಿಸೆ, ಬೊಕ್ಕಣ. ಬಕ – ಕೊಕ್ಕರೆ. ಮೊಕ – ಮುಖ, ಮೊಗ. ಹೆಜ್ಜೆ – ಪಾದ. ಗದರು – ಬೆದರಿಸು, ರೇಗು. ವಾಟೆ – ಗೊರಟೆ, ಓಟೆ. ಸುದ್ದಿ – ಸಮಾಚಾರ. ಕುಣಿ – ನೆಗೆ. ಅಡಗಿಸಿಕೊ – ಬಚ್ಚಿಟ್ಟುಕೊ, ಮುಚ್ಚಿಟ್ಟುಕೊ. ಬಾನು – ಆಕಾಶ, ಗಗನ, ಆಗಸ. ರಂಗು – ಬಣ್ಣ. ಏರು – ಹತ್ತು. ಗಂಟೆ – ಸಮಯ, ತಾಸು, ಕಾಲವಧಿ. ಬಯಲು – ಮೈದಾನ. ಸಡಗರ –ಸಂತೋಷ. ಖುಷಿ – ಸಂತಸ. ಮೆಲ್ಲನೆ – ನಿಧಾನ. ಬೇಗ – ಕೂಡಲೆ. ಸಿಂಗರಿಸು – ಅಲಂಕರಿಸು. ಸಾಮೂಹಿಕ – ಒಟ್ಟಾಗಿ.

೧೦. ಗಮನಿಸಿ – ಹೇಳಿ

ದಿನಾಚರಣೆ – ದಿನವನ್ನು ಸಮಾರಂಭವನ್ನಾಗಿ ಆಚರಿಸುವುದು.

ಮಾವುತ – ಆನೆಯನ್ನು ನಡೆಸುವವ.

ಅಂಕುಶ – ಆನೆಯನ್ನು ಹತೋಟಿಯಲ್ಲಿಡಲು ಬಳಸುವ ಸಾಧನ.

ಗೊಲ್ಲ – ಗೋವುಗಳನ್ನು ಕೊಲ್ಲುವವ, ಗೋವಳ, ಗೋಪಾಲ.

ಗೊಲ್ಲನುಲಿ – ಗೊಲ್ಲನ ಕೊಳಲ ನಾದ (ಧ್ವನಿ).

ಧಪಾ ಧಪಾ ಧಪ್ ಧಪಾ – ಆನೆ ಹೆಜ್ಜೆ ಸಪ್ಪಳ.

ಜೂಜಾಟ – ಇದೊಂದು ಬಗೆಯ ಜಾನಪದ ಆಟ. ಒಬ್ಬ ಓಡಬೇಕು. ಅವನು ಓಡುತ್ತಾ, ಜೂಟ್ ಎಂದು ಹೇಳಿ ಇತರರನ್ನು ಹಿಡಿಯಬೇಕು. ಇತರರು ತಪ್ಪಿಸಿಕೊಳ್ಳುವ ಪ್ರಯತ್ನ ಮಾಡುತ್ತಾರೆ. ಸಿಕ್ಕಿಬಿದ್ದವರು ಮತ್ತೆ ಓಡಿ ಇತರರನ್ನು ಹಿಡಿಯಬೇಕು. ಹೀಗೆ ಆಟ ಮುಂದುವರಿಯುತ್ತದೆ. ಈ ಆಟಕ್ಕೆ 'ಮುಟ್ಟಾಟ', 'ಮುಟ್ಟುವ ಆಟ', 'ಜೂಜಾಟ' 'ಹಿಡಿಯುವ ಆಟ' ಎಂದು ಪ್ರಾದೇಶಿಕ ಹೆಸರಿದೆ.

೧೧. ಅರ್ಥ – ತಿಳಿಯಿರಿ

ದಿನಾಲು – ಪ್ರತಿದಿನ. ಸಂಗ್ರಹಿಸು – ಒಟ್ಟುಗೂಡಿಸು. ಬಿತ್ತು – ಬೀಜಹಾಕು. ಪೈರು – ತೆನೆ ಇರುವ ಸಸ್ಯೆ. ಅಂಜನ – ಕಾಡಿಗೆ. ಅಂಧ – ಕುರುಡ. ಅರಸ – ರಾಜ, ದೊರೆ. ಆಳ – ಗಂಭೀರ. ಇನ – ಸೂರ್ಯ. ಉಚ್ಚ – ಎತ್ತರ. ಉಚ್ಚಾರ – ಹೇಳುವಿಕೆ. ಉದಯ – ಹುಟ್ಟು. ಉದ್ಯಾನ – ತೋಟ. ಉರ – ಎದೆ. ಉರಗ – ಹಾವು. ಐದಳ –

ಐದು ದಳ. ಔಡಲ – ಹರಳು. ಕಂಪನ – ನಡುಕ. ಗಜ – ಆನೆ. ಗಿರಿ – ಬೆಟ್ಟ, ಗುಬ್ಬಚ್ಚಿ – ಗುಬ್ಬಿ.

ಮಾತಿನಲ್ಲಿಯ ಪದ ಇಲ್ಲವೇ ಪದ ಸಮುಚ್ಚಯಕ್ಕೆ ಶಬ್ದಾರ್ಥವು ಬಂದಿದ್ದು ಬಳಕೆಯಲ್ಲಿ ಅದು ಬೇರೊಂದು ಅರ್ಥವನ್ನು ಕೊಡುತ್ತಿದ್ದರೆ ಅಂತಹ ಪದಗಳನ್ನು ಪಡೆನುಡಿಗಳೆಂದು ಕರೆಯುವರು. ಪಡೆನುಡಿಗೆ ಪರ್ಯಾಯವಾಗಿ ನುಡಿಗಟ್ಟು, ಗೂಢಾರ್ಥ ನುಡಿಗಳೆಂತಲೂ ಹೇಳುತ್ತೇವೆ. ಅಲಂಕಾರಿಕ ಅರ್ಥವನ್ನು ನೀಡುವ ನುಡಿಗಟ್ಟನ್ನು 'ಪಡೆನುಡಿ' ಎಂದು, ವಿಶೇಷ ಅರ್ಥವುಳ್ಳ ಪದಪುಂಜ, ಪದರಚನೆಗೆ 'ನುಡಿಗಟ್ಟು' ಎಂದು ಕರೆಯುತ್ತೇವೆ. ಇವುಗಳು ಹೊರನೋಟಕ್ಕೆ ಒಂದು ಬಾಹ್ಯಾರ್ಥವನ್ನು ಕೊಡುತ್ತಿದ್ದರೂ ಅವುಗಳ ಅಂತರಾರ್ಥ (ಗೂಢಾರ್ಥ) ಬೇರೆಯಾಗಿರುತ್ತದೆ. ನಮ್ಮ ಕನ್ನಡ ಭಾಷೆಯಲ್ಲಿ ಈ ನುಡಿಗಳ ಬಳಕೆ ಪರಂಪರಾಗತವಾಗಿ ಬಂದಿದೆ. ಸ್ವಾತಂತ್ರ್ಯಪೂರ್ವ ಮತ್ತು ನಂತರದ ಶಾಲಾ ಪಠ್ಯಗಳಲ್ಲಿ 'ಶಬ್ದಗಳು', 'ಪದಗಳು' ಎಂಬ ರೂಪಗಳನ್ನು ಬಳಸಿದರೆ, ಸಮಕಾಲೀನ ಸಂದರ್ಭದ ಪ್ರಾಥಮಿಕ ಮತ್ತು ಮಾಧ್ಯಮಿಕ ಶಾಲಾ ಪಠ್ಯಗಳಲ್ಲಿ 'ಪದಗಳು' ರೂಪ ಬಳಕೆಯಾದರೆ, ಪ್ರೌಢಶಾಲಾ ಹಂತದ ಪಠ್ಯಗಳಲ್ಲಿ 'ನುಡಿಗಟ್ಟು' ಎಂಬ ರೂಪ ದಾಖಲಾಗಿರುವುದು ಕಂಡುಬರುತ್ತದೆ.

ಉದಾಹರಣೆ

೧. ಈ ಶಬ್ದಗಳನ್ನು ನಿಮ್ಮ ಮಾತುಗಳಲ್ಲಿ ಉಪಯೋಗಿಸಿರಿ

| | | |
|---|---|---|
| ಎದೆಗುಂದು | ಬಂಡೆಬ್ಬಿಸು | ಆಸಕ್ತಿ |
| ಒತ್ತಾಯಪಡಿಸು | ಅಭಿರುಚಿ | ನ್ಯಾಯಸಮ್ಮತ |
| ಹಿಂಬಾಲಿಸು | ಶಪಥಮಾಡು | ಯಶಸ್ವಿ |
| ಭಾಗವಹಿಸು | ಕಷ್ಟನಷ್ಟ | ಅಲ್ಲೋಲಕಲ್ಲೋಲ |

೨. ಕೊಟ್ಟಿರುವ ಪದ ಬಳಸಿ ಸ್ವಂತ ವಾಕ್ಯ ಬರೆಯಿರಿ

ಐಕ್ಯೈಕ : ______________________

ಉದಾತ್ತ : ______________________

ಜನಪ್ರೀಯ : ______________________

ಆಸಕ್ತಿ : ______________________

ಅಗ್ನಿಪರೀಕ್ಷೆ : ______________________

ಅನುಕಂಪ : ______________________

ಮಳೆಗರೆ : ______________________

ಪರಿಣಾಮ : ______________________

ನಗುನಗುತ್ತ : ______________________

ಸಮಯಪ್ರಜ್ಞೆ : ______________________

೩. ನುಡಿಗಟ್ಟುಗಳ ಅರ್ಥ ತಿಳಿಸಿ ವಾಕ್ಯಗಳಲ್ಲಿ ಪ್ರಯೋಗಿಸಿರಿ

ಕೈತೋರಿಸು, ಎದೆ ಒಡೆದುಬೀಳು, ಕಣ್ಣಲ್ಲಿ ಕಣ್ಣಿಟ್ಟು ನೋಡು, ಹೆಜ್ಜೆ ಕಿತ್ತಿಡು, ಹಿಂದು ಮುಂದು ನೋಡು, ಕೊನೆಯುಸಿರೆಳೆ, ಬೆನ್ನುಬೀಳು, ಹಣೆಬರಹ, ಪರಾಂಬರಿಸು, ಮುಗುಳ್ನಗೆ, ಸವಾರಿ, ಕೈನೋಡು, ತಲೆದೂಗು, ಹೊಟ್ಟೆಉರಿ, ತಲೆಬಾಗು.

೪. ಕೊಟ್ಟಿರುವ ಪಡೆನುಡಿಗಳನ್ನು ಸ್ವಂತ ವಾಕ್ಯದಲ್ಲಿ ಬಳಸಿ

ಕಣ್ಣಲ್ಲಿ ಕಣ್ಣಿಡು, ಹೊಟ್ಟೆಬಟ್ಟೆಕಟ್ಟು, ಕಾಲಿಗೆಬುದ್ಧಿಹೇಳು, ಕಾಲುಕೆದರು, ಅಡ್ಡಹಾದಿಹಿಡಿ, ಕೈಯಾಸೆಮಾಡು, ಟೋಪಿಹಾಕು, ಹೆಗಲುಕೊಡು, ನಾಲಿಗೆ ಹರಿಬಿಡು, ಮಸ್ತಕದಹುಳು, ತಿರುಕನಕನಸು, ಗಗನಕ್ಕೇರು, ಅಜಗಜಾಂತರ, ಉತ್ತರ ಕುಮಾರ, ಮಾರಣಹೋಮ, ಗಿಳಿಓದು, ಅರ್ಧಚಂದ್ರ ಪ್ರಯೋಗ.

ಈ ಮೇಲಿನ ಅಂಶಗಳನ್ನು ಗಮನಿಸಿದಾಗ ತಿಳಿದುಬರುವ ಸಂಗತಿ ಎಂದರೆ ಭಾಷಾಂಶಗಳು ಸರಳತೆಯಿಂದ ಕಠಿಣತೆಯ ಕಡೆಗೆ ತಿರುಗಿರುವುದು ಕಂಡುಬರುತ್ತದೆ. ಅಂದರೆ ಮಾದರಿ ನೋಡಿ ಬರೆಯಿರಿ, ಮಾದರಿಯಂತೆ ಪದರಚನೆ ಮಾಡಿ, ಪದಗಳನ್ನು ಗಮನಿಸಿ ಬೇರೆ ಪದಗಳನ್ನು ಬರೆಯಿರಿ, ಗೆರೆ ಎಳೆದ ಪದಗಳನ್ನು ಗಮನವಿಟ್ಟು ಓದಿ, ಮಾದರಿಯಂತೆ ಆಯಾ ಪದಗಳಿಗೆ ಅನ್ವಯಿಸುವ ಪದ ಬರೆಯಿರಿ ಇತ್ಯಾದಿ ಪ್ರಶ್ನೆಗಳು ಕಲಿಕಾರ್ಥಿಗಳಿಗೆ ಕಲಿಕೆ ಭಾರವಾಗದಂತೆ, ಕ್ಲಿಷ್ಟವಾಗದಂತೆ ಸರಳೀಕೃತವಾಗಲು ಅನುವು ಮಾಡಿಕೊಡಲಾಗಿದೆ. ಈ ಕಸಿಗೊಂಡ ರೂಪಗಳು ಪ್ರಾಥಮಿಕ ಮತ್ತು ಮಾಧ್ಯಮಿಕ ಶಾಲಾ ಹಂತದ ಸಮಕಾಲೀನ ಪಠ್ಯಪುಸ್ತಕಗಳಲ್ಲಿ ಮಾತ್ರ ಕಂಡುಬರುತ್ತವೆ. ಆದರೆ ಪ್ರೌಢಶಾಲಾ ಹಂತದಲ್ಲಿಯ ಪಠ್ಯಪುಸ್ತಕಗಳಲ್ಲಿ ಕಸಿಗೊಂಡ ರೂಪಗಳ ಬಳಕೆ ತುಂಬಾ ಕಡಿಮೆಯಿದ್ದು, ವ್ಯಾಕರಣದ ಪರಿಭಾಷೆಗಳನ್ನು ಸೂತ್ರ ಅಥವಾ ನಿಯಮದ ಮೂಲಕ ವಿಶ್ಲೇಷಣೆ ಮಾಡಿರುವುದು ಕಂಡುಬರುತ್ತದೆ. ಆಧುನಿಕ ಭಾಷಾ ವಿಜ್ಞಾನದಿಂದ ಕಸಿಗೊಂಡ ರೂಪಗಳ ಬಳಕೆ ಪ್ರೌಢಶಾಲಾ ಹಂತಕ್ಕಿಂತ ಪ್ರಾಥಮಿಕ, ಮಾಧ್ಯಮಿಕ ಶಾಲಾಹಂತಗಳ ಪಠ್ಯಗಳಲ್ಲಿ ಹೆಚ್ಚು ಬಳಕೆಯಾಗಿರುವುದು ಸ್ಪಷ್ಟವಾಗಿ ಕಂಡುಬರುತ್ತದೆ.

ಅಧ್ಯಾಯ – ಮೂರು

# ಕನ್ನಡ ಶಾಲಾ ಪಠ್ಯಪುಸ್ತಕಗಳಲ್ಲಿನ ವ್ಯಾಕರಣದ ಅಂಶಗಳು : ಚಾರಿತ್ರಿಕ ಅಧ್ಯಯನ

ಕನ್ನಡ ಶಾಲಾಪಠ್ಯಪುಸ್ತಕಗಳಲ್ಲಿನ ವ್ಯಾಕರಣದ ಚಾರಿತ್ರಿಕ ಅಧ್ಯಯನವನ್ನು ಲಭ್ಯವಾಗಿರುವ ಕನ್ನಡ ಶಾಲಾ ಪಠ್ಯಪುಸ್ತಕಗಳ ಆಧಾರದ ಮೇಲೆ ವಿಶ್ಲೇಷಣೆಯ ಹಂತಗಳನ್ನು ಈ ಕೆಳಗಿನಂತೆ ನಿಗದಿಪಡಿಸಿಕೊಳ್ಳಲಾಗಿದೆ.

೧. ಸ್ವಾತಂತ್ರ್ಯಪೂರ್ವದ ಕನ್ನಡ ಶಾಲಾ ಪಠ್ಯಪುಸ್ತಕಗಳು

೨. ಸ್ವಾತಂತ್ರ್ಯ ನಂತರದ ಕನ್ನಡ ಶಾಲಾ ಪಠ್ಯಪುಸ್ತಕಗಳು

೩. ಕರ್ನಾಟಕ ಸರಕಾರದ ಶಾಲಾ ಶಿಕ್ಷಣ ನೀತಿಯನ್ವಯ ರಚಿತವಾದ ಕನ್ನಡ ಶಾಲಾ ಪಠ್ಯಪುಸ್ತಕಗಳು (೨೦೦೫ ಎನ್.ಸಿ.ಎಫ್. ಪಠ್ಯಕ್ರಮದನ್ವಯ)

ಈ ಮೂರು ಕಾಲಘಟ್ಟಗಳಲ್ಲಿ ತಲೆಬರಹದಲ್ಲೆ ಪಾಠದ ಆಶಯ ಬಿಂಬಿಸುವಂತಹ ಮಾದರಿಯಲ್ಲಿದೆ ಎಂಬುದನ್ನು ನೋಡಬಹುದು. ಈ ಮೇಲ್ಕಾಣಿಸಿದ ಹಂತಗಳಿಗನುಗುಣವಾಗಿ ಶಾಲಾ ವ್ಯಾಕರಣ ಪರಿಚಯಿಸುವುದಕ್ಕೆ ರಚನೆಯಾದ ಪಠ್ಯಪುಸ್ತಕಗಳು. ಅವುಗಳಲ್ಲಿ ಬಳಕೆಯಾಗಿರುವ ವ್ಯಾಕರಣ ಒಂದೇ ರೀತಿಯಾಗಿರದೆ ಆಯಾ ಕಾಲಕ್ಕೆ ತಕ್ಕಂತೆ ಅಗತ್ಯಕ್ಕನುಗುಣವಾಗಿ ಭಾಷಾ ಬಳಕೆಯಲ್ಲಿ ಬದಲಾವಣೆಯಾಗಿದೆ. ಅಂತಹ ಬದಲಾವಣೆಗಳನ್ನು ಹೇಳುವುದಕ್ಕೆ ಲಭ್ಯವಿರುವ ಪಠ್ಯಪುಸ್ತಕಗಳನ್ನು ಇಟ್ಟುಕೊಂಡು ಪ್ರಸ್ತುತ ಅಧ್ಯಾಯದಲ್ಲಿ ಅಧ್ಯಯನ ಮಾಡಲಾಗಿದೆ.

## ೧. ಸ್ವಾತಂತ್ರ್ಯಪೂರ್ವದ ಕನ್ನಡ ಶಾಲಾ ಪಠ್ಯಪುಸ್ತಕಗಳು

ಸ್ವಾತಂತ್ರ್ಯಪೂರ್ವದ ಪ್ರಾಥಮಿಕ, ಮಾಧ್ಯಮಿಕ ಮತ್ತು ಪ್ರೌಢಶಾಲಾ (ಹೈಯರ್ ಸೆಕೆಂಡರಿ) ಹಂತದ ಪಠ್ಯಗಳಲ್ಲಿ ವ್ಯಾಕರಣಾಂಶಗಳನ್ನು ಎಲ್ಲೂ ದಾಖಲಿಸಿಲ್ಲ. ಗದ್ಯ, ಪದ್ಯಗಳನ್ನೊಳಗೊಂಡ ಪಠ್ಯಗಳು ಮತ್ತು ಪ್ರೌಢ ಹಂತದಲ್ಲಿ ಗದ್ಯ ಮತ್ತು ಪದ್ಯಗಳ ಪ್ರತ್ಯೇಕ ಪಠ್ಯಗಳು ರಚಿತವಾಗಿರುವುದು ಕಂಡುಬರುತ್ತದೆ. ಈ ಪಠ್ಯಗಳಲ್ಲಿ ವ್ಯಾಕರಣವನ್ನು ದಾಖಲಿಸದಿರುವುದಕ್ಕೆ ಮುಖ್ಯವಾದ ಕಾರಣವೆಂದರೆ ವ್ಯಾಕರಣವನ್ನು ಪ್ರತ್ಯೇಕವಾದ ಪಠ್ಯಗಳಡಿಯಲ್ಲಿ ಕಲಿಸುತ್ತಿರುವುದು ನಮಗೆ ಕಂಡುಬರುತ್ತದೆ. ಶಾಲಾ ವಿವಿಧ ಹಂತಗಳಿಗನುಸಾರವಾಗಿ ವ್ಯಾಕರಣ ಪುಸ್ತಕಗಳಿದ್ದವು.

ಉದಾಹರಣೆ

- 'ಕನ್ನಡ ಮೂಲವ್ಯಾಕರಣ' – ಪಂಜೆ ಮಂಗೇಶರಾವ್ – ಕ್ರಿ.ಶ. ೧೯೦೫
- 'ಶಬ್ದಾದರ್ಶ' ವೆಂಬ ಹೊಸಗನ್ನಡ ವ್ಯಾಕರಣ – ಬಿ.ಮಲ್ಲಪ್ಪ ಕ್ರಿ.ಶ. ೧೯೧೫
- 'ಕನ್ನಡ ಲಘುವ್ಯಾಕರಣ' – ವೆಂಕಟ ರಂಗೋಕಟ್ಟಿ – ಕ್ರಿ.ಶ. ೧೯೨೯
- 'ತಿಳಿಗನ್ನಡ ವ್ಯಾಕರಣ' (ಪ್ರಥಮ ಭಾಗ) – ಆರ್. ಎನ್. ಸೂರ್ಯನಾರಾಯಣ ಕೆ. ಅಹೋಬಲಶಾಸ್ತ್ರಿ – ಕ್ರಿ.ಶ. ೧೯೩೫
- 'ಕನ್ನಡ ಪ್ರಥಮವ್ಯಾಕರಣ' –ಡಾ. ಎ. ಎನ್. ನರಸಿಂಹಯ್ಯ – ಕ್ರಿ.ಶ. ೧೯೩೮
- 'ಕನ್ನಡ ನುಡಿಗನ್ನಡಿ' ೧ನೆಯ ಭಾಗ – ಮ. ಪ್ರ. ಪೂಜಾರ – ಕ್ರಿ.ಶ. ೧೯೪೬
- 'ಕನ್ನಡ ನುಡಿಗನ್ನಡಿ' ೨ನೆಯ ಭಾಗ – ಮ. ಪ್ರ. ಪೂಜಾರ – ಕ್ರಿ.ಶ. ೧೯೪೬
- 'ಕನ್ನಡ ನುಡಿಗನ್ನಡಿ ಮತ್ತು ಛಂದೋಮಂಜರಿ–ಮ.ಪ್ರ.ಪೂಜಾರ– ಕ್ರಿ.ಶ. ೧೯೪೬
- 'ಕನ್ನಡ ಮಧ್ಯಮವ್ಯಾಕರಣ' – ತೀ. ನಂ. ಶ್ರೀಕಂಠಯ್ಯ – ಕ್ರಿ.ಶ. ೧೯೪೦
- 'ಕನ್ನಡ ವ್ಯಾಕರಣದರ್ಪಣ' – ಶಿ. ಚ. ನಂದಿಮಠ – ಕ್ರಿ.ಶ. ೧೯೭೦

ಸ್ವಾತಂತ್ರ್ಯಪೂರ್ವದಲ್ಲಿ ಬಂದಿರುವ ಪಠ್ಯಗಳಲ್ಲಿ ಸಾಹಿತ್ಯದ ಮೂಲಕ ಭಾಷೆಯನ್ನು ಕಲಿಸುವ ವಿಧಾನ ಪ್ರಧಾನವಾಗಿರವುದು ಕಂಡುಬರುತ್ತದೆ. ಅಲ್ಪಸ್ವಲ್ಪ ಬದಲಾವಣೆಯೊಂದಿಗೆ ಈ ಒಂದು ವಿಧಾನ ಈಗಲೂ ಮುಂದುವರಿಯುತ್ತಿದೆ.

ಸಾಹಿತ್ಯದ ಮೂಲಕ ಭಾಷೆಯನ್ನು ಕಲಿಸಬೇಕು ಎಂಬುದು ವಿದ್ವಾಂಸರ ಅಭಿಪ್ರಾಯ. ವಾಸ್ತವವಾಗಿ ಭಾಷೆಯನ್ನು ಕಲಿಯುವುದಕ್ಕೆ ಸಾಹಿತ್ಯ ಪೂರಕವಾಗಿರಬೇಕು. ಹಾಗೆಯೇ ಸ್ವಾತಂತ್ರ್ಯ ಪೂರ್ವದಲ್ಲಿ ಪಠ್ಯದ ನಂತರ 'ಶಬ್ದಾವಳಿ' ಭಾಗದಲ್ಲಿ ಒಂದು ಪದಕ್ಕೆ ಒಂದಕ್ಕಿಂತ ಹೆಚ್ಚು ಅರ್ಥವನ್ನು ನೀಡುವ ಭಾಗಕ್ಕೆ ಶಬ್ದಾವಳಿ ಎಂದು ಕರೆದರೆ, ಸ್ವಾತಂತ್ರ್ಯ ನಂತರದಲ್ಲಿ 'ಕಠಿಣ ಪದಗಳಿಗೆ ಅರ್ಥ' ಎಂದು ಕರೆಯಲಾಗಿದೆ. ಆದರೆ ಸಮಕಾಲೀನ ಸಂದರ್ಭದ ಪಠ್ಯಪುಸ್ತಕಗಳನ್ನು ಗಮನಿಸಿದಾಗ ಪದಕೋಠಿ, ಪದಕೋಶ, ಓದಿ–ತಿಳಿ, ಗಮನಿಸಿ–ತಿಳಿ, ಪದ್ಯ–ಗದ್ಯಾರ್ಥ, ಗದ್ಯ–ಪದ್ಯಾರ್ಥ, ಓದಿ–ಅರ್ಥೈಸಿ, ಪದ ಕಣಜ ಎಂದು ಕರೆಯಲಾಗಿದೆ.

ಸ್ವಾತಂತ್ರ್ಯ ಪೂರ್ವದ ಪಠ್ಯಗಳ ಆರಂಭದಲ್ಲಿ ಇಡೀ ಪಠ್ಯದ ಗದ್ಯ, ಪದ್ಯಗಳ ಶೀರ್ಷಿಕೆಗಳನ್ನು ಕ್ರೋಢೀಕರಿಸಿರುವ ಭಾಗಕ್ಕೆ 'ಅನುಕ್ರಮಣಿಕೆ' ಎಂದು ಕರೆದರೆ,

ಸ್ವಾತಂತ್ರ್ಯ ನಂತರದಲ್ಲಿ 'ವಿಷಯ ಸೂಚಿಕೆ', 'ವಿಷಯಾನುಕ್ರಮಣಿಕೆ', 'ವಸ್ತುಕೋಶ', 'ಪರಿವಿಡಿ', 'ವಿಷಯಾನುಕ್ರಮ', 'ಪಾಠಗಳ ಪಟ್ಟಿ' ಎಂದು ಕರೆಯಲಾಗಿದೆ. ಆದರೆ ಸಮಕಾಲೀನ ಸಂದರ್ಭದ ಪಠ್ಯಗಳನ್ನು ಗಮನಿಸಿದಾಗ 'ವಿಷಯಾನುಕ್ರಮಣಿಕೆ', 'ಪಾಠಾನುಕ್ರಮಣಿಕೆ' ಎಂದು ಕರೆಯಲಾಗಿದೆ.

ಸ್ವಾತಂತ್ರ್ಯ ಪೂರ್ವದ ಕೆಲವು ಪಠ್ಯಗಳಲ್ಲಿ ಇಡೀ ಪಾಠವನ್ನು ಪ್ರತಿನಿಧಿಸುವಂತಂಹ, ವ್ಯಾಕರಣಾಂಶಗಳನ್ನು ಹೊಂದಿರುವ ಭಾಗಕ್ಕೆ 'ಅಭ್ಯಾಸ' ಎಂದು ಕರೆದರೆ, ಸ್ವಾತಂತ್ರ್ಯ ನಂತರದ ಪಠ್ಯಗಳಲ್ಲಿ ಪಠ್ಯಕ್ಕೆ ಪೂರಕವಾದ ಪ್ರಶ್ನೆಗಳನ್ನು ಅಭ್ಯಾಸದಡಿಯಲ್ಲಿ ದಾಖಲಿಸಿದರೆ, ಸಮಕಾಲೀನ ಸಂದರ್ಭದ ಪಠ್ಯಗಳಲ್ಲಿ ಪಾಠಕ್ಕೆ ಸಂಬಂಧಿಸಿದ ಪ್ರಶ್ನಾವಳಿಗಳನ್ನು ಅಭ್ಯಾಸದಡಿಯಲ್ಲಿ ಕೊಟ್ಟರೂ ಕೂಡ 'ಪ್ರೇರಣಾ ಅಭ್ಯಾಸ', 'ಪೋಷಕ ಅಭ್ಯಾಸ', 'ಪ್ರಾಯೋಗಿಕ ಅಭ್ಯಾಸ'ವೆಂದು ವರ್ಗೀಕರಿಸಲಾಗಿದೆ. ಇನ್ನು ವ್ಯಾಕರಣಾಂಶಗಳನ್ನು ಭಾಷಾಭ್ಯಾಸದಡಿಯಲ್ಲಿ 'ಸೈದ್ಧಾಂತಿಕ ಭಾಷಾಭ್ಯಾಸ', 'ಪ್ರಾಯೋಗಿಕ ಭಾಷಾಭ್ಯಾಸ'ವೆಂದು ವಿಂಗಡಿಸಲಾಗಿದೆ.

ಸ್ವಾತಂತ್ರ್ಯ ಪೂರ್ವದ ಪಠ್ಯಪುಸ್ತಕಗಳಲ್ಲಿ ಕೆಲವು ಕನ್ನಡ ಪದ್ಯ ಕಥಾವಳಿಯಂತಲೂ, ಮತ್ತು ಗದ್ಯ ಪದ್ಯ ಒಳಗೊಂಡಿರುವ ಪಠ್ಯಗಳು ಕಂಡುಬರುತ್ತವೆ. ಇವುಗಳಲ್ಲಿ ಪದ್ಯಗಳನ್ನು ವರ್ಗೀಕರಿಸಿ 'ಬಾಯಿ ಪಾಠಕ್ಕಿರುವ ಪದ್ಯಗಳು' ಎಂದು ಕರೆದರೆ, ಸ್ವಾತಂತ್ರ್ಯ ನಂತರದ ಪಠ್ಯಗಳಲ್ಲಿ ಮತ್ತು ಸಮಕಾಲೀನ ಸಂದರ್ಭದ ಪಠ್ಯಗಳಲ್ಲಿ 'ಕಂಠಪಾಠ ಮಾಡಿ' ಎಂದು ಬಳಕೆಯಾಗಿದೆ. 'ಬಾಯಿಪಾಠ', ಮತ್ತು 'ಕಂಠಪಾಠ' ಎರಡು ರೂಪಗಳು ಸಂಸ್ಕೃತ ರೂಪಗಳೆ ಆಗಿವೆ. ಉರುಹೊಡೆದು ಕಂಠಗತ ಮಾಡಿಕೊಳ್ಳಬೇಕಾದ ಪದ್ಯ ಎಂಬರ್ಥದ ಜೊತೆಗೆ ಲಯ, ಪ್ರಾಸ, ಯತಿ, ಮೊದಲಾದ ನಿಯಮಗಳನುಸಾರ ಕಂಠಪಾಠ ಮಾಡುವುದೇ ಆಗಿದೆ.

ಸ್ವಾತಂತ್ರ್ಯ ಪೂರ್ವದ ಪಠ್ಯಪುಸ್ತಕಗಳು ಆಯಾ ತರಗತಿಯನ್ನೇ ಪ್ರತಿನಿಧಿಸುವಂತೆ ಶೀರ್ಷಿಕೆಗಳನ್ನು ಹೊಂದಿವೆ. ಅಂದರೆ ಕನ್ನಡ ಒಂದನೆಯ ಪುಸ್ತಕ, ಕನ್ನಡ ಎರಡನೆಯ ಪುಸ್ತಕ, ಕನ್ನಡ ನೂತನ ಮಾಲೆಯ ಮೂರನೆಯ ಪುಸ್ತಕ, ಕನ್ನಡ ನೂತನ ಮಾಲೆಯ ನಾಲ್ಕನೆಯ ಪುಸ್ತಕ ಎಂದು ಕರೆಯಲಾಗಿದೆ. ಸ್ವಾತಂತ್ರ್ಯ ನಂತರದ ಪಠ್ಯಗಳಲ್ಲಿಯ ಶೀರ್ಷಿಕೆಗಳು ಸಾಹಿತ್ಯ ಸೌರಭ, ಸಾಹಿತ್ಯ ಸಂಕಲನ, ಕನ್ನಡ ಗಂಗೋತ್ರಿ ಎಂದು ಬಳಕೆ ಮಾಡಲಾಗಿದೆ. ಅಂದರೆ ಸಾಹಿತ್ಯ ಮತ್ತು ಕನ್ನಡ ಭಾಷೆಯನ್ನೊಳಗೊಂಡ

ಶೀರ್ಷಿಕೆಗಳಾಗಿವೆ. ಸಮಕಾಲೀನ ಸಂದರ್ಭದ ಪಠ್ಯಪುಸ್ತಕಗಳಿಗೆ ಸಿರಿಗನ್ನಡ, ಸವಿಗನ್ನಡ, ಕನ್ನಡ ಕಸ್ತೂರಿ ಎಂಬ ಶೀರ್ಷಿಕೆಗಳನ್ನು ನೀಡಲಾಗಿದೆ.

ಈ ಅಂಶಗಳನ್ನು ಗಮನಿಸಿದಾಗ ಕಂಡುಬರುವ ಅಂಶವೆಂದರೆ ಸ್ವಾತಂತ್ರ್ಯ ಪೂರ್ವದಲ್ಲಿ ಪಠ್ಯಗಳೇ ತರಗತಿಗಳನ್ನು ಗುರುತಿಸುತ್ತಿದ್ದವು. ಸ್ವಾತಂತ್ರ್ಯ ನಂತರದಲ್ಲಿ ಕನ್ನಡ ಸಾಹಿತ್ಯ, ಕನ್ನಡ ಭಾಷೆಗೆ ಪ್ರಾಧಾನ್ಯತೆ ಕೊಡುತ್ತ ಬಂದಿದ್ದರ ಪರಿಣಾಮವಾಗಿ ಸಮಕಾಲೀನ ಪಠ್ಯಗಳಿಗೆ ಸಿಹಿಯಾದ, ಸವಿಯಾದ, ಕಸ್ತೂರಿಯಂತೆ ಪರಿಮಳ ಬೀರುವ, ತಿಳಿಯಾದ ಅರ್ಥವನ್ನು ಎಂಬರ್ಥಗಳನ್ನು ಕೊಡುವಂತಹ ಶೀರ್ಷಿಕೆಗಳನ್ನು ಮತ್ತು ಕನ್ನಡಕ್ಕೆ ಕನ್ನಡದ್ದೇ ಆದ ಶೀರ್ಷಿಕೆಗಳನ್ನು ನೀಡಿರುವುದು ಗಮನಿಸುವಂತಹ ಅಂಶವಾಗಿದೆ.

ಸ್ವಾತಂತ್ರ್ಯ ಪೂರ್ವದ ಪಠ್ಯಪುಸ್ತಕಗಳಲ್ಲಿ ಪಠ್ಯದ ನಂತರ ಅಭ್ಯಾಸದಡಿಯಲ್ಲಿ ಬಿಟ್ಟಿರುವ ಮಾತುಗಳನ್ನು ಹೇಳಿ, ಬಿಟ್ಟಸ್ಥಳದಲ್ಲಿ ತಕ್ಕಶಬ್ದ ಬರೆ, ಬಿಟ್ಟಶಬ್ದಗಳನ್ನು ಸೇರಿಸಿ ಬರೆ ಎಂಬ ರೂಪಗಳನ್ನು ಬಳಕೆ ಮಾಡಿದರೆ, ಸ್ವಾತಂತ್ರ್ಯ ನಂತರದಲ್ಲಿ ಖಾಲಿ ಬಿಟ್ಟಸ್ಥಳಗಳಲ್ಲಿ ಅರ್ಥವಾಗುವಂತೆ ಸೇರಿಸಿ ಬರೆ ಎಂದು ಬಳಕೆ ಮಾಡಲಾಗಿದೆ. ಆದರೆ ಸಮಕಾಲೀನ ಸಂದರ್ಭದ ಪಠ್ಯಪುಸ್ತಕಗಳಲ್ಲಿ ಸೂಕ್ತವಾದುದನ್ನು ಆರಿಸಿ ಬಿಟ್ಟಸ್ಥಳ ತುಂಬಿ, ಬಿಟ್ಟಿರುವ ಸ್ಥಳದಲ್ಲಿ ಸರಿಯಾದ ಪದ ಬರೆಯಿರಿ ಎಂದು ಬಳಕೆ ಮಾಡಲಾಗಿದೆ.

ಮೇಲಿನ ಅಂಶಗಳನ್ನು ಗಮನಿಸಿದಾಗ ಕಂಡುಬರುವ ಸಂಗತಿ ಎಂದರೆ ಸ್ವಾತಂತ್ರ್ಯ ಪೂರ್ವದಲ್ಲಿ ವಸ್ತುನಿಷ್ಠ ಮಾದರಿ ಪರೀಕ್ಷೆಗಳು (ಸಿ.ಇ.ಟಿ) ಇರಲಿಲ್ಲ. ಸ್ವಾತಂತ್ರ್ಯ ನಂತರ ಅಂದರೆ ೧೯೮೦ರ ದಶಕದಿಂದೀಚೆಗೆ ಮತ್ತು ಸಮಕಾಲೀನ ಸಂದರ್ಭದಲ್ಲಿ ಈ ಮಾದರಿಯ ಪರೀಕ್ಷೆಗಳು ಹೆಚ್ಚಾಗಿ ಹುಟ್ಟಿಕೊಂಡಿದ್ದರ ಪರಿಣಾಮವಾಗಿ ಅವುಗಳ ಮಾದರಿಯ ಸ್ವರೂಪವನ್ನು ತಿಳಿಸಲೋಸುಗ 'ಸೂಕ್ತವಾದುದನ್ನು ಆರಿಸಿ ಬಿಟ್ಟಸ್ಥಳ ತುಂಬಿ' ಅಥವಾ 'ಮಾದರಿಯನ್ನು ನೋಡಿ ಸರಿಯಾದ ಪದ ಬರೆಯಿರಿ' ಎಂಬಿತ್ಯಾದಿ ರೂಪಗಳಲ್ಲಿ ಕನ್ನಡಕ್ಕೆ ಕನ್ನಡವನ್ನು ಬಳಕೆ ಮಾಡಿರುವುದು ಗಮನಿಸುವಂತಹ ಅಂಶವಾಗಿದೆ.

ಸ್ವಾತಂತ್ರ್ಯ ಪೂರ್ವದ ಮತ್ತು ನಂತರದ ಪಠ್ಯಪುಸ್ತಕಗಳಲ್ಲಿ ಯಾರು ಯಾರಿಗೆ ಯಾವ ಸಂದರ್ಭದಲ್ಲಿ ಹೇಳಿದರು ಎಂಬುದಕ್ಕೆ ಸ್ಪಷ್ಟೀಕರಿಸಿ, ಸ್ಪಷ್ಟೀಕರಣ ಎಂದು ಬಳಕೆ ಮಾಡಲಾಗಿದೆ. ಆದರೆ ಸಮಕಾಲೀನ ಸಂದರ್ಭದ ಪಠ್ಯಪುಸ್ತಕಗಳಲ್ಲಿ ಕೊಟ್ಟಿರುವ

ಮಾತನ್ನು ಯಾರು ಯಾರಿಗೆ ಹೇಳಿದರು, ಸಂದರ್ಭಾನುಸಾರವಾಗಿ ವಿವರಿಸಿ, ಸಂದರ್ಭ ಸ್ಪಷ್ಟೀಕರಣ ಎಂದು ಬಳಕೆ ಮಾಡಲಾಗಿದೆ.

ಸಮಕಾಲೀನ ಸಂದರ್ಭದಲ್ಲಿ 'ಭಾಷಾಚಟುವಟಿಕೆ'ಗಳು ದಾಖಲಾಗಿದ್ದರೆ, ಸ್ವಾತಂತ್ರ್ಯ ಪೂರ್ವ, ನಂತರದ ಪಠ್ಯಪುಸ್ತಕಗಳಲ್ಲಿ 'ಮಾಡಬೇಕಾದ ಕೆಲಸ', 'ಬರಹ' ಎಂದು ದಾಖಲಿಸಲಾಗಿದೆ. ಇದರಿಂದ ತಿಳಿದು ಬರುವ ಸಂಗತಿಯಂದರೆ ಇಂದು ಚರ್ಚೆ ಮಾಡುತ್ತಿರುವ ಕನ್ನಡವನ್ನು ಕನ್ನಡದ ಮೂಲಕ ನೋಡಬೇಕೆನ್ನುವ ಚರ್ಚೆಯ ವಿಷಯ ಸ್ವಾತಂತ್ರ್ಯ ಪೂರ್ವದಲ್ಲೇ ಇತ್ತೇನೋ ಎಂಬುದು ಇಂತಹ ಉದಾಹರಣೆಗಳಿಂದ ತಿಳಿದುಬರುತ್ತದೆ.

ಸ್ವಾತಂತ್ರ್ಯಪೂರ್ವ ಮತ್ತು ಸ್ವಾತಂತ್ರ್ಯನಂತರದ ಪಠ್ಯಪುಸ್ತಕಗಳಲ್ಲಿ 'ತತ್ಸಮ–ತದ್ಭವ' ಎಂಬ ಪರಿಭಾಷೆಗಳನ್ನು ಬಳಕೆ ಮಾಡಿದರೆ, ಸಮಕಾಲೀನ ಸಂದರ್ಭದ ಪಠ್ಯಪುಸ್ತಕಗಳಲ್ಲಿ (ಸಂಸ್ಕೃತ ರೂಪ, ಕನ್ನಡ ರೂಪ) ಪದರೂಪಗಳು, ಪದಗಳ ರೂಪಾಂತರಗಳು, ಬೇರೆ ರೂಪಗಳು, ಅರ್ಥ ತಿಳಿಯಿರಿ ಎಂದು ಕಲಿಕೆಗೆ ಅವಕಾಶ ಮಾಡಿಕೊಡಲಾಗಿದೆ.

ಉದಾಹರಣೆ : ಪದರೂಪಗಳು (ಕನ್ನಡ ರೂಪ, ಸಂಸ್ಕೃತ ರೂಪ)

೧. ಹಳೆಗನ್ನಡ/ನಡುಗನ್ನಡ – ಹೊಸಗನ್ನಡ

ಪೆಣ್ಣು – ಹೆಣ್ಣು

ಪೆರ್ಮೆ – ಹೆಮ್ಮೆ

ಪೆತ್ತವರು – ಹೆತ್ತವರು

ಪಾಲ್ಗಡಲು – ಹಾಲ್ಗಡಲು

ಪೆರ್ಚು – ಹೆಚ್ಚು

೨. ಸಂಸ್ಕೃತ ಪದ – ಕನ್ನಡ ಪದ

ರಾಜ – ರಾಯ

ಯಶ – ಜಸ

ವರ್ಣ – ಬಣ್ಣ

ಕುಮಾರ – ಕುವರ

ಸುಖ – ಸೊಗ

ಸ್ವಾತಂತ್ರ್ಯಪೂರ್ವ, ನಂತರದ ಪಠ್ಯಪುಸ್ತಕಗಳಲ್ಲಿ ಶಿಷ್ಟರೂಪಗಳನ್ನು ಬಳಕೆ ಮಾಡಿದರೆ, ಸಮಕಾಲೀನ ಪಠ್ಯಪುಸ್ತಕಗಳಲ್ಲಿ ಧ್ವನಿ ವ್ಯತ್ಯಾಸ, ಅರ್ಥ ವ್ಯತ್ಯಾಸ, ಸರಿ ರೂಪಗಳು ಮುಂತಾದ ಆಧುನಿಕ ಭಾಷಾವಿಜ್ಞಾನದಿಂದ ಕಸಿಗೊಂಡ ರೂಪಗಳನ್ನು ಬಳಕೆಮಾಡಿರುವುದು ಕಂಡುಬರುತ್ತದೆ. ಈ ಅಂಶಗಳನ್ನು ಗಮನಿಸಿದಾಗ ಭಾಷೆಯನ್ನು ಭಾಷಾವಿಜ್ಞಾನದ ಹಿನ್ನೆಲೆಯಲ್ಲಿ ನೋಡುವ ಮತ್ತು ಭಾಷೆಯ ಸರಿತಪ್ಪುಗಳನ್ನು ಸೂಕ್ಷ್ಮವಾಗಿ ಗಮನಿಸುವ ಅಂಶವಾಗಿದೆ.

ಉದಾಹರಣೆ

**೧. ಧ್ವನಿ ವ್ಯತ್ಯಾಸ ಗುರುತಿಸಿ ಹೇಳಿ**

ಅರಡಿದ – ಹರಡಿದ

ಖಳೆದು – ಕಳೆದು

ಭಾನಿನ – ಬಾನಿನ

ಅದ್ದಿನ – ಹದ್ದಿನ

ಹಿರುಳು – ಇರುಳು

**೨. ಈ ಪದಗಳನ್ನು ಸರಿಯಾದ ರೂಪದಲ್ಲಿ ಬರೆಯಿರಿ**

ಅವರಸ ______________

ದಡಕ್ಕನೆ ______________

ಬಯ ______________

ಸಮಾಧನ ______________

ಮೂವ್ವರು ______________

ಥಡವಾಗಿ ______________

ಹಪಗಾತ ______________

ಅಸಿರು ______________

ಸ್ವಾತಂತ್ರ್ಯಪೂರ್ವ ಮತ್ತು ನಂತರದ ಪಠ್ಯಪುಸ್ತಕಗಳಲ್ಲಿ ಲಿಂಗ, ವಚನ ಪರಿಭಾಷೆಗಳನ್ನು ಬಳಸಿದರೆ ಸಮಕಾಲೀನ ಪಠ್ಯಗಳಲ್ಲಿ ಅರ್ಥ ವ್ಯತ್ಯಾಸ ತಿಳಿಯಿರಿ, ಗಮನವಿಟ್ಟು ಓದಿ, ಗಮನಿಸಿರಿ ಎಂದು ಕಲಿಕೆಗೆ ಅವಕಾಶ ಮಾಡಿಕೊಡಲಾಗಿದೆ.

ಉದಾಹರಣೆ

೧. ಇವುಗಳನ್ನು ಓದಿ ಅರ್ಥವ್ಯತ್ಯಾಸ ತಿಳಿಯಿರಿ

ರಾಜ ಹೂಗಳನ್ನು ನೋಡಿದನು

ರಾಣಿ ಹೂಗಳನ್ನು ನೋಡಿದಳು

ಅವನು ಚಂಡನ್ನು ಎಸೆದನು

ಅಣ್ಣಂದಿರು ಪುಸ್ತಕಗಳನ್ನು ಓದಿದರು

೨. ಓದಿ ವ್ಯತ್ಯಾಸ ತಿಳಿಯಿರಿ

| ಏಕವಚನ | | ಬಹುವಚನ |
|---|---|---|
| ಹಬ್ಬ | – | ಹಬ್ಬಗಳು |
| ಅಣ್ಣ | – | ಅಣ್ಣಂದಿರು |
| ಮಗು | – | ಮಕ್ಕಳು |
| ಇದು | – | ಇವು |
| ಅರಸ | – | ಅರಸರು |

ಈ ಮೇಲಿನ ಅಂಶಗಳನ್ನು ಗಮನಿಸಿದಾಗ ವ್ಯಾಕರಣದ ಪರಿಭಾಷೆಗಳನ್ನು ಬಳಸುವುದರಿಂದ ಮಕ್ಕಳ ಭಾಷಾಕಲಿಕೆಗೆ ಪರಿಭಾಷೆಗಳು ತೊಡಕಾಗಬಾರದೆಂಬ ಉದ್ದೇಶದಿಂದ ವ್ಯಾಕರಣಾಂಶಗಳನ್ನು ಪರಿಭಾಷೆಗಳ ಮೂಲಕ ಕಲಿಸದೆ ಪದಗಳಲ್ಲಿಯ ವ್ಯತ್ಯಾಸವನ್ನರಿಯುವುದರ ಮುಖಾಂತರ ಭಾಷಾಪ್ರಭುತ್ವ ಪಡೆಯಲು ಅನುವು ಮಾಡಿಕೊಡಲಾಗಿದೆ. ಈ ರೀತಿ ಮಾಡಿರುವುದರಿಂದ ಕಲಿಕೆ ಭಾರವಾಗದೆ ಸುಲಭೀಕರಣಗೊಳ್ಳುವ ಉದ್ದೇಶವು ಇದರಲ್ಲಿದೆ.

ಸ್ವಾತಂತ್ರ್ಯ ಪೂರ್ವದ ಮತ್ತು ನಂತರದ ಪಠ್ಯಗಳಲ್ಲಿ 'ಪದಬಿಡಿಸಿ ಬರೆಯಿರಿ' ಎಂದು ಕರೆದರೆ ಸಮಕಾಲೀನ ಸಂದರ್ಭದ ಪಠ್ಯಗಳಲ್ಲಿ 'ಪದವಿಭಜನೆ ಮಾಡಿ', 'ಪದರಚನೆ ಗಮನಿಸಿ' ಎಂದು ಬಳಕೆಮಾಡಲಾಗಿದೆ. ಈ ಅಂಶವನ್ನು ಗಮನಿಸಿದಾಗ ಇಲ್ಲಿ ಕಂಡುಬರುವ ಸಂಗತಿಯಂದರೆ ಸ್ವಾತಂತ್ರ್ಯಪೂರ್ವದಲ್ಲಿ ಸಂಸ್ಕೃತಕ್ಕೆ ಕನ್ನಡವನ್ನು ಬಳಸಿದರೆ, ಸಮಕಾಲೀನ ಪಠ್ಯಗಳಲ್ಲಿ ಕನ್ನಡಕ್ಕೆ ಸಂಸ್ಕೃತವನ್ನು, ಕನ್ನಡಕ್ಕೆ ಕನ್ನಡವನ್ನು ಬಳಸಿರುವುದು ಗಮನಿಸುವಂತಹದ್ದಾಗಿದೆ.

ಸ್ವಾತಂತ್ರ್ಯ ಪೂರ್ವದ ಮತ್ತು ನಂತರದ ಪಠ್ಯಪುಸ್ತಕಗಳಲ್ಲಿಯ ವ್ಯಾಕರಣಾಂಶಗಳನ್ನು ಗುರುತಿಸಲು ಹೆಕ್ಕಿ ತೆಗೆ, ಪದಗಳನ್ನು ಹೆಕ್ಕು ಎಂದು ಕರೆದರೆ, ಸಮಕಾಲೀನ ಸಂದರ್ಭದ ಪಠ್ಯಗಳಲ್ಲಿ ಗೆರೆ ಎಳೆದ ಪದಗಳನ್ನು ಗಮನಿಸಿ, ಪದ

ಗಮನಿಸಿ ಬರೆಯಿರಿ ಎಂದು ದಾಖಲಿಸಲಾಗಿದೆ. ಉದಾಹರಣೆಗೆ ನಾಮಪದಗಳ ಗುಣವನ್ನು ಸೂಚಿಸುವ ಪದವೇ ಗುಣವಿಶೇಷಣ.

ಉದಾಹರಣೆ

೧. ಸುಲೋಚನ ಸುಂದರ ಹುಡುಗಿ.

೨. ಮೇರಿ ಕಪ್ಪು ಪೆನ್ನಿನಿಂದ ಬರೆಯುತ್ತಾಳೆ.

೩. ಹುಸೇನನ ಹತ್ತಿರ ಎತ್ತರ ಕುದುರೆ ಇದೆ.

೪. ಸರೋವರದಲ್ಲಿ ಕೆಂಪು ತಾವರೆಗಳು ಅರಳಿವೆ.

ಮೇಲಿನ ಅಂಶಗಳನ್ನು ಗಮನಿಸಿದಾಗ ಕಂಡುಬರುವ ಸಂಗತಿ ಎಂದರೆ ಸ್ವಾತಂತ್ರ್ಯ ಪೂರ್ವದಲ್ಲಿ ವ್ಯಾಕರಣಾಂಶಗಳನ್ನು ಪ್ರತ್ಯೇಕವಾದ ಪಠ್ಯಗಳಲ್ಲಿ ವಿವರಿಸಿದರೆ, ಸಮಕಾಲೀನ ಸಂದರ್ಭದ ಪಠ್ಯಗಳಲ್ಲಿ ವ್ಯಾಕರಣಾಂಶಗಳನ್ನು ಪರೋಕ್ಷವಾಗಿ ಭಾಷೆಯ ಜೊತೆಜೊತೆಯಲ್ಲಿಯೇ ಕಲಿಸಿಕೊಡುವುದು ಕಂಡುಬರುತ್ತದೆ. ಅಂದರೆ ಮೊದಲು ಭಾಷೆ ನಂತರ ವ್ಯಾಕರಣ ಎಂಬುದು ಇದರಿಂದ ತಿಳಿದುಬರುತ್ತದೆ.

ಸ್ವಾತಂತ್ರ್ಯಪೂರ್ವದ ಮತ್ತು ನಂತರದ ಪಠ್ಯಗಳಲ್ಲಿ ಪಠ್ಯವಿಷಯಕ್ಕೆ ಸಂಬಂಧಿಸಿದ ಅಭ್ಯಾಸದಡಿಯಲ್ಲಿ ಪ್ರಶ್ನಾವಳಿಗಳು, ಅಗತ್ಯವಿದ್ದಲ್ಲಿ ವ್ಯಾಕರಣಾಂಶಗಳನ್ನು (ಹಲವು ಪುಸ್ತಕಗಳಲ್ಲಿ ಯಾವುದೇ ತೆರನಾದ ಪ್ರಶ್ನೆಗಳು, ವ್ಯಾಕರಣಾಂಶಗಳಿಲ್ಲ) ನೀಡಿದರೆ, ಸಮಕಾಲೀನ ಪಠ್ಯಪುಸ್ತಕಗಳಲ್ಲಿ ಮೇಲಿನ ಅಂಶಗಳ ಜೊತೆಗೆ ಭಾಷಾ ಆಟಗಳು, ಪದರಚನಾ ಆಟ, ನುಡಿ ಆಟಗಳು, ಚಿತ್ರಪಾಠಗಳನ್ನು ಕಲಿಕೆಗೆ ಅನುಕೂಲವಾಗುವಂತೆ ಅಳವಡಿಸಲಾಗಿದೆ.

ಈ ಮೇಲಿನ ಅಂಶಗಳನ್ನು ಗಮನಿಸಿದಾಗ ಸ್ವಾತಂತ್ರ್ಯಪೂರ್ವ ಮತ್ತು ನಂತರದ ಪಠ್ಯಗಳು ಮಕ್ಕಳ ಬುದ್ಧಿಮಟ್ಟಕ್ಕೆ ಒರೆಗಲ್ಲಿನಂತವುಗಳಾದರೆ, ಸಮಕಾಲೀನ ಪಠ್ಯಗಳು ಮಕ್ಕಳ ಕಲಿಕೆಯು ಆಟದೊಂದಿಗೆ ಸಾಗುವುದರಿಂದ ಮಕ್ಕಳು ಸೃಜನಶೀಲರಾಗಿ, ಉಲ್ಲಾಸದಿಂದ ಕಲಿಯಲು ಆಕರ್ಷಕವಾದ ಚಿತ್ರಗಳೊಂದಿಗೆ ಕಲಿಕೆಗೆ ಸ್ಫೂರ್ತಿದಾಯಕವಾಗಿವೆ. ಪಠ್ಯಗಳು ಮಕ್ಕಳನ್ನು ಗುರಿಯಾಗಿಟ್ಟುಕೊಂಡು ರೂಪಿತವಾಗಿರುವುದರಿಂದ ಶೈಕ್ಷಣಿಕ ಹಂತದಿಂದ ಹಂತಕ್ಕೆ ಬಂದಂತೆ ಕಲಿಕೆ ಸರಳತೆಯಿಂದ ಸಂಕೀರ್ಣತೆಯ ಕಡೆಗೆ ಬದಲಾವಣೆ ಆಗಿರುವುದು ಕಂಡುಬರುತ್ತದೆ. ಸಮಕಾಲೀನ ಪಠ್ಯಗಳಲ್ಲಿ ಆಧುನಿಕ ಭಾಷಾವಿಜ್ಞಾನದ ಹಿನ್ನೆಲೆಯಲ್ಲಿ ರಚನೆಯಾಗಿರುವ ರೂಪಗಳ ಬಳಕೆ ಮಾಡಲಾಗಿದೆ. ವ್ಯಾಕರಣಾಂಶಗಳನ್ನು ಪಠ್ಯಗಳ ಜೊತೆಜೊತೆಯಲ್ಲಿ

ಅಳವಡಿಸಿದರೂ ಕೂಡ ಅವುಗಳನ್ನು ಅನುಗಮನ ಪದ್ಧತಿಯಲ್ಲಿ ಕ್ರಿಯಾತ್ಮಕವಾಗಿರುವುದು ಕಂಡುಬರುತ್ತದೆ. ಮೊದಲು ಭಾಷೆ ನಂತರ ವ್ಯಾಕರಣವಾದ್ದರಿಂದ ಇಂದಿನ ಪಠ್ಯಗಳಲ್ಲಿ ಭಾಷೆಯ ಬಳಕೆ ಮತ್ತು ರಚನೆಯ ಬಗ್ಗೆ ಹೆಚ್ಚಿನ ಆದ್ಯತೆಯನ್ನು ಕೊಟ್ಟಿರುವುದು ಪಠ್ಯಗಳಿಂದ ತಿಳಿದುಬರುವ ಅಂಶವಾಗಿದೆ. ಪ್ರಾಥಮಿಕ ಹಂತದಲ್ಲಿ ವ್ಯಾಕರಣಾಂಶಗಳನ್ನು ನೇರವಾಗಿ ಪರಿಚಯಿಸದಿದ್ದರೂ ಕೂಡ ಭಾಷೆಯೊಂದಿಗೆ ಅವು ಬೆಸೆದುಕೊಂಡಿರುತ್ತವೆ. ಮಾಧ್ಯಮಿಕ ಮತ್ತು ಪ್ರೌಢಶಾಲಾ ಹಂತಕ್ಕೆ ಬಂದಂತೆ ಪರಿಭಾಷೆಗಳನ್ನು ವಿವರಿಸಿರುವುದು ಕಂಡುಬರುತ್ತದೆ

## ಕನ್ನಡ ವ್ಯಾಕರಣ ಅಧ್ಯಯನ ಪರಂಪರೆ

ಕನ್ನಡ ವ್ಯಾಕರಣವನ್ನು ಅಧ್ಯಯನದ ಒಂದು ವಸ್ತುವನ್ನಾಗಿ ಆಯ್ದುಕೊಂಡು ಹಲವಾರು ಶತಮಾನಗಳೇ ಕಳೆದಿವೆ. ಕನ್ನಡ ವ್ಯಾಕರಣ ವಿಚಾರಗಳನ್ನು ಕುರಿತು ಕಳೆದ ಐವತ್ತು ವರ್ಷಗಳಲ್ಲಿ ಗಮನಾರ್ಹವಾದ ಚರ್ಚೆಗಳು ನಡೆದಿವೆ. ಅಂತಹ ಗಮನಾರ್ಹವಾದ ಚರ್ಚೆಗಳ ಆಯ್ದ ಭಾಗಗಳನ್ನು ಮಾತ್ರ ಈ ಅಧ್ಯಯನ ಪರಂಪರೆ ಅಡಿಯಲ್ಲಿ ಚರ್ಚೆಮಾಡಲಾಗಿದೆ.

ಇಪ್ಪತ್ತನೆಯ ಶತಮಾನದ ಆರಂಭಕಾಲದಿಂದ ವ್ಯಾಕರಣದ ಪ್ರಾಚೀನತೆಯನ್ನು ಅಧ್ಯಯನ ಮಾಡುವ ಆಸಕ್ತಿ ನೆಲೆಯೂರಿದೆ. ಸ್ವಾತಂತ್ರ್ಯ ಹೋರಾಟ ಮತ್ತು ಕರ್ನಾಟಕ ಏಕೀಕರಣ ಚಳುವಳಿಯ ಬೆಂಬಲಗಳು ಸಹಜವಾಗಿಯೇ ವ್ಯಾಕರಣ ಚರಿತ್ರೆಯ ಮೇಲೆ ಪ್ರಭಾವ ಬೀರಿರುವುದು ಕಂಡುಬರುತ್ತದೆ. ಏಕೀಕರಣದ ನಂತರದಲ್ಲಿ ನೋಡಿದರೆ ಈ ವ್ಯಾಕರಣ ಚರಿತ್ರೆಯ ಶೋಧಕಾರ್ಯಕ್ಕೆ ಅಧಿಕವಾದ ಬೆಂಬಲ ದೊರೆತಿಲ್ಲ. ಆ ಸಂದರ್ಭದವರೆಗೆ ದೊರೆತಿದ್ದ  ಆಕರ ಸಾಮಾಗ್ರಿ ಮತ್ತು ಅದನ್ನು ಬಳಸಿಕೊಂಡು ನಡೆಸಿದಂತಹ ಸಂಶೋಧನೆಗಳ  ಫಲಿತಾಂಶವನ್ನು ಒಪ್ಪಿಕೊಳ್ಳಲಾಗಿದೆ. ಸಹಜವಾದ ಆ ನೆಲೆಯ ಪ್ರಯತ್ನಗಳಲ್ಲಿ ಇರಬಹುದಾದ ಪ್ರಶ್ನೆಗಳನ್ನು ಬಿಡಿಸುವ  ಪ್ರಯತ್ನಕ್ಕೆ  ಹೋಗದೆ ಅವುಗಳು ಇರುವಂತೆಯೇ ಒಪ್ಪಿಕೊಳ್ಳಲಾಗಿದೆ. ಆದರೆ ಪ್ರಾಚೀನತೆಯನ್ನು ಕುರಿತ ವಿವರಗಳು ಮತ್ತೆ ನಮ್ಮೆದುರಿಗೆ ಬರುತ್ತವೆ.

ವ್ಯಾಕರಣದ ಪ್ರಾಚೀನತೆಯ ಕಲ್ಪನೆಯು ಚರಿತ್ರೆಯ ಕಲ್ಪನೆಯೊಡನೆ ಬೆಸೆದುಕೊಂಡಿದೆ. ವ್ಯಾಕರಣದ ಚರಿತ್ರೆಯನ್ನು ಬರೆಯುವವರು ಇಪ್ಪತ್ತನೆಯ ಶತಮಾನದ ಆರಂಭದಲ್ಲೆ ವ್ಯಾಕರಣದ ಚರಿತ್ರೆಯನ್ನು ರಚಿಸಲು ಪ್ರಾರಂಭಿಸಿದರು. ಚರಿತ್ರೆಯ ದೃಷ್ಟಿಕೋನ ಸಾಂಪ್ರದಾಯಿಕವಾಗಿ ಕಳೆದ ಐವತ್ತು ವರ್ಷಗಳಲ್ಲಿ ಬೇರೆ ಬೇರೆ

ಪ್ರಮಾಣದಲ್ಲಿ ಇಂಥ ಚರಿತ್ರೆಗಳನ್ನು ನಡೆಸಿಕೊಂಡು ಬರಲಾಗಿದೆ. ಈ ಹಿನ್ನೆಲೆಯಲ್ಲಿ ವ್ಯಾಕರಣವನ್ನು ಸಾಂಪ್ರದಾಯಿಕವಾದ ವ್ಯಾಕರಣ, ಸಂಸ್ಕೃತ ಭೂಯಿಷ್ಠವಾದ ವ್ಯಾಕರಣ, ಹಳೆಗನ್ನಡವ್ಯಾಕರಣ, ಹೊಸಗನ್ನಡವ್ಯಾಕರಣ, ಆಧುನಿಕವ್ಯಾಕರಣ, ಸರಳವ್ಯಾಕರಣ, ಸುಲಭವ್ಯಾಕರಣ, ಬಾಲವ್ಯಾಕರಣ, ಪ್ರೌಢವ್ಯಾಕರಣ ಇತ್ಯಾದಿ ಕ್ರಮವನ್ನೇ ಇಟ್ಟುಕೊಂಡು ಬರಲಾಗಿದೆ. ಈ ನಿಲುವು ಅಥವಾ ವಾದವನ್ನು ಒಪ್ಪಿಕೊಂಡಿದ್ದು ಯಾರು ಇದರ ಭರವಸೆಯ ಅರ್ಹತೆಯನ್ನು ಪ್ರಶ್ನಿಸುವ ಗೋಜಿಗೆ ಹೋಗಿಲ್ಲ. ಮುಖ್ಯವಾಗಿ ಈ ವಿವರಗಳಲ್ಲಿ ಕಂಡುಬರುವ ಕೊರತೆ ಎಂದರೆ ಈ ವರ್ಗೀಕರಣಗಳ ನಡುವಿನ ರೇಖೆ ಎಲ್ಲಿದೆ ಎಂಬುದಾಗಿದೆ. ಒಂದು ಕಾಲಘಟ್ಟದಲ್ಲಿ ಈ ರೇಖೆಯನ್ನು ನಿರ್ಧಿಷ್ಟವಾಗಿ ಹಾಕುವುದು ಸಾಧ್ಯವೇ? ಇಲ್ಲವೇ ಚರಿತ್ರೆಯ ತರ್ಕಬದ್ಧವಾದ ಕಲ್ಪನೆಯನ್ನು ಬದಲಾಯಿಸಬೇಕಲ್ಲವೇ? ಅಲ್ಲದೆ ಈ ವರ್ಗೀಕರಣಕ್ಕೆ ಅಥವಾ ಕಾಲಾನುಕ್ರಮಣಿಕೆಯ ನಿರ್ಣಯಕ್ಕೆ ಲಿಖಿತವಾದ ದಾಖಲೆಗಳನ್ನು ಆಯ್ದುಕೊಳ್ಳಲಾಗಿದೆ. ಒಂದು ನಿರ್ಧಿಷ್ಟವಾದ ಕಾಲಘಟ್ಟದಲ್ಲಿ ಈ ಲಿಖಿತ ದಾಖಲೆಗಳು ರೂಪಿತಗೊಂಡಿವೆ ಎಂದು ಹೇಳಿದರೂ ಕೂಡ ಅವು ಬಳಸಿದ ಕನ್ನಡಕ್ಕೆ ಅಂತಹ ಕಾಲದ ನಿಯಮಗಳು ಸಾಧ್ಯವಾಗುವುದಿಲ್ಲ. ವಿವಿಧ ಕಾಲಘಟ್ಟದಲ್ಲಿ ರಚನೆಯಾದ ವ್ಯಾಕರಣಗಳು ಏಕ ಮಾದರಿಯ ಪರಿಭಾಷೆಗಳನ್ನು ಹೊಂದಿದ್ದರೂ, ವಿಶ್ಲೇಷಣ ಮಾದರಿಯಲ್ಲಿ ಭಿನ್ನತೆ ಕಂಡುಬರುತ್ತದೆ. ಈ ಭಿನ್ನತೆಗೆ ಕಾರಣ ವ್ಯಾಕರಣ ಕಲಿಕೆ ಸುಲಭೀಕರಣಗೊಳ್ಳಲು ಮಾಡಿಕೊಂಡ ಕ್ರಮಗಳಾಗಿವೆ. ಭಾಷೆ ನಿಂತ ನೀರಲ್ಲ ಅದು ಹರಿಯುವ ನೀರಿದ್ದಂತೆ ಎಂದು ಅದರ ಪರಿವರ್ತನೆಯನ್ನು ಹೇಳಿಕೊಂಡು ಬರುತ್ತಿರುವ ನಾವು ಪ್ರಾಚೀನ ಕಾಲದಿಂದಲೂ ಭಾಷಿಕ ರಚನೆಯ ನಿಯಮಗಳು ಹಾಗೆಯೇ ಇವೆಯೇ? ಅವುಗಳಲ್ಲಿ ಬದಲಾವಣೆಯಾಗಿಲ್ಲವೆ? ವ್ಯಾಕರಣ ಪ್ರಶ್ನಾರ್ಹವಲ್ಲವೇ? ನಾವು ಶಾಲೆಗಳಲ್ಲಿ ಕಲಿತ ವ್ಯಾಕರಣ ನಮ್ಮ ದೈನಂದಿನ ದಿನಗಳಲ್ಲಿ ಬಳಕೆಯಾಗುತ್ತಿದೆಯೇ? ವ್ಯಾಕರಣ ಇಂದು ಅಗತ್ಯವಿದೆಯೇ? ಎಂಬಿತ್ಯಾದಿ ಪ್ರಶ್ನೆಗಳನ್ನು ನಾವು ಹಾಕಿಕೊಂಡಿಲ್ಲ ಎಂಬುದು ಸ್ಪಷ್ಟವಾಗಿ ಕಂಡುಬರುತ್ತದೆ.

ಬಳಕೆಯಾದ ದಾಖಲೆಗಳಿಂದ ವ್ಯಾಕರಣದ ಅನುಕ್ರಮಣಿಕೆ ಚರಿತ್ರೆಯನ್ನು ಹೇಗೆ ಬರೆಯಲು ಸಾಧ್ಯ? ಎಲ್ಲವುಗಳಿಗಿಂತ ಮುಖ್ಯವಾಗಿ ಈ ವ್ಯಾಕರಣ ಚರಿತ್ರೆ ರಚನೆಯ ಮುಂದಿಡುವ ಪ್ರಶ್ನೆಯೆಂದರೆ ಇದು ಹೀಗಿದೆ ಎಂಬ ವಿವರಣೆ ಮಾತ್ರವಾಗಿದೆ. ಅಂದರೆ ವ್ಯಾಕರಣದಲ್ಲಿ ಏನು ಬದಲಾವಣೆ ಆಗುತ್ತದೆಂದು ಹೇಳಿಕೊಂಡು ಬಂದಿದ್ದೇವೆಯೇ ಹೊರತು ಏಕೆ ಬದಲಾವಣೆ ಆಗುತ್ತದೆ ಎಂದು ಹೇಳಿಲ್ಲ. ಈ ಪ್ರಶ್ನೆ

ನಮ್ಮ ವ್ಯಾಕರಣ ಚರಿತ್ರೆಗೆ ಮುಖ್ಯವಾಗಿಯೇ ಇಲ್ಲ. ಹಳೆಗನ್ನಡ ಕಾಲಘಟ್ಟದ ಸಬಿಂದುಕ ಪದಗಳಲ್ಲಿ ಬಿಂದು ಲೋಪವಾಯಿತು ಎಂದು ಹೇಳುವುದು, ಹಳೆಗನ್ನಡದ ವ್ಯಂಜನಾಂತ ಪದಗಳು ಲೋಪವಾಗಿ ಸ್ವರಾಂತವಾದುವು ಎಂದು ಹೇಳುವುದು ವಿವರಣೆಯಾಗುತ್ತದೆ. ಅಂದರೆ ಪ್ರಸ್ತುತ ವ್ಯಾಕರಣದ ವಿಶ್ಲೇಷಣೆಯಲ್ಲಿ ಈ ರೀತಿಯ ಪಲ್ಲಟಗಳು ಏಕೆ ಉಂಟಾದವು ಎಂಬ ಪ್ರಶ್ನೆಗಳನ್ನು ಎತ್ತಿಕೊಳ್ಳುವುದಿಲ್ಲ. ಅಂತಹ ಪ್ರಶ್ನೆಗಳನ್ನು ಎತ್ತಿಕೊಂಡರೂ ಅದಕ್ಕೆ ವ್ಯಾಕರಣ ನೆಲೆಯ ಉತ್ತರವನ್ನು ನೀಡುವ ಬದಲು ವ್ಯಾಕರಣೇತರವಾದ ಉತ್ತರವನ್ನು ನೀಡುತ್ತಾರೆ. ಉದಾಹರಣೆ ೧: ಸಬಿಂದುಕಗಳು ಅಬಿಂದುಕಗಳಾಗಿದ್ದು, ವ್ಯಂಜನಾಂತ ಪದಗಳು ಸ್ವರಾಂತವಾಗಿದ್ದು ನಮ್ಮ ಉಚ್ಚಾರಣೆಯ ಅನಕೂಲಕ್ಕಾಗಿ ಎನ್ನುವ ವಿವರಣೆಗಳು ವ್ಯಾಕರಣವಲ್ಲ. ಅದು ವ್ಯಾಕರಣೇತರವಾದದ್ದು. ಉಚ್ಚಾರಣೆಯ ಅನುಕೂಲವೆಂಬ ಬಯಕೆ ನಿರ್ಧಿಷ್ಟವಾದ ಒಂದು ಕಾಲಘಟ್ಟದ ಭಾಷಿಕರಿಗೆ ಮಾತ್ರ ಬರುತ್ತದೆಂಬ ಪ್ರಶ್ನೆಯು ಬಹಳ ಮುಖ್ಯವಾದದ್ದು. ನಾವಿಲ್ಲಿ ಗಮನಿಸುವಂತಹ ಅಂಶವೆಂದರೆ ವ್ಯಾಕರಣ ಚರಿತ್ರೆಯನ್ನು ರಚಿಸುವಲ್ಲಿ ನವೀನ ಪ್ರಶ್ನೆಗಳನ್ನು ನಾವು ಎತ್ತಿಕೊಂಡಿಲ್ಲ. ಆಧುನಿಕ ಭಾಷಾವಿದ್ವಾಂಸರಲ್ಲಿ ಒಬ್ಬರಾದ ಡಿ.ಎನ್.ಶಂಕರಭಟ್ ಅವರು ಈ ಸಾಂಪ್ರದಾಯಿಕ ವ್ಯಾಕರಣ ವಿಚಾರಗಳಿಗೆ ಹೊರತಾದ ಅನೇಕ ಚಿಂತನೆಗಳು ತಮ್ಮ 'ಕನ್ನಡ ಭಾಷಾ ಕಲ್ಪಿತ ಚರಿತ್ರೆ' ಎಂಬ ಪುಸ್ತಕದಿಂದ ಹಿಡಿದು ಇಂದಿಗೂ ಹೊಸ ಬರಹದಡಿಯಲ್ಲಿ ಬರೆದ ಅವರ ಅನೇಕ ಪುಸ್ತಕಗಳೇ ಸಾಕ್ಷಿಯಾಗಿವೆ.

ಕನ್ನಡದ ಪ್ರಭೇದಗಳನ್ನು ಆಧುನಿಕ ವ್ಯಾಕರಣಶಾಸ್ತ್ರದ ನೆಲೆಗಳು ವಿವರಿಸಿದ್ದರೂ ಈ ವ್ಯಾಕರಣಶಾಸ್ತ್ರದಲ್ಲಿ ಆಂತರಿಕವಾಗಿದ್ದ ಕೆಲವು ಮಿತಿಗಳಿಂದಾಗಿ ಹೆಚ್ಚು ಪರಿಣಾಮ ಬೀರುವುದು ಸಾಧ್ಯವಾಗಲಿಲ್ಲ. ಪ್ರಮುಖವಾಗಿ ವ್ಯಾಕರಣವನ್ನು ಅಥವಾ ವ್ಯಾಕರಣಾಂಶಗಳನ್ನು ವಿವರಿಸುವಾಗ ಈ ವ್ಯಾಕರಣಾಂಶ ಹೀಗಿದೆ ಎಂದು ಹೇಳುವುದೇ ಪ್ರಧಾನವಾಯಿತೇ ಹೊರತು ಈ ವ್ಯಾಕರಣಾಂಶ ಏಕೆ ಹೀಗಿದೆ ಎಂಬ ಪ್ರಶ್ನೆಗೆ ವಿವರ ಕಂಡುಕೊಳ್ಳುವ ಆಸಕ್ತಿಯನ್ನು ಮಾಡಲಿಲ್ಲ ಎಂಬುದು ಸ್ಪಷ್ಟವಾಗಿ ಕಂಡುಬರುತ್ತದೆ. ಉದಾಹರಣೆ ೨: ಉತ್ತರ ಕರ್ನಾಟಕದ ಹಲವು ಸಾಮಾಜಿಕ ಉಪಭಾಷೆಗಳಲ್ಲಿ ನಾಮಪದಗಳು ಗ್ರಾಂಥಿಕ ಕನ್ನಡದ 'ಎ' ಕಾರಾಂತದ ಬದಲಾಗಿ 'ಇ' ಕಾರಾಂತವಾಗುತ್ತದೆಂಬುದು ನಿರೂಪಣೆ. ಅಂದರೆ ಗ್ರಾಂಥಿಕ ಕನ್ನಡದ ಕಲೆ, ಬಲೆ, ಮಳೆ, ಬೆಳೆ, ಬೆಲೆ, ನೆಲೆ, ಸೆಲೆ ಇತ್ಯಾದಿ ಪದಗಳು ಕಲಿ, ಬಲಿ, ಮಳಿ, ಬೆಳಿ, ಬಲಿ, ನೆಲಿ, ಸೆಲಿ ಎಂದಾಗುತ್ತವೆ. ಇದೊಂದು ವಾಸ್ತವಿಕ ನಿರೂಪಣೆಯಾಗಿದೆ. ಆದರೆ ಇದು ಏಕೆ

ಹೀಗಾಗುತ್ತದೆ. ಎಂಬ ಪ್ರಶ್ನೆಯನ್ನು ಹಾಕಿಕೊಳ್ಳುವುದಕ್ಕಾಗಲಿ ಇಲ್ಲವೆ ಆ ಪ್ರಶ್ನೆಗೆ ಉತ್ತರವನ್ನು ಕಂಡುಕೊಳ್ಳುವುದನ್ನಾಗಲಿ ಮಾಡಲಿಲ್ಲ. ಸೀಮಿತವಾದ ಪ್ರದೇಶಗಳಲ್ಲಿ 'ಎ' ಕಾರ 'ಇ' ಕಾರವಾಗುವುದು ನಾಮಪದಗಳ ಮಿತಿಗೆ ಮಾತ್ರ ಒಳಪಟ್ಟಿದೆ. ಆದರೆ ದಕ್ಷಿಣ ಕನ್ನಡದಲ್ಲಿ ಕ್ರಿಯಾಪದಗಳಲ್ಲಿ ಈ ಬದಲಾವಣೆ ಕಂಡುಬರುತ್ತದೆ. ಉದಾಹರಣೆಗೆ : ಕರೆ, ಕೆರೆ, ಜರೆ, ತೆಗೆ, ಬೆರೆ, ಬರೆ, ನೆರೆ ಇತ್ಯಾದಿ. ಈ ತೆರನಾದ ವ್ಯತ್ಯಾಸವಾಗಲು ಕಾರಣಗಳೇನು? ವರ್ಣನಾತ್ಮಕ ವ್ಯಾಕರಣ ಶಾಸ್ತ್ರದ ಜೊತೆಗೆ ಚಾರಿತ್ರಿಕ ವ್ಯಾಕರಣ ಶಾಸ್ತ್ರದ ಪರಿಕರಗಳನ್ನು ಸೇರಿಸುವ ಪ್ರಯತ್ನವನ್ನು ಮಾಡಿದ್ದರೆ ಇನ್ನಷ್ಟು ಮುಖ್ಯವಾದ ವಿಶ್ಲೇಷಣೆಗಳು ದೊರಕಬಹುದಿತ್ತು. ಹೀಗಿದೆ ಎಂದು ನಿರೂಪಣೆ ಕೊಡುವ ಬದಲಾಗಿ ಹೀಗೇಕಾಯಿತು? ಅಥವಾ ಹೀಗಾಗಲು ಕಾರಣಗಳೇನು? ಎಂಬ ಪ್ರಶ್ನೆಗಳನ್ನು ಎತ್ತಿಕೊಂಡಿದ್ದರೆ ವ್ಯಾಕರಣದ ಚರಿತ್ರೆಗೆ ಕೆಲವು ವಿವರಗಳು ದಕ್ಕಬಹುದಿತ್ತು.

ಡಿ.ಎನ್.ಶಂಕರಭಟ್ ಅವರು ನಾಲ್ಕು ದಶಕಗಳ ಅವಧಿಯಲ್ಲಿ ಈ ಹೊಸಬರಹದ ಚಿಂತನಧಾರೆಯನ್ನು ವಿಸ್ತರಿಸಿಕೊಂಡು ಬರುತ್ತಿದ್ದಾರೆ. ವ್ಯಾಕರಣದ ಚರಿತ್ರೆಯನ್ನು ಕಟ್ಟುವಾಗ ಲಿಖಿತವಾದ ದಾಖಲೆಗಳನ್ನು ಮಾತ್ರ ಆಶ್ರಯಿಸದೆ ಇಂದಿನ ಆಡುರೂಪಗಳನ್ನು ಕೂಡ ಪರಿಗಣಿಸಬೇಕೆಂದು ಅಭಿಪ್ರಾಯಪಡುತ್ತಾರೆ. ನಾವಿಂದು ಸಾಮಾಜಿಕ ಪ್ರಭೇದಗಳು ಎಂದು ಗುರುತಿಸುತ್ತಿರುವ ನಾನಾ ಪ್ರಕಾರದ ಮಾದರಿಗಳು ಸಮಕಾಲೀನವಾಗಿ ಏಕಕಾಲದಲ್ಲಿ ಬಳಕೆಯಲ್ಲಿರುವಂತೆ ಕಂಡರೂ ಅವು ವಿವಿಧ ಕಾಲಘಟ್ಟದಲ್ಲಿ ರೂಪಗೊಂಡಿರುತ್ತವೆ. ಅವು ರೂಪಗೊಂಡ ಕಾಲಘಟ್ಟದ ಕನ್ನಡದ ಲಕ್ಷಣಗಳನ್ನು ಆಯಾ ಪ್ರಭೇದಗಳನ್ನು ಸಮಕಾಲೀನ ಮಾದರಿ ಎಂದಷ್ಟೇ ವಿಶ್ಲೇಷಣೆ ಮಾಡಿದರೆ ಅವುಗಳಲ್ಲಿ ಹುದುಗಿರುವ ಚಾರಿತ್ರಿಕ ಪದಗಳನ್ನು ಹೊರತೆಗೆಯಬೇಕು. ಆಗ ಮಾತ್ರ ವ್ಯಾಕರಣ ಬೆಳೆದುಬಂದ ಬಗೆಯನ್ನು ತಿಳಿಯಲು ಸಾಧ್ಯವಾಗುತ್ತದೆ. ವ್ಯಾಕರಣದ ಚರಿತ್ರೆಯನ್ನು ಆಡುಮಾತಿನ ವಿವಿಧ ರೂಪಗಳನ್ನು ಆಧರಿಸಿಯೂ ಕಟ್ಟಬಹುದು. ಅಲ್ಲದೆ ಹಾಗೆ ಮಾಡುವುದರಿಂದ ಆ ಚರಿತ್ರೆಗೆ ಪರಿಪೂರ್ಣತೆಯನ್ನು ಕಂಡುಕೊಳ್ಳಲು ಸಾಧ್ಯವಾಗುತ್ತದೆಂಬ ವಾದವನ್ನು ಕನ್ನಡದ ದೃಷ್ಟಾಂತಗಳ ಮೂಲಕ ಡಿ.ಎನ್.ಶಂಕರಭಟ್ ಅವರು ಸ್ಪಷ್ಟಪಡಿಸುತ್ತಾರೆ.

'ಕಳೆದ ಐವತ್ತು ವರ್ಷಗಳಲ್ಲಿ ಕನ್ನಡ ವ್ಯಾಕರಣವನ್ನು ವಿವರಿಸುವ ಹಲವು ಪ್ರಯತ್ನಗಳು ನಡೆದಿವೆ. ೧೯೫೭ರಲ್ಲಿ ಅಮೇರಿಕಾದ ಲಿಂಗ್ವೆಸ್ಟಿಕ್ ಸೊಸೈಟಿ ಆಫ್ ಅಮೇರಿಕ ಇವರು ನಡೆಸಿದ ವ್ಯಾಕರಣಶಾಸ್ತ್ರದ ಬೇಸಿಗೆ ಶಿಬಿರದಲ್ಲಿ ಭಾಗವಹಿಸಿದ

ಕನ್ನಡದ ಅಂದಿನ ಹಲವು ವಿದ್ವಾಂಸರು ಮತ್ತು ತರುಣರು ಕನ್ನಡವನ್ನು ವಿಶ್ಲೇಷಿಸುವ ಮಾರ್ಗಗಳನ್ನು ಕಂಡುಕೊಂಡರು. ಆಗ ಪ್ರಚಲಿತದಲ್ಲಿದ್ದ ವ್ಯಾಕರಣಶಾಸ್ತ್ರದ ಸಿದ್ಧಾಂತಗಳನ್ನು ಅನ್ವಯಿಸುವ ಪ್ರಯತ್ನಗಳನ್ನು ಮಾಡಿದರು. ಮುಖ್ಯವಾಗಿ ವರ್ಣನಾತ್ಮಕ ವ್ಯಾಕರಣಶಾಸ್ತ್ರ, ಚಾರಿತ್ರಿಕ ವ್ಯಾಕರಣಶಾಸ್ತ್ರದಲ್ಲಿ ಆಸಕ್ತಿ ಬೆಳೆದವು. ಇದರ ಪರಿಣಾಮವಾಗಿ ಹಲವು ಅಧ್ಯಯನಗಳು ನಡೆದಿವೆ. ವರ್ಣನಾತ್ಮಕ ವ್ಯಾಕರಣಶಾಸ್ತ್ರದ ನೆಲೆಯಲ್ಲಿ ಕನ್ನಡದ ಹಲವು ಪ್ರಭೇದಗಳನ್ನು ವಿಶ್ಲೇಷಿಸುವ ಪ್ರಯತ್ನಗಳು ಮುಂದುವರೆದವು. ಮುಖ್ಯವಾಗಿ ಪ್ರಾದೇಶಿಕ ಮತ್ತು ಸಾಮಾಜಿಕ ಪ್ರಭೇದಗಳನ್ನು ವಿವರಿಸಲು ಕೆಲವರು ಆಸಕ್ತರಾದರೆ ಮತ್ತೆ ಕೆಲವರು ಕನ್ನಡದ ವಿವಿಧ ಚಾರಿತ್ರಿಕ ಪ್ರಭೇದಗಳನ್ನು ವಿವರಿಸುವ ಪ್ರಯತ್ನ ಮಾಡಿದರು' (ಡಾ.ಕೆ.ವಿ.ನಾರಾಯಣ: ಕನ್ನಡ ಜಗತ್ತು ಅರ್ಧಶತಮಾನ ಪುಟ: ೨೮೬-೨೮೭) ಎಂದು ಅಭಿಪ್ರಾಯಪಡುತ್ತಾರೆ.

ಕನ್ನಡದ ವಿವಿಧ ಪ್ರಭೇದಗಳನ್ನು ಕುರಿತು ಮಾಡಿದ ಅಧ್ಯಯನಗಳೆಲ್ಲ ಸ್ವತಂತ್ರವಾಗಿ ಪರಿಪೂರ್ಣವೆನ್ನಿಸಲು ಪ್ರಯತ್ನಪಡುತ್ತಿದ್ದವು. ಅಧ್ಯಯನಕಾರರು ಇವುಗಳ ನಡುವೆ ಒಂದು ಚರ್ಚೆ ಅಥವಾ ಸಂವಾದವನ್ನು ಬೆಳೆಸುವ ಆಸಕ್ತಿಯನ್ನು ಮಾಡಲಿಲ್ಲ. ಇದಕ್ಕೆ ಪ್ರಮುಖವಾದ ಕಾರಣವೆಂದರೆ ಈ ತೆರನಾದ ಅಧ್ಯಯನಗಳು ಅಂತಾರಾಷ್ಟ್ರೀಯ ಭಾಷೆಯಾದ ಆಂಗ್ಲ ಭಾಷೆಯಲ್ಲಿ ನಡೆದವು. ಹೀಗಾಗಿ ಅವು ಅಂತಾರಾಷ್ಟ್ರೀಯ ಆಸಕ್ತಿಯನ್ನು ಉಳಿಸಿಕೊಂಡರೂ, ಕನ್ನಡ ವ್ಯಾಕರಣ ಅಧ್ಯಯನಗಳಲ್ಲಿ ಆಸಕ್ತರಾದವರ ಕ್ಷೇತ್ರವನ್ನು ತಲುಪಲಿಲ್ಲ. ಈ ಕಾರಣದಿಂದಾಗಿ ಮೇಲೆ ಹೇಳಿದ ಡಾ.ಕೆ.ವಿ.ನಾರಾಯಣ ಅವರ ಅಧ್ಯಯನಗಳ ಶೈಕ್ಷಣಿಕ ಪ್ರಭಾವ ತುಂಬಾ ಕಡಿಮೆ ಎಂದು ಹೇಳಬೇಕಾಗುತ್ತದೆ. ಹೀಗಾಗಿ ವ್ಯಾಕರಣ ಅಧ್ಯಯನದ ಸಾಂಪ್ರದಾಯಿಕ ಪರಂಪರೆ ಯಾವುದೇ ತೊಂದರೆಯೂ ಇಲ್ಲದೆ ಅಭಿವೃದ್ಧಿ ಹೊಂದುತ್ತಾ ಹೋಯಿತು. ಆಧುನಿಕ ವ್ಯಾಕರಣಶಾಸ್ತ್ರದ ತರಬೇತಿಯನ್ನು ಪಡೆದವರಾಗಿದ್ದ ಡಾ.ಎಚ್.ಎಸ್.ಬಿಳಿಗಿರಿಯವರು ಮೇಲೆ ಹೇಳಿದ ಚರ್ಚೆಯ ಕೊರತೆಯನ್ನು ಪರಿಹರಿಸಲು ೧೯೭೦ರ ದಶಕದಲ್ಲಿ ವ್ಯಾಕರಣಕಾರನಾದ ಕೇಶಿರಾಜನ ಶಬ್ದಮಣಿದರ್ಪಣವನ್ನು ನವೀನ ಶಾಸ್ತ್ರೀಯ ನೆಲೆಗಟ್ಟಿನಲ್ಲಿ ವಿವರಿಸಲು ಮುಂದಾದರು. ಈ ನಿಟ್ಟಿನಲ್ಲಿ ಅವರ 'ಆಲೋಕ' ಕೃತಿಯು ಪ್ರಮುಖ ಕೃತಿಯಾಗಿದೆ. ಆದರೆ ಶಬ್ದಮಣಿದರ್ಪಣದ ಎಲ್ಲ ಪ್ರಕರಣಗಳನ್ನು ವಿವರಿಸುವ ಬಿಳಿಗಿರಿಯವರ ಕೆಲಸ ಪೂರ್ಣಗೊಳ್ಳಲಿಲ್ಲ. ಇತರೆ ಬೇರೆ ಯಾರು ಬಿಳಿಗಿರಿಯವರ ಮಾರ್ಗವನ್ನು ಅನುಸರಿಸಲಿಲ್ಲ. ಕೇಶಿರಾಜನ ವಿಚಾರಗಳು ಆಧುನಿಕ ಚಿಂತನೆಗಳ

ಹಿನ್ನೆಲೆಯಲ್ಲಿ ಎಷ್ಟು ಮನ್ನಣೆ ಪಡೆದಿವೆ ಅಥವಾ ಎಷ್ಟು ಮನ್ನಣೆ ಪಡೆದಿಲ್ಲ ಎಂಬ ಸಂಗತಿಯನ್ನು ಅವನು ಎತ್ತಿಕೊಂಡ ಸಮಸ್ಯೆಗಳನ್ನು ಇಂದಿನ ಪರಿಕರಗಳಿಂದ ನೋಡಿದಾಗ ಯಾವ ಫಲಿತಾಂಶ ದೊರೆಯುತ್ತದೆ ಎನ್ನುವುದನ್ನು ವಿವರಿಸಲು ಪ್ರಯತ್ನಿಸಿದ್ದಾರೆ.

ಕನ್ನಡವನ್ನು ಕುರಿತು ನಡೆದ ಅಧ್ಯಯನಗಳನ್ನು ಗಮನಿಸಿದಾಗ ಪ್ರಮುಖವಾಗಿ ಎರಡು ರೀತಿಯಲ್ಲಿ ನಡೆದಿರುವುದು ಕಂಡುಬರುತ್ತದೆ. ಒಂದು: ಕನ್ನಡವನ್ನೇ ಕೇಂದ್ರವಾಗಿರಿಸಿಕೊಂಡು ನಡೆಸಿದ ಅಧ್ಯಯನಗಳು. ಎರಡು: ಕನ್ನಡವನ್ನು ದೃಷ್ಟಾಂತವನ್ನಾಗಿ ತೆಗೆದುಕೊಂಡು ಅದರ ಮೂಲಕ ವ್ಯಾಕರಣಶಾಸ್ತ್ರಕ್ಕೆ ಸಂಬಂಧಪಟ್ಟ ನೆಲೆಗಳನ್ನು ವಿವರಿಸುವ ಪ್ರಯತ್ನಗಳನ್ನು ಮಾಡುವುದಾಗಿದೆ. ಎರಡನೆಯ ರೀತಿಯ ಅಧ್ಯಯನಗಳು ಸಾಮಾನ್ಯವಾಗಿಯೇ ಅಂತಾರಾಷ್ಟ್ರೀಯ ಮಿತಿಯನ್ನು ಪಡೆದಿವೆ. ಜಾಗತಿಕ ಮಟ್ಟದಲ್ಲಿ ಹಲವು ವಿದ್ವಾಂಸರು ಇಂತಹ ಅಧ್ಯಯನಗಳಲ್ಲಿ ತೊಡಗಿಸಿಕೊಂಡಿದ್ದಾರೆ. ಈ ತೆರನಾದ ಅಧ್ಯಯನಗಳು ಕನ್ನಡವನ್ನು ಮಾಹಿತಿಯನ್ನಾಗಿ ಬಳಸಿಕೊಂಡಿದೆ ಮತ್ತು ಹೆಚ್ಚಾಗಿ ಆಂಗ್ಲ ಭಾಷೆಯಲ್ಲಿವೆ. ಇಂತಹ ಅನೇಕ ಅಧ್ಯಯನಗಳು ಕನ್ನಡ ವಿದ್ವತ್ ಲೋಕಕ್ಕೆ ಅಪರಿಚಿತವಾಗಿಯೇ ಉಳಿದಿವೆ. ಉದಾಹರಣೆಗೆ : ಉಲ್ರೀಚ್ ಅವರು ನಡೆಸಿದ ಹವ್ಯಕ ಭಾಷೆಯ ಅಧ್ಯಯನಗಳು.

ಕನ್ನಡವನ್ನು ಮಾಹಿತಿಯ ನೆಲೆಯಲ್ಲಿ ಬಳಸಿಕೊಂಡ ಇನ್ನು ಕೆಲವರು ತೌಲನಿಕ ವ್ಯಾಕರಣಶಾಸ್ತ್ರದ ಹಿನ್ನೆಲೆಯಲ್ಲಿ ಅಧ್ಯಯನಗಳನ್ನು ಮುಂದುವರೆಸಿದ್ದಾರೆ. ಇವುಗಳು ಕೂಡ ಶೈಕ್ಷಣಿಕವಾಗಿ ಕನ್ನಡ ಅಧ್ಯಯನ ಕ್ಷೇತ್ರದಿಂದ ದೂರ ಉಳಿದವು. ಉದಾಹರಣೆಗೆ: ದ್ರಾವಿಡ ಭಾಷೆಗಳನ್ನು ಅಧ್ಯಯನ ಮಾಡಿದಂತಹ ಭಾಷಾವಿಜ್ಞಾನಿಗಳಾದ ಎಂ.ಬಿ.ಎಮಿನೋ ಅವರು ಟಿ.ಬರೋ ಅವರೊಡನೆ ರಚಿಸಿದ 'ದ್ರವಿಡಿಯನ್ ಎಟಿಮೆನೋಲಾಜಿಕಲ್ ಡಿಕ್ಷನರಿ' ಎಂಬ ಗ್ರಂಥವನ್ನು ನಾವಿಲ್ಲಿ ಉಲ್ಲೇಖಿಸಬಹುದು.

ಕನ್ನಡವನ್ನೇ ಕೇಂದ್ರವಾಗಿರಿಸಿಕೊಂಡ ಅಧ್ಯಯನಗಳನ್ನು ಆಧುನಿಕ ತತ್ವಶಾಸ್ತ್ರವನ್ನು ಆಧರಿಸಿದ ಅಧ್ಯಯನಗಳು ಮತ್ತು ಸಾಂಪ್ರದಾಯಿಕ ನೆಲೆಯ ಅಧ್ಯಯನಗಳು ಎಂದು ಎರಡು ಗುಂಪುಗಳನ್ನಾಗಿ ಮಾಡಬಹುದು. ಸಾಂಪ್ರದಾಯಿಕ ನೆಲೆಯ ಅಧ್ಯಯನಗಳು ನವೀನ ಪ್ರಶ್ನೆಗಳನ್ನು ಎದುರಿಸುವುದಿಲ್ಲ. ನವೀನ ಚಿಂತನೆಗಳನ್ನು ತಾತ್ವಿಕವಾಗಿ ಎತ್ತಿಕೊಳ್ಳುವುದಿಲ್ಲ. ಅಂತಹ ಎರಡು ದೃಷ್ಟಾಂತಗಳನ್ನು ಇಲ್ಲಿ ಚರ್ಚಿಸಲಾಗಿದೆ. ಒಂದು: ಗಮಕ ಸಮಾಸವನ್ನು ಕುರಿತಾದ ಚರ್ಚೆ. ಡಾ.

ಎಚ್.ಎಸ್.ಬಿಳಿಗಿರಿಯವರು ಗಮಕ ಸಮಾಸ ಒಂದು ಸಮಾಸವೇ ಅಲ್ಲ ಎಂಬ ಪ್ರಶ್ನೆಯನ್ನು ಮೊದಲು ಎತ್ತಿದರು. ಕೇಶಿರಾಜ ತನ್ನ ಶಬ್ದಮಣಿದರ್ಪಣದಲ್ಲಿ ಕನ್ನಡದ ಅಸಾಧಾರಣ ಲಕ್ಷಣಗಳನ್ನು ಹೇಳುವಾಗ ಗಮಕ ಸಮಾಸ ಲಕ್ಷಣಗಳಲ್ಲಿ ಒಂದು ಎಂದು ಹೇಳಿದನು. ಈ ಸಮಾಸ ಕುರಿತು ತನ್ನ ಶಬ್ದಮಣಿದರ್ಪಣದಲ್ಲಿ ವಿವರವಾಗಿ ಚರ್ಚಿಸಿದ್ದಾನೆ. ಕೇಶಿರಾಜನು ಸಮಾಸವೆಂದು ವಿವರಿಸುವ ಈ ಗಮಕ ಸಮಾಸವು ಒಂದು ಪದಗುಂಪನವೇ ವಿನಹ ಸಮಾಸವಲ್ಲ. ಒಂದು ಪದರಚನೆ ಸಮಾಸ ಎನಿಸಿಕೊಳ್ಳಬೇಕಾದರೆ ಇರಬೇಕಾದ ಲಕ್ಷಣಗಳು ಈ ಗಮಕ ಸಮಾಸ ರಚನೆಯಲ್ಲಿ ಕಂಡುಬರುವುದಿಲ್ಲ. ಆದ್ದರಿಂದ ಗಮಕ ಸಮಾಸವನ್ನು ಒಂದು ಪದಗುಂಪನ ಎಂದು ಕರೆಯಬೇಕೆ ವಿನಹ ಸಮಾಸವಲ್ಲ ಎಂಬುದು ಬಿಳಿಗಿರಿಯವರ ವಾದವಾಗಿದೆ.

ಬಿಳಿಗಿರಿಯವರ ವಾದದ ನಂತರ ನಡೆದ ಚರ್ಚೆಗಳಲ್ಲಿ ಭಾಗವಹಿಸಿದ ಸಾಂಪ್ರದಾಯಿಕ ನೆಲೆಯ ವಿದ್ವಾಂಸರು ಆಧುನಿಕ ಸಿದ್ಧಾಂತಗಳ ನೆಲೆಯಲ್ಲಿ ವಾದಿಸುವುದನ್ನೇ ಪ್ರಶ್ನಿಸಲು ಮುಂದಾದರು. ಅವರ ವಾದ ಇಷ್ಟೆ, ಕೇಶಿರಾಜನು ಗಮಕ ಸಮಾಸವನ್ನು ಕನ್ನಡದ ಅಸಾಧಾರಣ ಲಕ್ಷಣಗಳಲ್ಲಿ ಸೇರಿಸಿರುವುದರಿಂದ ಮತ್ತು ಸಂಸ್ಕೃತ ವ್ಯಾಕರಣಕಾರರ ಸಮಾಸ ಕಲ್ಪನೆಗೆ ಅನುಗುಣವಾಗಿರುವುದರಿಂದ ಅದೊಂದು ಸಮಾಸವೇ ವಿನಹ ಬೇರೇನು ಅಲ್ಲ. ಎಚ್.ಎಸ್.ಬಿಳಿಗಿರಿಯವರ ವಾದವನ್ನು ಸಮರ್ಥಿಸುವ ಅಧ್ಯಯನಗಳು ನಂತರ ನಡೆದವು. ಗಮಕ ಸಮಾಸದ ಪದರಚನೆಯ ಕಟ್ಟು ಮತ್ತು ಅರ್ಥರಚನೆಯ ಕಟ್ಟು ಅದನ್ನು ಸಮಾಸವೆಂದು ಪರಿಗಣಿಸಲು ಅನುಕೂಲಕರವಾಗಿಲ್ಲ ಎಂಬುದೇ ಆ ಅಧ್ಯಯನಗಳ ನಿಲುವಾಗಿದೆ. ಹೀಗಾದರೂ ಕೂಡ ಸಾಂಪ್ರದಾಯಿಕ ನೆಲೆಯ ಚಿಂತಕರು ತಾವು ಒಗ್ಗಿಕೊಂಡು ಬಂದ ಸಾಂಪ್ರದಾಯಿಕ ನಿಲುವುಗಳನ್ನು ಬಿಟ್ಟುಕೊಡಲು ಸಿದ್ಧರಿಲ್ಲ. ಒಂದು ಪದಗುಂಪನವನ್ನೇ ಸಮಾಸವೆಂಬ ಹೆಸರಿನಿಂದ ಕರೆಯಲು ಸಿದ್ಧರಿದ್ದಾರೆ. ಇದು ಒಪ್ಪು ತಪ್ಪುಗಳ ಪ್ರಶ್ನೆಯಾಗದೆ ತಾತ್ವಿಕತೆಯ ಪ್ರಶ್ನೆಯಾಗಿದೆ. ವಿಶ್ಲೇಷಣೆಗೆ ಅನುಕೂಲಕರವಾದ ಮಿತಿಗಳನ್ನು ಹೇಗೆ ಅಯ್ಕೆ ಮಾಡಿಕೊಳ್ಳಬೇಕೆಂಬುದನ್ನು ಈ ಚರ್ಚೆಗಳು ಹಿಂದಕ್ಕೆ ಸರಿಸುತ್ತವೆ.

ಇದೇ ರೀತಿಯಾದ ಇನೊಂದು ಸಂಗತಿ ಎಂದರೆ ಕನ್ನಡ ಅಕ್ಷರ ಮಾಲೆಯಲ್ಲಿ ಸೇರಿಸಲಾದ 'ಋ' ಎಂಬ ಹ್ರಸ್ವಸ್ವರದ ಚಿಂತನೆಯನ್ನು ಕುರಿತಾಗಿದೆ. ಸಂಸ್ಕೃತ ಪದಗಳಲ್ಲಿ ಈ ಹ್ರಸ್ವ ಸ್ವರದ ಅಗತ್ಯ ಉಂಟಾಗಿರುವುದಕ್ಕೆ ಕಾರಣವಿದೆ. 'ರ' ಕಾರವು ಒಂದು ವ್ಯಂಜನವಾದರೂ ಸಂದರ್ಭೋಚಿತವಾಗಿ ಅದು ಅಕ್ಷರ ರಚನೆಯ ಕೇಂದ್ರವಾದಾಗ

ಅದಕ್ಕೆ ಸ್ವರದ ಲಕ್ಷಣ ಕಂಡುಬರುತ್ತದೆ. ಹೀಗಾಗಿ ವ್ಯಂಜನ ಮತ್ತು 'ಋ' ಹ್ರಸ್ವಸ್ವರ ಒಂದೇ ಧ್ವನಿಯ ಎರಡು ಕೆಲಸಗಳನ್ನು ಪ್ರತಿನಿಧಿಸುತ್ತವೆ. ಕನ್ನಡದಲ್ಲಿ ಅಕ್ಷರ ರಚನೆಯ ಕೇಂದ್ರವಾಗಿ 'ರ' ಕಾರ ಬರುವುದು ಸಾಧ್ಯವಿಲ್ಲವಾದ್ದರಿಂದ ಅದು ಯಾವಾಗಲೂ 'ರ್' ಎಂಬ ವ್ಯಂಜನವನ್ನು ಮಾತ್ರ ಒಪ್ಪಿಕೊಳ್ಳುತ್ತದೆ. ಸಹಜವಾಗಿಯೇ ಕನ್ನಡ ಧ್ವನಿರಚನೆಯಾಗಿ 'ಋ' ಎಂಬ ಹ್ರಸ್ವಸ್ವರಕ್ಕೆ ಸ್ಥಾನವಿಲ್ಲ. ಈ ವಿಶ್ಲೇಷಣೆಯ ನೆಲೆಯನ್ನು ಸಾಂಪ್ರದಾಯಿಕ ಅಥವಾ ಪಾರಂಪರಿಕ ನೆಲೆಯ ವಿದ್ವಾಂಸರು ಎಷ್ಟು ಕಟುವಾಗಿ ಟೀಕಿಸಿದರೆಂದರೆ, 'ಋ' ಎಂಬ ಅಕ್ಷರ ಬೇಡ ಎನ್ನುವುದಾದರೆ ಈವರೆಗಿನ ಪುಸ್ತಕಗಳಲ್ಲಿ ಬಳಕೆಯಾಗಿರುವ ಈ ಅಕ್ಷರ ಮುಂದಿನ ಜನಾಂಗಕ್ಕೆ ತಿಳಿಯುವುದು ಹೇಗೆ? ಈ ಅಕ್ಷರ ಕನ್ನಡ ಅಕ್ಷರ ಮಾಲೆಯಲ್ಲಿ ಇರಬೇಕು. ಇಲ್ಲದಿದ್ದರೆ ಈ ಅಕ್ಷರದಿಂದ ಕೂಡಿದ ಬಹುಸಂಖ್ಯೆಯ ಶಬ್ದಗಳನ್ನು ಉಚ್ಚರಿಸುವುದು ಹೇಗೆ? ಬರೆಯುವುದು ಹೇಗೆ? ಶಾಲಾ ಮಕ್ಕಳಿಗೆ ತಿಳಿಸಿಕೊಡುವುದು ಹೇಗೆ? ಎಂಬಿತ್ಯಾದಿ ಪ್ರಶ್ನೆಗಳೊಂದಿಗೆ ೨೦೦೨ರಲ್ಲಿ ತುಮಕೂರಿನಲ್ಲಿ ನಡೆದ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಸಂಸ್ಕೃತ ಸ್ವೀಕೃತ ಲಿಪಿಯಾದ 'ಋ' ಕಾರವನ್ನು ಒಂದು ಲಿಪಿಯನ್ನಾಗಿ ಕನ್ನಡ ಅಕ್ಷರ ಮಾಲೆಯಲ್ಲಿ ಉಳಿಸಿಕೊಳ್ಳಬೇಕೆಂಬ ತೀರ್ಮಾನವನ್ನು ಮಾಡಲಾಯಿತು.

ಈ ಮೇಲಿನ ಎರಡು ದೃಷ್ಟಾಂತಗಳಿಂದ ನಮಗೆ ಸ್ಪಷ್ಟವಾಗಿ ತಿಳಿದು ಬರುವ ಸಂಗತಿ ಎಂದರೆ ವ್ಯಾಕರಣ ಅಧ್ಯಯನದಲ್ಲಿ ನವೀನ ಚಿಂತನೆಗಳನ್ನು ಅಳವಡಿಸಿಕೊಳ್ಳಲು ಕನ್ನಡ ವ್ಯಾಕರಣ ಅಧ್ಯಯನ ಪರಂಪರೆ ಇಂದಿಗೂ ಸಿದ್ಧವಿಲ್ಲ. ಅಲ್ಲದೆ ಅಂತಹ ಪ್ರಯತ್ನಗಳನ್ನು ಸಂಪೂರ್ಣವಾಗಿ ವಿರೋಧಿಸುತ್ತವೆ. ಈ ವಿರೋಧದ ಮುಂದುವರಿಕೆ ಕಳೆದ ಶತಮಾನದ ಕೆಲವು ಚರ್ಚೆ, ಸಂವಾದಗಳಲ್ಲಿ ಮತ್ತಷ್ಟು ಗಟ್ಟಿತನಪಡೆದುಕೊಂಡಿದೆ. ಕನ್ನಡ ವ್ಯಾಕರಣಗಳನ್ನು ಆರಂಭದಿಂದಲೂ ಸಂಸ್ಕೃತ ಭಾಷೆಯ ರಾಚನಿಕ ನಿಯಮಗಳಿಗೆ ಅನುಗುಣವಾಗಿ ರೂಪಿಸಲಾಗಿದೆ. ಯಾವ ನಿಯಮಗಳು ಸಂಸ್ಕೃತಕ್ಕೆ ಒಗ್ಗುತ್ತವೆಯೋ, ಅವು ಕನ್ನಡದಲ್ಲಿ ಇವೆಯೋ ಅಥವಾ ಇಲ್ಲವೋ, ಇದ್ದರೆ ಅವುಗಳ ಸ್ವರೂಪವೇನೆಂಬುದನ್ನು ಹುಡುಕುವ ಮಾದರಿಯನ್ನು ಅನುಸರಿಸಲಾಗಿದೆ. ಕೆಲವೊಮ್ಮೆ ಸಂಸ್ಕೃತ ವ್ಯಾಕರಣದ ಮಿತಿಗೆ ಹೊಂದಿಸಲು ಕನ್ನಡ ಭಾಷೆಯಲ್ಲಿ ಇಲ್ಲದಿರುವ ರಾಚನಿಕ ನಿಯಮಗಳನ್ನು ಕಂಡುಕೊಳ್ಳುವ ವ್ಯರ್ಥಪ್ರಯತ್ನ ಮಾಡಲಾಗಿದೆ. ಉದಾಹರಣೆಗೆ: ಸಂಧಿಗಳಲ್ಲಿ ಜಶ್ತ್ವಸಂಧಿ, ಶ್ಚುತ್ವ ಸಂಧಿ, ಷ್ಟುತ್ವ ಸಂಧಿ, ಛತ್ವ ಸಂಧಿ ಇತ್ಯಾದಿಗಳಿಂದಾಗಿ ಕನ್ನಡ ವ್ಯಾಕರಣದ ನಿಜವಾದ ಸ್ವರೂಪ ತಿಳಿಯುತ್ತಿಲ್ಲ. ೧೯ನೆಯ ಶತಮಾನ

ಆರಂಭದಲ್ಲಿ ಕ್ರಿಶ್ಚಿಯನ್ ಮಿಷನರಿಗಳು ಕನ್ನಡಕ್ಕೆ ವ್ಯಾಕರಣವನ್ನು ರಚಿಸುವಾಗ ಲ್ಯಾಟೀನ್ ಭಾಷೆಯ ನಿಯಮಗಳನ್ನು, ರಚನೆಯ ಸ್ವರೂಪವನ್ನು ಕನ್ನಡದಲ್ಲಿ ಗುರುತಿಸಲು ಪ್ರಯತ್ನಿಸಿದರು. ಈ ಕಾಲಘಟ್ಟದಲ್ಲಿಯೂ ಸಹ ಕನ್ನಡದ ನಿಜಸ್ವರೂಪ ಪ್ರಕಟವಾಗಲಿಲ್ಲ. ಈ ಪರಿಸ್ಥಿತಿಯನ್ನು ಮನಗಂಡು ಡಿ.ಎನ್.ಶಂಕರಭಟ್ ಅವರು ಕನ್ನಡ ಭಾಷೆಯ ವ್ಯಾಕರಣವನ್ನು ಕನ್ನಡ ಭಾಷೆಯ ಮೂಕಲವೇ ಕಂಡುಕೊಳ್ಳಬೇಕೆಂದು ವಾದಿಸುವ 'ಕನ್ನಡಕ್ಕೆ ಬೇಕು ಕನ್ನಡದ್ದೇ ವ್ಯಾಕರಣ' ಎಂಬ ಕೃತಿಯನ್ನು ರಚಿಸಿದರು. ಈ ಕೃತಿಯಲ್ಲಿ ಭಟ್ ಅವರ ವಾದ ಎರಡು ರೀತಿಯಲ್ಲಿ ನಡೆದಿರುವುದು ಕಂಡುಬರುತ್ತದೆ. ಒಂದು: ಸಂಸ್ಕೃತ ನಿಯಮಗಳು ಕನ್ನಡಕ್ಕೆ ಹೊಂದುವುದಿಲ್ಲ ಎಂದು ತೋರಿಸುವುದು. ಎರಡು: ಕನ್ನಡ ಭಾಷೆಯನ್ನು ವಿಶ್ಲೇಶಿಸುವ ಮೂಲಕವೇ ಆ ಭಾಷೆಯ ರಾಚನಿಕ ನಿಯಮಗಳನ್ನು ಗ್ರಹಿಸಲು ತೊಡಗುವುದು. ಇವೆರಡೂ ಪೂರಕ ಪ್ರಯತ್ನಗಳಾಗಿವೆ. ಕನ್ನಡದಲ್ಲಿ ಎಷ್ಟು ತೆರನಾದ ಪದವರ್ಗಗಳಿವೆ? ಸಂಸ್ಕೃತ ನಿಯಮದಂತೆ ನಾಮಪದ ಮತ್ತು ವಿಶೇಷಣಗಳನ್ನು ಒಂದೇ ಪದವರ್ಗಕ್ಕೆ ಸೇರಿಸಿದರೆ ಆಗುವ ತೊಂದರೆಗಳೇನು? ಇತ್ಯಾದಿ ಪ್ರಶ್ನೆಗಳನ್ನು ಭಟ್ ಅವರು ಸವಿಸ್ತಾರವಾಗಿ ವಿವರಿಸಿದ್ದಾರೆ.

ಕನ್ನಡದಲ್ಲಿ ಸಮಾಸಗಳನ್ನು ವಿವರಿಸುವಾಗ ಈಗಿರುವಂತೆ ಸಂಸ್ಕೃತದ ಸಮಾಸಗಳ ಸೂತ್ರಗಳನ್ನು ಬಳಸುವುದು ಸರಿಯಾದ ಕ್ರಮವಲ್ಲ. ಕನ್ನಡದಲ್ಲಿ ಉತ್ತರಪದವು ರಚನೆಯ ಕೇಂದ್ರವಾಗಿರುವುದರಿಂದ ಆ ಪದವು ಯಾವ ಪದವರ್ಗಕ್ಕೆ ಸೇರುತ್ತದೆ (ಅಂದರೆ ಹೆಸರುಪದ, ಎಸಕಪದ, ಗುಣಪದ ಸೇರುತ್ತವೆ) ಎಂಬುದನ್ನು ಅವಲಂಬಿಸಿ ಮೂರು ರೀತಿಯ ಸಮಾಸಗಳನ್ನು ಗುರುತಿಸಿದರೆ ಸಾಕು ಎಂದು ವಾದಿಸುತ್ತಾರೆ. ನವೀನ ಬರಹದ ತಮ್ಮ ಪುಸ್ತಕಗಳಲ್ಲಿ ಸಂಸ್ಕೃತ ವ್ಯಾಕರಣದ ಪರಿಭಾಷೆಯನ್ನು ಬಳಸದೆ ಕನ್ನಡದ್ದೇಆದ ಸೊಲ್ಲರಿಮೆಯ ಪದಗಳನ್ನು ಬಳಸುತ್ತಾರೆ. ಈ ಪದಗಳು ಇಂದು ಸಂಸ್ಕೃತ ಇಲ್ಲವೆ ಇಂಗ್ಲಿಷ್ ಪದಗಳನ್ನು ಹೆಚ್ಚಾಗಿ ಬಳಸಿರುವ ಕನ್ನಡ ಬರಹಗಳನ್ನು ಓದಿ ಬಳಕೆಯಾಗಿರುವ ಇಂದಿನ ಓದುಗರಿಗೆ ಆರಂಭದಲ್ಲಿ ತೊಡಕಾಗಬಹುದು ನಂತರ ಓದುತ್ತಾ ಹೋದಂತೆ ಅಭ್ಯಾಸವಾಗಿ ಕನ್ನಡ ಬರಹಗಳಲ್ಲಿ ಕನ್ನಡದ್ದೇಆದ ಪದಗಳ ಬಳಕೆ ರೂಢಿಗತವಾಗುತ್ತದೆ ಎಂದು ವಾದಿಸುತ್ತಾರೆ.

ಉದಾಹರಣೆ

| | | |
|---|---|---|
| ವ್ಯಾಕರಣ | – | ಸೊಲ್ಲರಿಮೆ |
| ಅಕ್ಷರ | – | ಬರಿಗೆ |

| | | |
|---|---|---|
| ಭೂತಕಾಲ | – | ಹಿಂಬೊತ್ತು |
| ವರ್ತಮಾನಕಾಲ | – | ಈಪೊತ್ತು |
| ಭವಿಶ್ಯತ್ಕಾಲ | – | ಮುಂಬೊತ್ತು |
| ಕ್ರಿಯಾಪದ | – | ಎಸಕಪದ/ಕೆಲಸಪದ |
| ಸ್ವರ | – | ತೆರೆಯುಲಿ |
| ವ್ಯಂಜನ | – | ಮುಚ್ಚುಲಿ |
| ನಾಮಪದ | – | ಹೆಸರುಪದ |
| ವಿಶೇಷಣಪದ | – | ಪರಿಚೆಪದ |
| ಪ್ರತ್ಯಯ | – | ಒಟ್ಟು |
| ಧ್ವನಿ | – | ಉಲಿ |
| ವರ್ಣಮಾಲೆ | – | ಬರಿಗೆಪಟ್ಟಿ |
| ಸಮಾಸ | – | ಜೋಡುಪದ |
| ಧಾತು | – | ಬೇರು |
| ಅರಿಕೆರೂಪ | – | ಆಜ್ಞಾನರ್ಥಕ |
| ಉತ್ತಮ | – | ಆಡುಗ |
| ಮಧ್ಯಮ | – | ಕೇಳುಗ |
| ಪ್ರಥಮ | – | ಹೆರತು |
| ವಿಭಕ್ತಿ | – | ಎಸಕಪತ್ತುಗೆ |
| ಅನುನಾಸಿಕ | – | ಮೂಗುಲಿ |
| ಮಹಾಪ್ರಾಣ | – | ಊದುಲಿ |
| ವಿಗ್ರಹವಾಕ್ಯ | – | ಒಳನುಡಿ |
| ಕ್ರಿಯಾವಿಶೇಷಣ | – | ಎಸಕಪರಿಚೆ |
| ನಾಮವಿಶೇಷಣ | – | ಹೆಸರುಪರಿಚೆ |
| ಆಖ್ಯಾತ ಪ್ರತ್ಯಯ | – | ಗುರುತಿನ ಒಟ್ಟು |
| ಏಕವಚನ | – | ಓರೆಣಿಕೆ |
| ಬಹುವಚನ | – | ಹಲವೆಣಿಕೆ |
| ಪುಲ್ಲಿಂಗ | – | ಗಂಡುಗುರ್ತ |

| | | |
|---|---|---|
| ಸ್ತ್ರೀಲಿಂಗ | – | ಹೆಣ್ಣುಗುರ್ತ |
| ನಪುಂಸಕಲಿಂಗ | – | ಉಳಿಕೆಗುರ್ತ |
| ನಿಷೇಧಾರ್ಥಕ | – | ಅಲ್ಲಗಳೆತ ....... ಇತ್ಯಾದಿ. |

ಈ ತೆರನಾದ ಕನ್ನಡದ್ದೇಆದ ಸೊಲ್ಲರಿಮೆಯ ಪದಗಳು ಬಳಕೆಯಾಗುತ್ತಾ ಹೋದಂತೆ ಕೆಲವು ವರ್ಷಗಳ ನಂತರ ಈ ಪದಗಳೇ ನೆಲೆಯೂರಿ ನಿಲ್ಲುತ್ತವೆ ಎಂದು ವಾದಿಸುತ್ತಾರೆ. ಇಂತಹ ಹಲವು ವಾದಗಳನ್ನು ಭಟ್ ಅವರು ತಮ್ಮ ನವೀನ ಬರಹದೊಂದಿಗೆ ಓದುಗರ ಮುಂದಿಡುತ್ತಾರೆ. ಈ ನವೀನ ಬರಹವನ್ನೊಳಗೊಂಡ ಭಟ್ ಅವರ ಪುಸ್ತಕಗಳು ಪ್ರಕಟಗೊಂಡಾಗ ಸಾಂಪ್ರದಾಯಿಕ ಅಥವಾ ಪಾರಂಪರಿಕ ನಿಲುವಿನ ಬೋಧನೆ ಮತ್ತು ಅಧ್ಯಯನಗಳಲ್ಲಿ ತೊಡಗಿದವರು ಭಟ್ ಅವರ ವಾದವನ್ನು ಒಪ್ಪಿಕೊಳ್ಳಲು ಸಾಧ್ಯವಿಲ್ಲ. ಅಷ್ಟೆ ಏಕೆ? ಇವರ ನಿಲುವುಗಳಿಗೆ ಸಾರ್ವಜನಿಕವಾಗಿ ಮುದ್ರೆ ಬೀಳುವತನಕ ಅವರ ನವೀನ ಬರಹದ ನಿಲುವುಗಳಲ್ಲಿ ಯಾವ ಹುರುಳಿಲ್ಲ ಎಂದು ವಾದಿಸತೊಡಗಿದರು. ಒಂದು ವೇಳೆ ಅವರ ನಿಲುವುಗಳನ್ನು ಆಧುನಿಕ ಕನ್ನಡ ಸಂದರ್ಭದಲ್ಲಿ ಒಪ್ಪಿದರೂ ಹಳೆಗನ್ನಡ ಅಧ್ಯಯನಕ್ಕೆ ಹಳೆಗನ್ನಡ ವ್ಯಾಕರಣಗಳೇ ಅಗತ್ಯ ಎಂದು ವಾದಿಸಿದರು. ಈ ವಾದವನ್ನು ಗಮನಿಸಿದ ಭಟ್ ಅವರು ಹಳೆಗನ್ನಡ ವ್ಯಾಕರಣಗಳೂ ಕೂಡ ಹಳೆಗನ್ನಡದ ನಿಜ ಲಕ್ಷಣಗಳನ್ನು ವಿವರಿಸುವುದಿಲ್ಲ ಎಂದು ತೋರಿಸುವಂತಹ 'ನಿಜಕ್ಕೂ ಹಳೆಗನ್ನಡ ವ್ಯಾಕರಣ ಎಂತಹದು?' ಎಂಬ ಗ್ರಂಥವನ್ನು ೨೦೦೫ರಲ್ಲಿ ಪ್ರಕಟಿಸಿದರು. ಈ ಗ್ರಂಥವೂ ಕೂಡ ಕನ್ನಡ ವಿದ್ವತ್ ಲೋಕದಲ್ಲಿ ಯಾವುದೇ ಬದಲಾವಣೆಯನ್ನು ಉಂಟುಮಾಡಲಿಲ್ಲ.

'ಭಟ್ ಅವರು ತಮ್ಮ ವಾದವನ್ನು ಸಮರ್ಥಿಸಲು ಇನ್ನೂ ಹಲವು ವಲಯಗಳಿಂದ ತಮ್ಮ ವಾದವನ್ನು ಮಂಡಿಸಿದರು. ಮುಖ್ಯವಾಗಿ ೨೦೦೫ರಲ್ಲಿ 'ಕನ್ನಡ ಬರಹವನ್ನು ಸರಿಪಡಿಸೋಣ' ಎಂಬ ಹೆಸರಿನ ಗ್ರಂಥವನ್ನು ಪ್ರಕಟಿಸಿದರು. ಈ ಗ್ರಂಥದಲ್ಲಿ ಕನ್ನಡ ಬರವಣಿಗೆಯನ್ನು ಸಂಸ್ಕೃತ ಭಾಷೆ ಹಲವು ರೀತಿಯಲ್ಲಿ ನಿಯಂತ್ರಿಸುತ್ತದೆ. ಈ ನಿಯಂತ್ರಣ ತಪ್ಪಬೇಕಾದರೆ ಮಾತು ಮತ್ತು ಬರಹಗಳ ನಡುವೆ ಹೆಚ್ಚು ನಿಕಟವಾದ ಸಂಬಂಧವಿರಬೇಕು. ಬರೆದಂತೆ ಮಾತು ಇರುವುದಾದರೆ ಅದು ಕೃತಕವಾಗಿಬಿಡುತ್ತದೆ. ಆದ್ದರಿಂದ ಮಾತಿನಂತೆ ಬರಹ ಇರುವುದು ಸೂಕ್ತ. ಹಾಗಿಲ್ಲದಿದ್ದರೆ ಆಗುವ ಅಡ್ಡಿ ಆಂತಂಕಗಳೇನು, ಅವುಗಳನ್ನು ನಿವಾರಿಸುವುದು ಹೇಗೆ ಎಂಬ ಚರ್ಚೆಯನ್ನು ಮೊದಲು ಮಾಡುತ್ತಾರೆ. ಭಟ್ ಅವರು ತಮ್ಮ ವಾದವನ್ನು ಸಮರ್ಥಿಸಲು

ಕನ್ನಡ ಬರವಣಿಗೆಯಲ್ಲಿ ಮಾತಿನ ಲಕ್ಷಣಗಳನ್ನು ಪಾಲಿಸದಿರುವ ಹಲವು ನಿದರ್ಶನಗಳನ್ನು ಮಂಡಿಸಲು ಪ್ರಯತ್ನಪಡುತ್ತಾರೆ. ಪದಗಳ ಆಯ್ಕೆ ಮತ್ತು ಬರವಣಿಗೆಯ ಕಾಗುಣಿತಗಳನ್ನು ಕುರಿತಂತೆ ಒಂದು ತೀವ್ರ ಪ್ರಾಯೋಗಿಕ ನೆಲೆಯನ್ನು ರೂಪಿಸಿಕೊಟ್ಟಿದ್ದಾರೆ. ಈ ತೆರನಾದ ಹೊಸ ಬರಹದಡಿಯಲ್ಲಿ ಬರುತ್ತಿರುವ ಭಟ್ ಅವರ ಗ್ರಂಥಗಳು ಕನ್ನಡ ವಿದ್ವತ್ ಪ್ರಪಂಚದಲ್ಲಿ ಯಾವ ಪರಿಣಾಮವನ್ನು ಬೀರುತ್ತವೆ ಎಂಬುದನ್ನು ಕಾಯ್ದು ನೋಡಬೇಕಾಗಿದೆ.' (ಡಾ.ಕೆ.ವಿ.ನಾರಾಯಣ: ಕನ್ನಡ ಜಗತ್ತು ಅರ್ಧಶತಮಾನ, ಪುಟ : ೨೯೨-೨೯೩)

ಕಳೆದ ಐವತ್ತು ವರ್ಷಗಳಲ್ಲಿ ಕನ್ನಡ ವ್ಯಾಕರಣ ಅಧ್ಯಯನಗಳು ಚರಿತ್ರೆಯ ಪುನರಚನೆಯನ್ನು ಗುರಿಯಾಗಿರಿಸಿಕೊಂಡು ನಡೆದಿರುವ ನಿದರ್ಶನಗಳು ಇವೆ. ಈ ಅಧ್ಯಯನಗಳಲ್ಲಿ ಒಂದು ಪದದ ಹುಟ್ಟು, ಅವುಗಳ ಅರ್ಥಗಳನ್ನು ಅರಿಯುವ ಜೊತೆಗೆ ಐತಿಹಾಸಿಕವಾಗಿ ಏನು ಬದಲಾವಣೆಗಳಾಗಿವೆ ಎಂಬುದನ್ನು ವಿವರಿಸುತ್ತವೆ. ಮೈಸೂರು ವಿಶ್ವವಿದ್ಯಾಲಯದ ಪ್ರಕಟಣೆ 'ಪ್ರಬುದ್ಧ ಕರ್ಣಾಟಕ' ದಲ್ಲಿ ಕಮ್ಮಟದ ಕಿಡಿಗಳು ಎಂಬ ಅಂಕಣ, 'ಕರ್ಣಾಟಕ ಭಾರತಿ' ಪತ್ರಿಕೆಯ ಒರೆಗಲ್ಲು ಅಂಕಣ, ಬೆಂಗಳೂರು ವಿಶ್ವವಿದ್ಯಾಲಯದ ಪ್ರಕಟಣೆ 'ಸಾಧನೆ' ಪತ್ರಿಕೆ ಇಂತಹ ಅಧ್ಯಯನಗಳನ್ನು ಪ್ರಕಟಿಸಿವೆ. ಶಾಸನಗಳನ್ನು ಮತ್ತು ಹಳೆಗನ್ನಡ ಕಾವ್ಯಗಳನ್ನು ಅಧ್ಯಯನ ಮಾಡುತ್ತಿದ್ದ ಅಧ್ಯಾಪಕರು ಇಂತಹ ಪ್ರಯತ್ನಗಳಲ್ಲಿ ತೊಡಗಿದರು. ಈಗ ಇರುವ ವಿವರಣೆಯನ್ನು ಅವಲಂಬಿಸಿ ನಾವು ತಿಳಿದ ವ್ಯಾಕರಣ ನಿಯಮಗಳನ್ನು ಅನ್ವಯಿಸಿ ಹಿಂದೆ ಹೀಗಿತ್ತು ಎನ್ನುವ ಅರಿವನ್ನು ಈ ಅಧ್ಯಯನಗಳು ನೀಡುತ್ತಿವೆ. ಈ ಚರಿತ್ರೆಯ ಪುನರಚನೆಯಲ್ಲಿ ಭಾಷಿಕ ಅಂಶಗಳಿಗೆ ಆದ್ಯತೆ ನೀಡಿರುವುದು ಸ್ಪಷ್ಟವಾಗಿ ಕಂಡುಬರುತ್ತದೆ. ಇತ್ತೀಚೆಗೆ ವ್ಯಾಕರಣ ರಚನೆಯ ವಿವರಣೆಗಿಂತ ಬಳಕೆಯ ವಿವರಣೆಯ ಕಡೆಗೆ ಆಸಕ್ತಿ ತೋರುತ್ತಿರುವುದು ಕಂಡುಬರುತ್ತದೆ. ಹೀಗಾಗಿ ವ್ಯಾಕರಣ ಚರಿತ್ರೆಯ ಪುನರಚನೆಯ ಮಾದರಿಗಳಿಗೆ ಅವಕಾಶ ಕಡಿಮೆಯಾಗಿದೆ ಎನಿಸುತ್ತದೆ.

ಕನ್ನಡ ಸಾಹಿತ್ಯ ಪರಿಷತ್ತು ಸಿದ್ಧಪಡಿಸಿ ಪ್ರಕಟಿಸಿರುವ ಕನ್ನಡ ನಿಘಂಟು ಸಂಪುಟಗಳಲ್ಲಿ ಕನ್ನಡ ವ್ಯಾಕರಣ ಪುನರಚನೆಯ ಪ್ರಯತ್ನ ಕಂಡುಬರುತ್ತದೆ. ೧೯೫೦ರ ದಶಕದಲ್ಲಿ ನಿಘಂಟುಗಳ ಸಿದ್ಧತೆ ಪ್ರಾರಂಭಗೊಂಡಿದ್ದರೂ ಕರ್ನಾಟಕ ಏಕೀಕರಣಗೊಂಡ ನಂತರ ಅದರ ಕಾರ್ಯ ಭರದಿಂದ ಸಾಗಿತು. ಸುಮಾರು ಮೂರು ದಶಕಗಳ ಅವಧಿಯಲ್ಲಿ ನಿಘಂಟಿನ ಒಂದರಿಂದ ಎಂಟು ಸಂಪುಟಗಳು ರಚನೆಗೊಂಡು

ಬಿಡುಗಡೆಯಾದವು. ಆಕ್ಸ್‌ಫರ್ಡ್ ಇಂಗ್ಲಿಷ್ ಡಿಕ್ಷನರಿಯ ಮಾದರಿಯನ್ನು ಅನುಸರಿಸಿರುವ ಈ ನಿಘಂಟು ಸಂಪುಟಗಳಲ್ಲಿ ಒಂದು ನಿಘಂಟಿನ ಸಮಕಾಲೀನ ಬಳಕೆಯ ವಿಶ್ಲೇಷಣೆಗಿಂತ ವ್ಯಾಕರಣದ ಚಾರಿತ್ರಿಕ ವಿಕಾಸ ಮತ್ತು ರಚನಾ ಕ್ರಮಗಳ ಕಡೆಗೆ ಹೆಚ್ಚು ಗಮನ ಹರಿಸಿರುವುದು ಕಂಡುಬರುತ್ತದೆ. ಅಲ್ಲದೆ ಶಬ್ದ, ಶಬ್ದರೂಪಗಳನ್ನು ಪ್ರಮುಖ ದಾಖಲಾತಿಗಳನ್ನಾಗಿ ಮಾಡಿಕೊಳ್ಳಲಾಗಿದೆ. ಐತಿಹಾಸಿಕವಾಗಿ ಶಬ್ದದ ರೂಪ ಮತ್ತು ಅರ್ಥದಲ್ಲಾಗಿರುವ ಬದಲಾವಣೆ ಮತ್ತು ಬೆಳವಣಿಗೆಗಳನ್ನು ಸ್ಪಷ್ಟವಾಗಿ ದಾಖಲಿಸಲಾಗಿದೆ. ನೂರಾರು ಸಾಹಿತ್ಯ ಕೃತಿಗಳನ್ನು ಪ್ರಮುಖ ಆಕರಗಳನ್ನಾಗಿ ಮಾಡಿಕೊಂಡು ಈ ನಿಘಂಟು ಸಂಪುಟಗಳನ್ನು ಸಿದ್ಧಪಡಿಸಲಾಗಿದೆ.

ಈ ನಿಘಂಟು ಸಂಪುಟಗಳ ಪ್ರಧಾನ ಉದ್ದೇಶ ಪುನರಚನೆಯಾಗಿದೆ. ಆದರೆ ಕಳೆದ ಐವತ್ತು ವರ್ಷಗಳಲ್ಲಿ ವ್ಯಾಕರಣವನ್ನು ವಿಶ್ಲೇಷಣೆ ಮಾಡುವ ವಿಧಾನಗಳಲ್ಲಿ ಬದಲಾವಣೆಗಳಾಗಿವೆ. ಈ ಬದಲಾವಣೆಯ ಪರಿಣಾಮ ನಿಘಂಟು ಸಂಪುಟಗಳ ಮೇಲಾಗಿದೆ. ಸೂಕ್ಷ್ಮವಾಗಿ ಗಮನಿಸಿದರೆ ಎಂಟು ಸಂಪುಟಗಳಲ್ಲಿಯೂ ಬದಲಾವಣೆಗಳು ಕಾಣಿಸಿಕೊಂಡಿರುವುದು ಕಂಡುಬರುತ್ತದೆ. ಮೊದಲ ಸಂಪುಟದಲ್ಲಿ ಆಂಗ್ಲ ಭಾಷೆಯಿಂದ ಎರವಲು ಪಡೆದ ಪದಗಳನ್ನು ಸೇರಿಸಲು ಹಿಂಜರಿಕೆ ಕಂಡುಬಂದರೆ, ಕೊನೆಯ ಎಂಟನೆಯ ಸಂಪುಟದಲ್ಲಿ ಈ ಹಿಂಜರಿಕೆ ಇಲ್ಲವಾಗುತ್ತದೆ. ಮಾಹಿತಿ ಸಂಗ್ರಹಣೆ, ಅದರ ಜೋಡಣೆ, ವ್ಯಾಖ್ಯಾನ ಅಳವಡಿಸುವಿಕೆ ಇವುಗಳ ದೃಷ್ಟಿಯಿಂದ ಈ ನಿಘಂಟು ಸಂಪುಟಗಳು ಪ್ರಮುಖವಾದವುಗಳಾಗಿವೆ. ಆದರೆ ಕಳೆದ ಐವತ್ತು ವರ್ಷಗಳಲ್ಲಿ ಕನ್ನಡ ವ್ಯಾಕರಣ ಬಳಕೆಯ ದೃಷ್ಟಿಯಿಂದ ಪಡೆದುಕೊಂಡಿರುವ ಹೊಸ ಅರ್ಥದ ರಚನಾ ಕ್ರಮಗಳನ್ನೂ, ಬದಲಾವಣೆಗಳನ್ನೂ ಈ ನಿಘಂಟು ಸಂಪುಟಗಳು ಗುರುತಿಸುತ್ತಿಲ್ಲ. ಕನ್ನಡವನ್ನೇ ವಿಶೇಷ ವಿಷಯವನ್ನಾಗಿ ಕಲಿಯುವ ಮತ್ತು ಬೋಧಿಸುವ ಹಾಗೂ ಅಭ್ಯಾಸ ಮಾಡುವ ಮಂದಿ ಈ ನಿಘಂಟು ಸಂಪುಟಗಳನ್ನು ಬಳಸುವುದಿಲ್ಲ. ಇವುಗಳನ್ನು ಭಾಷಾಧ್ಯಯನಕಾರರು ಶಬ್ದ, ಶಬ್ದಾರ್ಥಗಳ ಸಂಬಂಧದಲ್ಲಿ ಗಮನಿಸದೆ ಹೆಚ್ಚಿನ ಮಾಹಿತಿಯ ಆಕರ ಗ್ರಂಥಗಳನ್ನಾಗಿ ಬಳಕೆ ಮಾಡುವುದು ಕಂಡುಬರುತ್ತದೆ. ಈ ನಿಘಂಟು ಸಂಪುಟಗಳು ಕನ್ನಡ ನಾಡಿನ ವ್ಯಾಕರಣದ ಚಾರಿತ್ರಿಕ ಅಧ್ಯಯನದ ನೆಲೆಗೆ ಉತ್ತಮವಾದ ಮೈಲುಗಲ್ಲುಗಳಾಗಿ ನಿಲ್ಲುತ್ತವೆಂದು ಹೇಳಬಹುದು.

ಈ ಮೇಲಿನ ವಿವರಣೆಯಿಂದ ತಿಳಿದು ಬರುವ ಸಂಗತಿ ಎಂದರೆ ವ್ಯಾಕರಣವನ್ನು ಸಮಕಾಲೀನ ಸಂದರ್ಭದಲ್ಲಿ ವರ್ಣನಾತ್ಮಕವಾಗಿ, ಚಾರಿತ್ರಿಕವಾಗಿ

ಗ್ರಹಿಸುವ ಪ್ರಯತ್ನಗಳು ಹೆಚ್ಚಿನ ಮಟ್ಟದಲ್ಲಿ ನಡೆದಿವೆಯಾದರೂ ಅಖಂಡ ಕರ್ನಾಟಕ ವ್ಯಾಪ್ತಿಯ ವ್ಯಾಕರಣ ರಚನಾ ಕ್ರಮಗಳನ್ನು ಕಂಡುಕೊಳ್ಳುವುದು ಸಾಧ್ಯವಾಗಿಲ್ಲ. ಕನ್ನಡದ ಅದೆಷ್ಟೋ ಪ್ರಭೇದಗಳು ಈ ಅಧ್ಯಯನದ ವ್ಯಾಪ್ತಿಗೆ ಒಳಗಾಗಿಲ್ಲ. ಹೀಗಾಗಿ ಇಂದಿನ ಆಧುನಿಕ ಕನ್ನಡದ ಲಕ್ಷಣಗಳನ್ನು ಗ್ರಹಿಸಲು ನವೀನ ಪ್ರಯತ್ನಗಳನ್ನು ಮಾಡಬೇಕಾಗಿದೆ.

# ಅಧ್ಯಾಯ - ನಾಲ್ಕು

# ಸಮಕಾಲೀನ ಸಂದರ್ಭದ ಪಠ್ಯಪುಸ್ತಕಗಳು ಮತ್ತು ಪರಾಮರ್ಶನ ಶಾಲಾ ವ್ಯಾಕರಣ ಕೃತಿಗಳು : ತೌಲನಿಕ ಅಧ್ಯಯನ

ಶಾಲಾ ಹಂತಗಳಲ್ಲಿಯ ಸಮಕಾಲೀನ ಕನ್ನಡ ಪಠ್ಯಪುಸ್ತಕಗಳಲ್ಲಿ ಭಾಷಾಕಲಿಕೆ ಪ್ರಧಾನವಾಗಿರುವುದರಿಂದ ಮೊದಲು ಭಾಷೆ ನಂತರ ವ್ಯಾಕರಣದ ಹಿನ್ನೆಲೆಯಲ್ಲಿ ಕಲಿಕಾ ಪ್ರಕ್ರೀಯೆ ಸಾಗುತ್ತಿರುವುದು ಕಂಡುಬರುತ್ತದೆ. ಶಾಲಾಪಠ್ಯಪುಸ್ತಕಗಳಲ್ಲಿ ಅಳವಡಿಸಲಾದ ವ್ಯಾಕರಣ ಮತ್ತು ಆಯಾ ಕಾಲಘಟ್ಟಗಳಲ್ಲಿ ಶಾಲಾವ್ಯಾಕರಣವನ್ನು ಕುರಿತು ಕೆಲವು ವ್ಯಾಕರಣ ಕೃತಿಗಳು ಬಂದವು. ಅಂತಹ ಕೃತಿಗಳನ್ನು ಇಟ್ಟುಕೊಂಡು ಈ ಅಧ್ಯಾಯದಲ್ಲಿ ಅಧ್ಯಯನ ಮಾಡಲಾಗಿದೆ. ಪರಾಮರ್ಶನ ವ್ಯಾಕರಣ ಗ್ರಂಥಗಳ ವಿಷಯ ಪಠ್ಯಪುಸ್ತಕಗಳಲ್ಲಿ ಯಾವ ಸ್ವರೂಪದಲ್ಲಿ ಅಳವಡಿಸಲಾಗಿದೆ ಎಂಬುದನ್ನು ಚರ್ಚಿಸಲಾಗಿದೆ. ಇಂದಿನ ಪಠ್ಯಪುಸ್ತಕಗಳಲ್ಲಿಯ ವ್ಯಾಕರಣ ವಿಷಯಗಳು ಮತ್ತು ಪರಾಮರ್ಶನ ಗ್ರಂಥಗಳಲ್ಲಿಯ ವ್ಯಾಕರಣಾಂಶಗಳಲ್ಲಿಯ ಭಿನ್ನತೆಯನ್ನು ಮತ್ತು ಸಾಮ್ಯತೆಯನ್ನು ಉದಾಹರಣೆಗಳೊಂದಿಗೆ ಚರ್ಚಿಸಲಾಗಿದೆ.

'ವ್ಯಾಕರಣ ಇರುವುದು ಕಲಿತು ಮರೆಯುವುದಕೆ' ಎಂಬ ಮಾತು ಇದ್ದರೂ ಶಾಲಾ ಹಂತಗಳಲ್ಲಿ ಭಾಷಾ ಬೋಧನೆಗೆ ವ್ಯಾಕರಣವು ಅವಿಭಾಜ್ಯ ಅಂಗವಾಗಿದೆ. ಪ್ರಾಚೀನ ಕಾಲದಲ್ಲಿ ಭಾಷೆ ಕಲಿಯಲು ವ್ಯಾಕರಣ ಅತ್ಯಗತ್ಯ. ವ್ಯಾಕರಣ ಅಧ್ಯಯನದಿಂದ ಭಾಷೆಯ ಪ್ರಭುತ್ವ ಪಡೆಯಲು ಸಾಧ್ಯ. ವ್ಯಾಕರಣವಿಲ್ಲದ ಭಾಷಾಕಲಿಕೆ ಅದು ಕಲಿಕೆಯೇ ಅಲ್ಲ ಎಂಬಿತ್ಯಾದಿ ಮಾತುಗಳು ಕೇಳಿಬರುತ್ತಿದ್ದವು. ಆದರೆ ಇಂದು ಈ ವಿಚಾರಕ್ಕೆ ಬಂದಾಗ ವಿಶೇಷವಾದ ಆದ್ಯತೆ ಇಲ್ಲವಾಗಿದೆ ಎನಿಸುತ್ತದೆ. ಮನುಷ್ಯ ಅನೌಪಚಾರಿಕವಾಗಿ ವ್ಯಾಕರಣಜ್ಞಾನ ಹೊಂದಿರುತ್ತಾನೆಂಬುದಕ್ಕೆ ಅವನ ಸಂವಹನವೆ ನಮಗೆ ಸಾಕ್ಷಿ. ಶಾಲಾ ಹಂತಕ್ಕೆ ಬಂದಾಗ ಮಗುವಿಗೆ ಓದಿನ ಜೊತೆಗೆ ಬರಹವನ್ನು ಕಲಿಸಿಕೊಡಲಾಗುತ್ತದೆ. ಎಲ್ಲರ (ಶುದ್ಧ) ಬರಹ ಮತ್ತು ಭಾಷಾಪ್ರಭುತ್ವ ಪಡೆಯಲು ವ್ಯಾಕರಣ ಅಗತ್ಯವಾಗಿ ಬೇಕು. ಸೂತ್ರರೂಪದಲ್ಲಿಯ ವ್ಯಾಕರಣ ಪರಿಭಾಷೆಗಳನ್ನು ಕಂಠಪಾಠ ಮಾಡುವುದರಿಂದ ಭಾಷಾಪ್ರಭುತ್ವವನ್ನು ಪಡೆದುಕೊಳ್ಳಲು ಸಾಧ್ಯವಿಲ್ಲ ಎಂಬ ಕಾರಣದಿಂದ ವ್ಯಾಕರಣ ಕ್ಲಿಷ್ಟತೆಯನ್ನು ಹೋಗಲಾಡಿಸಲು ಪರಾಮರ್ಶನ ಶಾಲಾವ್ಯಾಕರಣಗಳು ಕಲಿಕಾರ್ಥಿಗಳಿಗಾಗಿಯೇ ಹುಟ್ಟಿಕೊಂಡವು. ಈ ಪರಾಮರ್ಶನ ಗ್ರಂಥಗಳು ವ್ಯಾಕರಣದ

ಪರಿಭಾಷೆಗಳನ್ನು ಸೂತ್ರರೂಪದಲ್ಲಿ ವಿವರಿಸದೆ ಸರಳವಾದ ಭಾಷೆಯಲ್ಲಿ ಉದಾಹರಣೆಗಳ ಮುಖಾಂತರ ವಿಶ್ಲೇಷಣಾ ಮಾದರಿಯಲ್ಲಿ ರಚಿತವಾಗಿವೆ. ವ್ಯಾಕರಣದ ಪರಿಭಾಷೆಯನ್ನು ಪ್ರತ್ಯೇಕ ಅಧ್ಯಾಯದಡಿಯಲ್ಲಿ ಶಾಲಾವ್ಯಾಕರಣಗಳು ವಿಶ್ಲೇಷಣೆ ಮಾಡಲ್ಪಡುತ್ತವೆ. ಅಂದರೆ ಕಲಿಕಾರ್ಥಿಗಳನ್ನು ಗುರಿಯಾಗಿಟ್ಟುಕೊಂಡು ಶಾಲಾವ್ಯಾಕರಣಗಳನ್ನು ರಚಿಸಲಾಗಿದೆ. ವ್ಯಾಕರಣವು ಕ್ಲಿಷ್ಟ ಎಂಬುದನ್ನು ಹೋಗಲಾಡಿಸುವ ಉದ್ದೇಶವು ಇದೆ. ಅಲ್ಲದೆ ಸರಳವಾಗಿ, ಸುಲಭವಾಗಿ ಅರ್ಥವಾಗುವಂತೆ ಶಾಲಾ ಹಂತಗಳಿಗನುಗುಣವಾಗಿ ನಮ್ಮ ಸುತ್ತಮುತ್ತಣ ಪರಿಸರದಲ್ಲಿ ಮಾತನಾಡುವ ಚಿಕ್ಕ ಚಿಕ್ಕ ವಾಕ್ಯಗಳನ್ನು ನಿದರ್ಶನಕ್ಕೆ ಬಳಸಿಕೊಂಡಿರುವುದು ಪರಾಮರ್ಶನ ಗ್ರಂಥಗಳಲ್ಲಿ ಕಂಡುಬರುತ್ತದೆ. ಶಾಲಾಪಠ್ಯಪುಸ್ತಕಗಳು ಭಾಷೆಯ ಜೊತೆಜೊತೆಯಲ್ಲಿ ವ್ಯಾಕರಣಾಂಶಗಳನ್ನು ಪ್ರತಿಯೊಂದು ಪಾಠದ ಭಾಷಾಭ್ಯಾಸದಡಿಯಲ್ಲಿ ಅಳವಡಿಸಲಾಗಿದೆ. ಅಂದರೆ ಭಾಷೆ ಮೊದಲು ನಂತರ ವ್ಯಾಕರಣ ಆನಂತರ ಬರಹ ಈ ನಿಯಮದಡಿಯಲ್ಲಿ ಶಾಲಾಪಠ್ಯಪುಸ್ತಕಗಳು ರೂಪಿತವಾಗಿವೆ. ಭಾಷಾಭ್ಯಾಸಗಳಲ್ಲಿ ಪದಗಳನ್ನು ಗಮನಿಸಿ, ಪದಗಳನ್ನು ಉಚ್ಚರಿಸಿರಿ, ಮಾದರಿಯಂತೆ ಬರೆಯಿರಿ ಇತ್ಯಾದಿ ಪ್ರಶ್ನೆಗಳು ಭಾಷೆಯ ಜೊತೆಯಲ್ಲಿ ಪರೋಕ್ಷವಾಗಿ ವ್ಯಾಕರಣಾಂಶಗಳನ್ನು ಕಲಿಸಿಕೊಡುವುದೇ ಆಗಿದೆ. ಅಂದರೆ ಮೊದಲು ಭಾಷೆ ನಂತರ ವ್ಯಾಕರಣ ಎಂಬ ನಿಲುವು ಸಮಕಾಲೀನ ಶಾಲಾಪಠ್ಯಪುಸ್ತಕಗಳಿಂದ ತಿಳಿದುಬರುತ್ತದೆ.

ಪ್ರಾಥಮಿಕ ಹಂತದ ಸಮಕಾಲೀನ ಪಠ್ಯಪುಸ್ತಕಗಳಲ್ಲಿ ವ್ಯಾಕರಣ ಪರಿಭಾಷೆಗಳನ್ನು ಬಳಸಿರುವುದು ಕಂಡುಬರುವುದಿಲ್ಲ. ಆದರೆ ಪ್ರಾಥಮಿಕ ಶಾಲಾಹಂತಕ್ಕೋಸ್ಕರ ರಚಿತವಾದ ಶಾಲಾವ್ಯಾಕರಣಗಳಲ್ಲಿ ಪರಿಭಾಷೆಗಳನ್ನು ಅನುಗಮನ ಪದ್ಧತಿಯಲ್ಲಿ, ವಿಶ್ಲೇಷಣಾ ಮಾದರಿಯಲ್ಲಿ ರಚಿಸಲಾಗಿದೆ. ಪ್ರಾಥಮಿಕ ಹಂತದ ಕನ್ನಡ ಪಠ್ಯಪುಸ್ತಕಗಳಲ್ಲಿ ಭಾಷೆಯ ಜೊತೆಯಲ್ಲಿಯೇ ಸೂಚ್ಯವಾಗಿ ವ್ಯಾಕರಣಾಂಶಗಳನ್ನು ಹೇಳಿರುವುದು ಪ್ರತಿ ಅಧ್ಯಾಯದ ಭಾಷಾಭ್ಯಾಸಗಳಿಂದ ತಿಳಿದುಬರುತ್ತದೆ. ಸಮಕಾಲೀನ ಪಠ್ಯಪುಸ್ತಕಗಳು ಮತ್ತು ಪರಾಮರ್ಶನ ಶಾಲಾವ್ಯಾಕರಣಗಳು ವ್ಯಾಕರಣ ಪರಿಭಾಷೆಗಳ ಬಳಕೆ ಮತ್ತು ವಿಶ್ಲೇಷಣೆಯಲ್ಲಿ ಭಿನ್ನತೆಯನ್ನು ಮತ್ತು ಸಾಮ್ಯತೆಯನ್ನು ಹೊಂದಿರುವುದು ಕಂಡುಬರುತ್ತದೆ. ಈ ಭಿನ್ನತೆ ಮತ್ತು ಸಾಮ್ಯತೆಯನ್ನು ಪರಿಭಾಷೆಗಳ ನೆಲೆಯಲ್ಲಿ, ವ್ಯಾಖ್ಯಾನದ ನೆಲೆಯಲ್ಲಿ ಮತ್ತು ನಿದರ್ಶನಗಳ ನೆಲೆಯಲ್ಲಿ ನೋಡುವುದು ಈ ಅಧ್ಯಾಯದ ಪ್ರಮುಖ ಉದ್ದೇಶವಾಗಿದೆ.

ಒಂದರಿಂದ ನಾಲ್ಕು ಮತ್ತು ಐದರಿಂದ ಏಳನೆ ತರಗತಿವರೆಗಿನ ಶೈಕ್ಷಣಿಕ ಹಂತಗಳನ್ನು ಪ್ರಾಥಮಿಕ/ಮಾಧ್ಯಮಿಕ ಹಂತಗಳೆಂದು ಕರೆಯಲಾಗುತ್ತದೆ. ಈ ಪ್ರಾರಂಭಿಕ ಹಂತದ ಕನ್ನಡ ಶಾಲಾಪಠ್ಯಪುಸ್ತಕಗಳ ಪ್ರಮುಖ ಉದ್ದೇಶ ಮೊದಲು ಮಾತು ನಂತರ ಓದು ಆನಂತರ ಬರಹ. ಈ ಹಿನ್ನೆಲೆಯಲ್ಲಿ ಭಾಷಾಕಲಿಕೆ ಪ್ರಧಾನವಾಗಿರುವಂತೆ ಕ್ರಿಯಾಶೀಲ ವಿಧಾನವನ್ನು ಅಳವಡಿಸಿರುವುದು ಕಂಡುಬರುತ್ತದೆ. ಭಾಷಾಕಲಿಕೆಯಲ್ಲಿ ಕಲಿಕಾರ್ಥಿಗಳು ಸಹಜ ಹಾಗೂ ಸಕ್ರೀಯವಾಗಿ ಭಾಗಿಯಾಗಿ ಕಲಿಕೆಯ ಸಾಮರ್ಥ್ಯಗಳನ್ನು ಪರಿಣಾಮಕಾರಿಯಾಗಿ ಹೆಚ್ಚಿಸಿಕೊಂಡು ಭಾಷಾಜ್ಞಾನವನ್ನು ಸದೃಢವಾಗಿ ಪಡುದುಕೊಳ್ಳಬೇಕೆಂಬುದೇ ಪಠ್ಯದ ಮೂಲ ಉದ್ದೇಶವಾಗಿದೆ. ಕನ್ನಡ ಭಾಷೆ ಹಾಗೂ ಕನ್ನಡ ನಾಡಿನ ಬಗೆಗೆ ಅಭಿಮಾನ, ಆಸಕ್ತಿ, ಪ್ರೀತಿಯನ್ನು ಬೆಳೆಸಿಕೊಳ್ಳಲು ಮತ್ತು ಭಾಷಾಪ್ರಭುತ್ವ ಹೊಂದಲು ನೋಡಿ ಕಲಿಯುವಿಕೆ, ಮಾಡಿ ಕಲಿಯುವಿಕೆ, ಘಟನೆಗಳನ್ನು ವಿವರಿಸುವ ಚಿತ್ರಗಳು, ಚಿತ್ರಕತೆಗಳು ಮುಂತಾದುವುಗಳನ್ನು ಚಿಕ್ಕ ಚಿಕ್ಕ ವಾಕ್ಯಗಳಲ್ಲಿ ಸರಳವಾದ ಪದರಚನೆಗಳನ್ನು ಗಮನಿಸುವುದು, ಪ್ರಾಸ ಪದಗಳನ್ನು ಹೇಳುವುದು, ಧ್ವನಿಗಳ ಸ್ಪಷ್ಟೋಚ್ಚಾರಣೆ, ಸರಳ ವಾಕ್ಯಗಳನ್ನು ಓದುವುದು, ಸ್ವಂತವಾಕ್ಯರಚನೆ, ಅನುಕರಣವಾಚಿ ಪದಗಳನ್ನು ಹೇಳಿಸುವುದು, ಪದಗಳ ವಿಭಜನೆ, ವಿಭಜಿತ ಪದಗಳನ್ನು ಕೂಡಿಸುವುದು, ವಿರುದ್ಧ ಪದಗಳು, ಜೋಡಿಪದಗಳು, ಸಮಾನಾರ್ಥಕ ಪದಗಳು, ನಾನಾರ್ಥಕ ಪದಗಳು, ಸ್ತ್ರೀರೂಪಗಳು, ಪುರುಷರೂಪಗಳು, ಗುಣವಿಶೇಷಣಗಳು, ಧ್ವನಿ ವ್ಯತ್ಯಾಸ, ಅರ್ಥ ವ್ಯತ್ಯಾಸಗಳು, ಆಡುಮಾತಿನರೂಪ ಮತ್ತು ಗ್ರಾಂಥಿಕ ರೂಪಗಳು, ಸ್ವೀಕೃತ ಪದಗಳು, ಸರಳವಾದ ವಿಶಿಷ್ಟವಾದ ನುಡಿಗಟ್ಟುಗಳು, ಜನಪ್ರೀಯ ಗಾದೆಗಳು, ಒಗಟುಗಳು ಇತ್ಯಾದಿ ಪಠ್ಯದ ಜೊತೆಯಲ್ಲಿ ಪ್ರಾಯೋಗಿಕ ಅಭ್ಯಾಸಕ್ಕೂ ಸ್ಥಳಾವಕಾಶವಿರುವುದರಿಂದ ಕನ್ನಡ ಭಾಷಾಕಲಿಕೆ ಸುಲಭೀಕರಣಗೊಳ್ಳುತ್ತದೆ. ಪಠ್ಯದ ಅಭ್ಯಾಸಕ್ಕೂ ಚಟುವಟಿಕೆಗಳ ಮುಖಾಂತರ ಕಲಿಕಾರ್ಥಿಗಳಲ್ಲಿ ಸೃಜನಶೀಲತೆಯನ್ನು ಬೆಳೆಸುವ ಸರಳ, ನೈಜ ಮಾದರಿಗಳನ್ನು ಒಳಗೊಂಡಿವೆ. ವರ್ಣಮಾಲೆಯ ವರ್ಗೀಕರಣದ ಪರಿಚಯ, ಅಕ್ಷರಗಳನ್ನು ಗುರುತಿಸಿ ಪದಗಳನ್ನು ಓದುವುದು, ಗುಣಿತಾಕ್ಷರಗಳ ಪರಿಚಯ ಮತ್ತು ಓದಿಗೆ ಪಾಠಗಳನ್ನು ನಿರ್ಮಿಸಲಾಗಿದೆ. ಒತ್ತಕ್ಷರಗಳ ಪರಿಕಲ್ಪನೆ, ಅವುಗಳ ಪದರಚನೆ, ಓದು ಮತ್ತು ಸ್ವರಚನೆಗೆ ಅನುಕೂಲವಾಗುವಂತೆ ಪಠ್ಯಪುಸ್ತಕಗಳು ರೂಪಿತವಾಗಿವೆ.

ಈ ಮೇಲೆ ಹೇಳಿದ ಭಾಷಾಂಶ (ವ್ಯಾಕರಣಾಂಶ) ಗಳನ್ನು ಸೂಕ್ಷ್ಮವಾಗಿ ಗಮನಿಸಿದಾಗ ಪ್ರಾಥಮಿಕ ಹಂತದ ಕನ್ನಡ ಪಠ್ಯಪುಸ್ತಕಗಳು ಭಾಷಾ ಕಲಿಕೆಗೆ ಪೂರಕವಾಗಿವೆಯೇ ಹೊರತು ವ್ಯಾಕರಣ ಕಲಿಕೆಗಲ್ಲವೆಂಬುದು ಸ್ಪಷ್ಟವಾಗಿ ಕಂಡುಬರುತ್ತದೆ. ಪ್ರಾಥಮಿಕ ಹಂತದ ಸಮಕಾಲೀನ ಕನ್ನಡ ಪಠ್ಯಪುಸ್ತಕಗಳಲ್ಲಿ ಯಾವುದೇ ವ್ಯಾಕರಣ ಪರಿಭಾಷೆಗಳನ್ನು ಪರಿಚಯಿಸಿಲ್ಲ. ಈ ಹಂತದ ಮಕ್ಕಳಿಗೆ ಯಾವುದೇ ಪರಿಭಾಷೆಗಳನ್ನು ಪರಿಚಯಿಸಬೇಕಾಗಿಲ್ಲ ಎಂಬುದು ಶಿಕ್ಷಕರ ಅಭಿಪ್ರಾಯವಾಗಿದೆ. ಒಂದು ವೇಳೆ ಪರಿಚಯಿಸಿದ್ದೇಆದರೆ ಅದು ಅನಗತ್ಯ ಹೊರೆಯಾಗಿ ಮಕ್ಕಳ ಭಾಷಾಕಲಿಕೆಗೆ ತೊಡಕಾಗುತ್ತದೆಂದು ಹೇಳುತ್ತಾರೆ. ಶಿಕ್ಷಕರು ಪಾಠಗಳನ್ನು, ಪದ್ಯಗಳನ್ನು ಹೇಳಿಕೊಡುವಾಗ ಪದಗಳನ್ನು ಅರ್ಥಕ್ಕನುಸಾರವಾಗಿ ಬಿಡಿಸಿ, ಕೂಡಿಸಿ ಹೇಳುವುದರಿಂದ ಕಲಿಕಾರ್ಥಿಗಳಿಗೆ ಭಾಷಾಕಲಿಕೆಗೆ ಅನುಕೂಲವಾಗುತ್ತದೆ. ಪ್ರಾಥಮಿಕ ಹಂತದ ಪಠ್ಯಪುಸ್ತಕಗಳು ನಮ್ಮ ಸುತ್ತಮುತ್ತ ನಡೆಯುವ ಘಟನಾವಳಿಗಳನ್ನು, ಪಕ್ಷಿಪ್ರಾಣಿಗಳನ್ನು ಸುಂದರವಾದ ಬಣ್ಣಗಳಿಂದ ಕೂಡಿದ ಚಿತ್ರಗಳನ್ನೊಳಗೊಂಡಿವೆ. ಇವುಗಳನ್ನು ನೋಡುತ್ತಲೇ ಕಲಿಕಾರ್ಥಿಗಳು ಮಾತಿಗಿಳಿಯಲು ಮುಂದಾಗುತ್ತಾರೆ. ಈ ರೀತಿ ಮೇಲಿಂದ ಮೇಲೆ ಹೆಚ್ಚು ಹೆಚ್ಚು ಮಾತುಗಳನ್ನು ಪ್ರಯೋಗಮಾಡುವುದರ ಮೂಲಕ ಕಲಿಕಾರ್ಥಿಗಳು ತಮಗರಿವಿಲ್ಲದಂತೆಯೇ ವ್ಯಾಕರಣಾಂಶಗಳನ್ನು ಬಳಸುತಿರುತ್ತಾರೆ. ಹೀಗೆ ತಮಗರಿವಿಲ್ಲದಂತೆಯೇ ಕಲಿಕಾರ್ಥಿಗಳು ಬಳಸುವ ವ್ಯಾಕರಣವನ್ನು ಅನೌಪಚಾರಿಕ ವ್ಯಾಕರಣವೆಂದು ಕರೆಯುವರು. ಅಂದರೆ ಪ್ರತಿಯೊಬ್ಬ ಭಾಷಿಕನು ಮಾತನಾಡುವಾಗ ಭಾಷೆಯೊಂದಿಗೆ ಅನೌಪಚಾರಿಕವಾಗಿ ವ್ಯಾಕರಣವನ್ನು ಬಳಸುವುದನ್ನು ನಾವು ಗಮನಿಸಬಹುದು. ಶಾಲೆಗೆ ದಾಖಲಾದ ಮಕ್ಕಳು ತರಗತಿಯಿಂದ ತರಗತಿಗೆ ಬಂದಂತೆಲ್ಲ ಪ್ರಯೋಗದ ಮೂಲಕವೇ ವ್ಯಾಕರಣಾಂಶಗಳು ಮಕ್ಕಳ ಅರಿವಿಗೆ ಬರಬೇಕೆಂಬ ಉದ್ದೇಶದಿಂದ ಪ್ರಾಥಮಿಕ, ಮಾಧ್ಯಮಿಕ ಮತ್ತು ಪ್ರೌಢ ಹೀಗೆ ಹಂತದಿಂದ ಹಂತಕ್ಕೆ ಬಂದಂತೆಲ್ಲಾ ಭಾಷೆಯ ಜೊತೆಗೆ ವ್ಯಾಕರಣದ ಪರಿಭಾಷೆಗಳನ್ನು ಬಳಸಿರುವುದು ಸಮಕಾಲೀನ ಕನ್ನಡ ಪಠ್ಯಪುಸ್ತಕಗಳಲ್ಲಿ ಕಂಡುಬರುತ್ತದೆ. ಪ್ರಾಥಮಿಕ ಹಂತದ ಪಠ್ಯಪುಸ್ತಕಗಳಲ್ಲಿ ಭಾಷಾಕಲಿಕೆಗೆ ಹೆಚ್ಚಿನ ಪ್ರಾಧಾನ್ಯತೆ ಕೊಟ್ಟರೆ, ಮಾಧ್ಯಮಿಕ ಮತ್ತು ಪ್ರೌಢಹಂತಗಳಲ್ಲಿ ಭಾಷೆಯ ಜೊತೆಗೆ ವ್ಯಾಕರಣದ ಪರಿಭಾಷೆಗಳನ್ನು ಹಾಗೂ ವಾಕರಣಶಾಸ್ತ್ರದ ಒಂದು ಭಾಗವಾದ ಛಂದಸ್ಸು ಮತ್ತು ಅಲಂಕಾರಗಳ ಪರಿಚಯವನ್ನು

ಮಾಡಲಾಗಿದೆ. ಹೀಗೆ ಮಾಡುವುದರಿಂದ ಕಲಿಕಾರ್ಥಿಗಳು ಸುಲಭವಾಗಿ ಭಾಷೆಯೊಂದಿಗೆ ವ್ಯಾಕರಣಾಂಶಗಳನ್ನು ಕಲಿಯುತ್ತಾರೆಂಬುದು ಶಿಕ್ಷಕರ ಮತ್ತು ಪಠ್ಯಗಳ ನಿಲುವಾಗಿದೆ.

ಪರಾಮರ್ಶನ ವ್ಯಾಕರಣ ಗ್ರಂಥಗಳ ವಿಷಯ ಸಮಕಾಲೀನ ಪಠ್ಯಪುಸ್ತಕಗಳಲ್ಲಿ ಯಾವ ಸ್ವರೂಪದಲ್ಲಿ ಅಳವಡಿಸಲಾಗಿದೆ ಎಂಬುದನ್ನು ನೋಡಿದಾಗ ಭಿನ್ನತೆಗಿಂತ ಹೆಚ್ಚು ಸಾಮ್ಯತೆ ಹೊಂದಿರುವುದು ಕಂಡುಬರುತ್ತದೆ. ಭಿನ್ನತೆಯನ್ನು ಪರಿಭಾಷೆಗಳ ನೆಲೆಯಲ್ಲಿ ನಿದರ್ಶನಗಳ ಮೂಲಕ ದಾಖಲಿಸಲಾಗಿದೆ. ಆಧುನಿಕ ಭಾಷಾವಿಜ್ಞಾನದಿಂದ ಕಸಿಗೊಂಡ ರೂಪಗಳನ್ನು ಶಾಲಾ ಪಠ್ಯಪುಸ್ತಕಗಳು ಹೊಂದಿವೆ. ಕೆಲವು ಪರಿಭಾಷೆಗಳಲ್ಲಿ ಭಿನ್ನತೆ ಕಂಡುಬಂದರೆ ಅವುಗಳ ವಿಶ್ಲೇಷಣೆಯಲ್ಲಿ ಸಾಮ್ಯತೆ ಇರುವುದು ಕಂಡುಬರುತ್ತದೆ.

ಉದಾಹರಣೆ

೧. ನ್ಯೂನರೂಪಗಳು

| ಪಠ್ಯಪುಸ್ತಕಗಳು | ಪರಾಮರ್ಶನ ವ್ಯಾಕರಣ ಕೃತಿಗಳು |
|---|---|
| ಕೃದಂತಗಳು | ನ್ಯೂನರೂಪಗಳು |

ಪಂಜೆಮಂಗೇಶರಾವ್ ಅವರು ೧೯೧೦ರಲ್ಲಿ ರಚಿಸಿದ ಕನ್ನಡ ಮೂಲವ್ಯಾಕರಣದಲ್ಲಿ ನ್ಯೂನರೂಪಗಳು ಎಂಬ ಪರಿಭಾಷೆಯನ್ನು ಬಳಸಿದ್ದಾರೆ. ಕ್ರಿಯೆಯು ಸಂಪೂರ್ಣವಾಗಿದ್ದರೆ ಅದನ್ನು ಕ್ರಿಯೆಯ ಸಂಪೂರ್ಣರೂಪವೆಂತಲೂ, ಕ್ರಿಯೆಯು ಸಂಪೂರ್ಣವಾಗಿರದಿದ್ದರೆ ಅದನ್ನು ಕ್ರಿಯೆಯ ನ್ಯೂನರೂಪವೆಂದಿದ್ದಾರೆ. ಅಂದರೆ ಕ್ರಿಯೆಯು ಸಂಪೂರ್ಣವಾಗಿಲ್ಲವೆಂದು ಹೇಳುವ ರೂಪಗಳೆ ನ್ಯೂನರೂಪಗಳೆಂದು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಉದಾಹರಣೆ: ಮಾಡುತ್ತ, ಹೋಗುತ್ತ, ಬರುತ್ತ, ಕೇಳುತ್ತ ಈ ಕ್ರಿಯಾರೂಪಗಳಲ್ಲಿ ಕ್ರಿಯೆಯು ವರ್ತಮಾನಕಾಲದಲ್ಲಿದೆ ಎಂದು ತೋರುವುದು. ಮಾಡಿ, ಹೋಗಿ, ಬಂದು, ಕೇಳಿ ಈ ಕ್ರಿಯಾರೂಪಗಳಲ್ಲಿ ಕ್ರಿಯೆಯು ಭೂತಕಾಲದಲ್ಲಿದೆ ಎಂದು ತೋರುವುದು. ಎರಡೂ ರೂಪಗಳು ಕ್ರಿಯೆಯು ಸಂಪೂರ್ಣವಾಗಿಲ್ಲವೆಂದು ಹೇಳುವುದರಿಂದ ನ್ಯೂನರೂಪಗಳಾಗಿವೆ ಎಂದು ಹೇಳಿದ್ದಾರೆ.

ಪ್ರೌಢಶಾಲಾಹಂತದ ಸಮಕಾಲೀನ ಕನ್ನಡ ಪಠ್ಯಪುಸ್ತಕಗಳಲ್ಲಿ 'ಕೃದಂತಗಳು' ಎಂಬ ಪರಿಭಾಷೆಯನ್ನು ಬಳಕೆಮಾಡಿದರೆ, ಪಂಜೆಮಂಗೇಶರಾವ್ ಅವರು ತಮ್ಮ ಕನ್ನಡ ಮೂಲ ವ್ಯಾಕರಣದಲ್ಲಿ ನ್ಯೂನರೂಪಗಳು ಎಂಬ ಪರಿಭಾಷೆಯನ್ನು ಬಳಕೆಮಾಡಿದ್ದಾರೆ. ಇಲ್ಲಿ ವಿಶ್ಲೇಷಣೆಯಲ್ಲಿ ಸಾಮ್ಯತೆ ಕಂಡುಬಂದರೆ ಪರಿಭಾಷೆಯ ಬಳಕೆಯಲ್ಲಿ ಮಾತ್ರ ಭಿನ್ನತೆ ಇರುವುದು ಕಂಡುಬರುತ್ತದೆ. ಧಾತುಗಳಿಗೆ ಕೃತ್ ಪ್ರತ್ಯಯಗಳು ಸೇರಿದರೆ ಕೃದಂತ

ಪದಗಳಾಗುತ್ತವೆ. ಈ ಕೃದಂತ ಪದಗಳು ಕ್ರಿಯಾದಪಗಳಂತೆ ಕ್ರಿಯೆಯನ್ನು ಪೂರ್ಣಗೊಳಿಸುವುದಿಲ್ಲ. ಅವು ಅಪೂರ್ಣ ಕ್ರಿಯೆಯನ್ನು ಸೂಚಿಸುತ್ತವೆ. ಹೀಗಾಗಿ ಅಪೂರ್ಣ ಕ್ರಿಯಾಪದಗಳನ್ನು ಕೃದಂತಗಳೆಂದು ಕರೆಯಲಾಗುತ್ತದೆ. ಉದಾಹರಣೆಗೆ : ರಮೇಶ ಹಾಲು ಕುಡಿದು ಸುಖವಾಗಿ ಮಲಗಿದನು. ಈ ವಾಕ್ಯದಲ್ಲಿ 'ಕುಡಿದು' ಎಂಬಲ್ಲಿ ಕುಡಿಯುವ ಕ್ರಿಯೆಯು ಪೂರ್ಣವಾಗಿಲ್ಲ, ಅಪೂರ್ಣವಾಗಿದೆ. ಆದುದರಿಂದ ಕುಡಿದು ಎಂಬುದು ಕೃದಂತ ಪದವಾಗಿದೆ. ಆದರೆ ಮಲಗಿದನು ಎಂಬಲ್ಲಿ ಮಲಗುವ ಕ್ರಿಯೆಯು ಪೂರ್ಣವಾಗಿದೆ. ಕಾರಣ ಇದು ಕ್ರಿಯಾಪದವಾಗಿದೆ.

ಧಾತುಗಳಿಗೆ ಕರ್ತೃ ಮೊದಲಾದ ಅರ್ಥದಲ್ಲಿ ಸಾಮಾನ್ಯವಾಗಿ 'ಅ' ಎಂಬ ಕೃತ್ ಪ್ರತ್ಯಯ ಬರುವುದು. ಆಗ ಧಾತುವಿಗೂ ಕೃತ್ ಪ್ರತ್ಯಯಕ್ಕೂ ನಡುವೆ ವರ್ತಮಾನ, ಭವಿಷ್ಯತ್ಕಾಲದಲ್ಲಿ 'ವ', 'ಉವ', ಎಂಬ ಕಾಲಸೂಚಕ ಪ್ರತ್ಯಯಗಳೂ, ಭೂತಕಾಲದಲ್ಲಿ 'ದ' ಎಂಬ ಪ್ರತ್ಯಯವೂ, ನಿಷೇಧಾರ್ಥದಲ್ಲಿ 'ಅದ' ಎಂಬ ಪ್ರತ್ಯಯವೂ ಆಗಮವಾಗುತ್ತವೆ.

ಉದಾಹರಣೆ

ವರ್ತಮಾನ ಕೃದಂತ : ಮಾಡು + ವ + ಅ = ಮಾಡುವ
ಬರೆ + ಉವ + ಅ = ಬರೆಯುವ

ಭೂತಕೃದಂತ : ತಿನ್ನು + ದ + ಅ = ತಿಂದ
ಹೋಗು + ದ + ಅ = ಹೋದ

ನಿಷೇಧ ಕೃದಂತ : ಮಾಡು + ಅದ + ಅ = ಮಾಡದ
ಹಾಡು + ಅದ + ಅ = ಹಾಡದ

ಶಾಲಾಪಠ್ಯಪುಸ್ತಕಗಳಲ್ಲಿ ನ್ಯೂನರೂಪಗಳು ಎಂಬ ಪರಿಭಾಷೆಯ ಬಳಕೆ ಕಂಡುಬರುವುದಿಲ್ಲ. ಇದಕ್ಕೆ ಪೂರಕವಾಗಿ ಕೆಲಸವನ್ನು ಸೂಚಿಸುವ ಪದವನ್ನು ಕ್ರಿಯಾಪದವೆಂತಲೂ, ಆ ಕ್ರಿಯೆ ಪೂರ್ಣವಾಗಿದ್ದರೆ ಕ್ರಿಯಾಪದವಾಗುತ್ತದೆ. ಅಪೂರ್ಣವಾಗಿದ್ದರೆ ಅಪೂರ್ಣಕ್ರಿಯಾಪದವಾಗುತ್ತದೆಂದು ತಿಳಿಸುತ್ತವೆ. ಉದಾಹರಣೆ: ಏಳನೆ ತರಗತಿಯ ಎರಡನೆ ಸೆಮಿಸ್ಟರ್ ಕನ್ನಡ ಪಠ್ಯಪುಸ್ತಕದ 'ಗುಡವಿ ಪಕ್ಷಿಧಾಮ' ಎಂಬ ಮೂರನೆ ಪಾಠದ ಭಾಷಾಭ್ಯಾಸದಲ್ಲಿ ಈ ಕೆಳಗಿನವುಗಳನ್ನು ಓದಿ ಅಡಿಗೆರೆ ಹಾಕಿದ ಪದವನ್ನು ಗಮನಿಸಿ ಎಂದು ಕೇಳಲಾಗಿದೆ.

೧. ನಾನು ನಾಳೆ ಮನೆಗೆ ಬರು

೨. ನಾವು ನಾಳೆ ಮನೆಗೆ ಬರು

ಈ ವಾಕ್ಯಗಳಲ್ಲಿ 'ಬರು' ಎಂಬ ಪದವು ಪೂರ್ಣ ಅರ್ಥವನ್ನು ಕೊಡುವುದಿಲ್ಲ. ವಾಕ್ಯವು ಪೂರ್ಣವಾಗಿಲ್ಲ. ಯಾಕೆಂದರೆ 'ಬರು' ಎಂಬುದು ಕೇವಲ ಧಾತು ಮಾತ್ರ ಧಾತುವು ಕ್ರಿಯಾಪದವಾದಾಗ ಪೂರ್ಣ ಅರ್ಥ ನೀಡುತ್ತದೆ. ಧಾತು, ಕಾಲಸೂಚಕ ಪ್ರತ್ಯಯ ಮತ್ತು ಆಖ್ಯಾತ ಪ್ರತ್ಯಯಗಳ ಜೊತೆಗೆ ಸೇರಿದಾಗ ಕ್ರಿಯಾಪದವಾಗುತ್ತದೆ.

ಉದಾಹರಣೆಗೆ ವಾಕ್ಯ

| | ಧಾತು | + | ಕಾ.ಸೂ.ಪ್ರ | + | ಆಖ್ಯಾತ ಪ್ರ | = | ಕ್ರಿಯಾಪದ |
|---|---|---|---|---|---|---|---|
| ೧. ಅವನು ನಿನ್ನೆ ಮನೆಗೆ ಬಂದನು. | ಬರು | + | ದ | + | ಅನು | = | ಬಂದನು |
| ೨. ಅವನು ಈಗ ಮನೆಗೆ ಬರುತ್ತಾನೆ. | ಬರು | + | ಉತ್ತ | + | ಆನೆ | = | ಬರುತ್ತಾನೆ |
| ೩. ಅವನು ನಾಳೆ ಮನೆಗೆ ಬರುವನು. | ಬರು | + | ವ | + | ಅನು | = | ಬರುವನು |

ಒಂದು ಕ್ರಿಯಾಪದವು ಎಷ್ಟು ವ್ಯಾಕರಣಾಂಶಗಳಿಂದ ಕೂಡಿ ಪೂರ್ಣಕ್ರಿಯಾಪದವಾಗುತ್ತದೆ ಎಂಬುದು ಮೇಲಿನ ನಿದರ್ಶನಗಳಿಂದ ತಿಳಿದುಬರುತ್ತದೆ. ಆಖ್ಯಾತ ಪ್ರತ್ಯಯವನ್ನು ತೆಗೆದು ಹಾಕಿದರೆ ಅಪೂರ್ಣ ಕ್ರಿಯಾಪದಗಳಾಗುತ್ತವೆ. ಪರಾಮರ್ಶನ ಗ್ರಂಥಗಳಲ್ಲಿ ಬಳಸಿದಂತಹ 'ನ್ಯೂನರೂಪಗಳು' ಎಂಬ ಪರಿಭಾಷೆಗೆ ಬದಲಾಗಿ ಅಪೂರ್ಣ ಕ್ರಿಯಾಪದಗಳು ಎಂಬ ಪರಿಭಾಷೆಯನ್ನು ಬಳಸಿರುವುದು ಕಂಡುಬರುತ್ತದೆ. ಇಲ್ಲಿ ಬಳಸಿರುವಂತಹ ಪರಿಭಾಷೆಗಳಲ್ಲಿ ಭಿನ್ನತೆ ಕಂಡುಬಂದರೆ ವಿಶ್ಲೇಷಣೆಯಲ್ಲಿ ಸಾಮ್ಯತೆ ಇದೆ.

**೨. ಲಿಂಗೀಯ ವಿಚಾರಗಳನ್ನು ಹೇಳುವಾಗ ಬದಲಾವಣೆ**

| ಪಠ್ಯಪುಸ್ತಕಗಳು | ಪರಾಮರ್ಶನ ವ್ಯಾಕರಣ ಕೃತಿಗಳು |
|---|---|
| ಸ್ತ್ರೀರೂಪಗಳು | ಸ್ತ್ರೀಲಿಂಗ |
| ಪುರುಷರೂಪಗಳು | ಪುಲ್ಲಿಂಗ |
| ವಸ್ತುಗಳು, ಪ್ರಾಣಿಗಳು | ನಪುಂಸಕಲಿಂಗ |

ಪರಾಮರ್ಶನ ಗ್ರಂಥಗಳಲ್ಲಿ ಇಲ್ಲದೆ ಇರುವಂತಹ ರೂಪಗಳನ್ನು ಪ್ರಾಥಮಿಕ ಹಂತದ ಪಠ್ಯಪುಸ್ತಕಗಳಲ್ಲಿ ಬಳಸಿರುವುದು ಕಂಡುಬರುತ್ತದೆ. ಅಂದರೆ ಆಧುನಿಕ ಭಾಷಾವಿಜ್ಞಾನದಿಂದ ಕಸಿಗೊಂಡ ರೂಪಗಳಾದ ಸ್ತ್ರೀರೂಪಗಳು, ಪುರುಷರೂಪಗಳನ್ನು ಪರಾಮರ್ಶನ ಗ್ರಂಥಗಳಲ್ಲಿಯ ಲಿಂಗವ್ಯವಸ್ಥೆಯಲ್ಲಿ ಬರುವ ಸ್ತ್ರೀಲಿಂಗ ಮತ್ತು

ಪುಲ್ಲಿಂಗಗಳಿಗೆ ಪರ್ಯಾಯವಾಗಿ ಬಳಸಲಾಗಿದೆ. ಕನ್ನಡದಲ್ಲಿ ಪುರುಷರನ್ನು ಕುರಿತು ಹೇಳುವ ಹೆಸರುಗಳೆಲ್ಲ ಪುಲ್ಲಿಂಗಗಳು. ಉದಾಹರಣೆಗೆ: ತಂದೆ, ರಾಮ, ಅಣ್ಣ, ತಮ್ಮ ಇತ್ಯಾದಿ. ಸ್ತ್ರೀಯರನ್ನು ಕುರಿತು ಹೇಳುವ ಹೆಸರುಗಳೆಲ್ಲ ಸ್ತ್ರೀಲಿಂಗಗಳು. ಉದಾಹರಣೆಗೆ: ತಾಯಿ, ಸೀತೆ, ಅಕ್ಕ, ತಂಗಿ ಇತ್ಯಾದಿ. ಗಂಡೂ ಅಲ್ಲದ ಹೆಣ್ಣೂ ಅಲ್ಲದ ವಸ್ತುಗಳ ಹೆಸರುಗಳನ್ನು ನಪುಂಸಕಲಿಂಗಗಳೆಂದು ಪರಾಮರ್ಶನ ಗ್ರಂಥಗಳು ವಿಶ್ಲೇಷಣೆ ಮಾಡುತ್ತವೆ. ಶಾಲಾ ಪಠ್ಯಪುಸ್ತಕಗಳಲ್ಲಿ ಈ ಪರಿಭಾಷೆಗಳಿಗೆ ಬದಲಾಗಿ ಸ್ತ್ರೀರೂಪಗಳು ಮತ್ತು ಪುರುಷರೂಪಗಳೆಂದು ಬಳಸಲಾಗಿದೆ. ಉದಾಹರಣೆಗೆ: ೩ಮತ್ತು ೪ನೆ ತರಗತಿಗಳ ಕನ್ನಡ ಕಲಿ-ನಲಿ ಪಠ್ಯಪುಸ್ತಕಗಳ ೮, ೯ನೆ ಪಾಠಗಳ (ಅಂಚೆ ಕಛೇರಿ ಮತ್ತು ಪುಟ್ಟ ಕೌಮುದಿ) ಭಾಷಾಭ್ಯಾಸಗಳಲ್ಲಿ ಕೆಳಗಿನ ರೂಪಗಳನ್ನು ಬರೆಯಲಾಗಿದೆ.

೧. ಕೊಟ್ಟಿರುವ ಪದಗಳ ಪುರುಷರೂಪ ಬರೆಯಿರಿ

ಅಕ್ಕ ________ ತಂಗಿ ________ ಮಗಳು ________

ಅಜ್ಜಿ ________ ಇವಳು ________ ಅವಳು ________

೨. ಕೊಟ್ಟಿರುವ ಪದಗಳ ಸ್ತ್ರೀರೂಪ ಬರೆಯಿರಿ

ತಂದೆ ________ ಶಿಕ್ಷಕ ________ ಅಜ್ಜ ________

ಅಣ್ಣ ________ ಗೆಳೆಯ ________ ನಾಯಕ ________

ಮೊದಲನೆಯ ಪ್ರಶ್ನೆಯಲ್ಲಿ ಸ್ತ್ರೀರೂಪಗಳನ್ನು ನೀಡಿ ಪುರುಷರೂಪಗಳನ್ನು ಬರೆಯಲು ಕೇಳಿದರೆ, ಎರಡನೆಯ ಪ್ರಶ್ನೆಯಲ್ಲಿ ಪುರುಷರೂಪಗಳನ್ನು ನೀಡಿ ಸ್ತ್ರೀರೂಪಗಳನ್ನು ಬರೆಯಲು ಕೇಳಲಾಗಿದೆ. ಮೇಲಿನ ನಿದರ್ಶನಗಳನ್ನು ಗಮನಿಸಿದಾಗ ಪರಿಭಾಷೆಗಳ ಬಳಕೆಯಲ್ಲಿ ಭಿನ್ನತೆ ಇದ್ದರೆ, ವಿಶ್ಲೇಷಣೆಯಲ್ಲಿ ಸಾಮ್ಯತೆ ಇರುವುದು ಕಂಡುಬರುತ್ತದೆ. ಪಠ್ಯಪುಸ್ತಕಗಳಲ್ಲಿಯ ಸ್ತ್ರೀರೂಪಗಳು ಮತ್ತು ಪುರುಷರೂಪಗಳು ಆಧುನಿಕ ಭಾಷಾವಿಜ್ಞಾನದಿಂದ ಕಸಿಗೊಂಡ ರೂಪಗಳಾಗಿವೆ.

**೩. ಪುನರಾವರ್ತಿತ ರೂಪಗಳು**

| **ಪಠ್ಯಪುಸ್ತಕಗಳು** | **ಪರಾಮರ್ಶನ ವ್ಯಾಕರಣ ಕೃತಿಗಳು** |
|---|---|
| ಪುನರಾವರ್ತಿತ ರೂಪಗಳು | ದ್ವಿರುಕ್ತಿ |
| ಪುನರುಚ್ಚರಿಸುವ ಪದಗಳು | ವಿಷಯದ ಅತಿರೇಕ ಸೂಚಕ ಪದಗಳು |

ಪರಾಮರ್ಶನ ಗ್ರಂಥಗಳಲ್ಲಿ ದ್ವಿರುಕ್ತಿ ಎಂಬ ಪರಿಭಾಷೆಯನ್ನು ಬಳಸಿದ್ದರೆ ಇದಕ್ಕೆ ಪೂರಕವಾಗಿ ಪ್ರಾಥಮಿಕ ಮತ್ತು ಮಾಧ್ಯಮಿಕ ಶಾಲಾಪಠ್ಯಪುಸ್ತಕಗಳಲ್ಲಿ ಪುನರಾವರ್ತಿತ ರೂಪಗಳು, ಪುನರುಚ್ಚರಿಸುವ ಪದಗಳು ಎಂಬ ಆಧುನಿಕ ಭಾಷಾವಿಜ್ಞಾನದಿಂದ ಕಸಿಗೊಂಡ ರೂಪಗಳನ್ನು ಬಳಸಲಾಗಿದೆ. ವಿಶೇಷವಾದ ಅರ್ಥವುಂಟಾಗುವಂತೆ ಪದಗಳನ್ನು ಎರಡುಬಾರಿ ಹೇಳುವುದಕ್ಕೆ ದ್ವಿರುಕ್ತಿ ಎಂದು ಹೇಳಲಾಗಿದೆ.

ಉದಾಹರಣೆ

೧. ನಾನು ಅವನ ಆಟವನ್ನು ನೋಡಿನೋಡಿ ನಕ್ಕೆನು.

೨. ಹೊತ್ತಾಯಿತು ಬೇಗಬೇಗ ನಡೆ.

೩. ಎಲಾ ಎಲಾ, ನಿನಗೆ ಬುದ್ಧಿ ಇರಲಿಲ್ಲವೆ?

೪. ಕಾಸುಕಾಸಿಗೂ ಹೊಟ್ಟೆ ಉರಿಸಿಕೊಳ್ಳುವವರನ್ನು ನಂಬಬಾರದು.

ಈ ವಾಕ್ಯಗಳಲ್ಲಿ ಕೆಲವು ಪದಗಳನ್ನು ಎರಡು ಬಾರಿ ಹೇಳಲಾಗಿದೆ. ನೋಡಿನೋಡಿ ಎಂಬಲ್ಲಿ ಆವೃತ್ತಿಯೂ, ಬೇಗಬೇಗ ಎಂಬಲ್ಲಿ ಅತಿಶಯವೂ, ಎಲಾಎಲಾ ಎಂಬಲ್ಲಿ ಕೋಪವೂ, ಕಾಸುಕಾಸಿಗೂ ಎಂಬಲ್ಲಿ ವಸ್ತುನಿರ್ಣಯವೂ ಕಂಡುಬರುತ್ತದೆ. ಶಾಲಾಪಠ್ಯಪುಸ್ತಕಗಳಲ್ಲಿ ದ್ವಿರುಕ್ತಿಗೆ ಪೂರಕವಾಗಿ ಪುನಹ ಪುನಹ ಬಳಸುವುದರಿಂದ/ಉಚ್ಚರಿಸುವುದರಿಂದ ಪುನರುಕ್ತಿಗಳೆಂದು, ಪುನರಾವರ್ತಿತ ರೂಪಗಳೆಂದು, ಎರಡಕ್ಕಿಂತ ಹೆಚ್ಚುಸಲ ನುಡಿದರೆ ಬಹೂಕ್ತಿ ಎಂತಲೂ ಹೇಳಲಾಗುತ್ತದೆ. ಉದಾಹರಣೆ: ನಾಲ್ಕನೆ ತರಗತಿಯ ಕನ್ನಡ ಕಲಿ-ನಲಿ ಪಠ್ಯಪುಸ್ತಕದ ೩ನೆ ಪಾಠವಾದ 'ಏಕಲವ್ಯ' ಪಾಠದ ಭಾಷಾಭ್ಯಾಸದಲ್ಲಿ ಕೊಟ್ಟಿರುವ ಪುನರಾವರ್ತಿತ ರೂಪಗಳನ್ನು ಸ್ಪಷ್ಟವಾಗಿ ಓದಲು ಹೇಳಲಾಗಿದೆ. ಹೌದುಹೌದು, ನಡೆನಡೆ, ಹೇಳುಹೇಳು, ಹೋಗುಹೋಗು ಇತ್ಯಾದಿ.

ಆರನೆ ತರಗತಿಯ ಎರಡನೆ ಸೆಮಿಸ್ಟರ್‌ನ 'ಸಮೂಹ ಮಾಧ್ಯಮಗಳು' ಎಂಬ ಆರನೆ ಪಾಠದ ಭಾಷಾಭ್ಯಾಸದಲ್ಲಿ ವಾಕ್ಯಗಳನ್ನು ಓದಿ, ಗೆರೆಹಾಕಿದ ಪದ ಏನನ್ನು ಸೂಚಿಸುತ್ತದೆ? ತಿಳಿಯಲೆತ್ನಿಸಿ ಎಂದು ಕೇಳಲಾಗಿದೆ.

ಉದಾಹರಣೆ

೧. <u>ಓಡಿ ಓಡಿ</u> ಸಾಕಾಯಿತು.

೨. ಅವನು <u>ಬರೆದು ಬರೆದು</u> ಒಳ್ಳೆಯ ಲೇಖಕನಾದ.

೩. ಹಳ್ಳಿಗಳಲ್ಲಿ <u>ಸಣ್ಣ ಸಣ್ಣ</u> ಮನೆಗಳಿರುತ್ತವೆ.

೪. ಶಾಲೆಯ ಹತ್ತಿರ ಹತ್ತಿರ ಹೋದಂತೆಲ್ಲಾ ಸಂತೋಷವಾಗುತ್ತದೆ.

ಮೇಲಿನ ಪರಾಮರ್ಶನ ಗ್ರಂಥಗಳಲ್ಲಿಯ ಮತ್ತು ಶಾಲಾಪಠ್ಯಪುಸ್ತಕಗಳಲ್ಲಿಯ ನಿದರ್ಶನಗಳನ್ನು ಗಮನಿಸಿದಾಗ ಪರಿಭಾಷೆಗಳ ಬಳಕೆಯಲ್ಲಿ ಭಿನ್ನತೆ ಕಂಡುಬಂದರೆ ವಿಶ್ಲೇಷಣೆಯಲ್ಲಿ ಸಾಮ್ಯತೆ ಇದೆ. ಪಠ್ಯಗಳಲ್ಲಿ ಬಳಸಿರುವ ರೂಪಗಳು ಆಧುನಿಕ ಭಾಷಾವಿಜ್ಞಾನದಿಂದ ಕಸಿಗೊಂಡ ರೂಪಗಳಾಗಿವೆ.

**೪. ಸಹಚರ ಶಬ್ದಗಳು**

| ಪಠ್ಯಪುಸ್ತಕಗಳು | ಪರಾಮರ್ಶನ ವ್ಯಾಕರಣ ಕೃತಿಗಳು |
|---|---|
| ವಿರೋಧಪದಗಳು | ವಿಪರೀತಾರ್ಥಕ ಸಹಚರಶಬ್ದಗಳು |
| ವಿರೋಧಾರ್ಥಕ ಪದಗಳು | ಮಾರುನುಡಿಗಳು/ಮಾರ್ನುಡಿಗಳು |
| ವಿರುದ್ಧಾರ್ಥಕ ಪದಗಳು | ವಿಷಮಸ್ಥಿತಿ ದರ್ಶಕನುಡಿಗಳು |

ಪುಸ್ತಕದ ಮುಖಪುಟಗಳು ಹಾಳಾಗಿರುವ ಪರಾಮರ್ಶನ ಗ್ರಂಥವೊಂದರಲ್ಲಿ ಸಹಚರ ಶಬ್ದಗಳು ಎಂಬ ಪರಿಭಾಷೆಯನ್ನು ಬಳಸಲಾಗಿದೆ. ಈ ಸಹಚರ ಶಬ್ದಗಳಲ್ಲಿ ವಿಪರೀತಾರ್ಥಕ ಸಹಚರ ಶಬ್ದ, ಏಕಾರ್ಥಕ ಸಹಚರ ಶಬ್ದ ಮತ್ತು ಸಜಾತೀಯ ಸಹಚರ ಶಬ್ದ ಎಂದು ಮೂರು ವಿಧಗಳಾಗಿ ವಿಂಗಡಿಸಲಾಗಿದೆ.

**ಅ) ವಿಪರೀತಾರ್ಥಕ ಸಹಚರ ಶಬ್ದ (ಮಾರುನುಡಿ)**

ವಿಪರೀತ ಎಂಬ ಪದಕ್ಕೆ ವಿರುದ್ಧವಾದುದು, ವ್ಯತಿರಿಕ್ತವಾದುದು ಎಂಬರ್ಥ (ಸಂ.ಕ.ನಿಘಂಟು–ಕ.ಸಾ.ಪ) ಇದೆ. ಅಂದರೆ ವಿರೋಧ ಅಥವಾ ವಿರುದ್ಧವಾದ ಅರ್ಥವನ್ನುಂಟುಮಾಡುವ ಪದಗಳಿಗೆ ವಿಪರೀತಾರ್ಥಕ ಸಹಚರ ಶಬ್ದಗಳೆಂದು ಅರ್ಥೈಸಲಾಗಿದೆ.

ಉದಾಹರಣೆ : ಅಳು – ನಗು, ಅಜ – ಗಜ, ಅರ್ಥ – ಅನರ್ಥ, ಅಗ್ಗ – ತುಟ್ಟಿ, ಉದಯ – ಅಸ್ತ, ಏಳು – ಬೀಳು, ಒಳ – ಹೊರ, ಆದಿ – ಅಂತ್ಯ, ಇಳಿ – ಹತ್ತು, ತಗ್ಗು – ದಿನ್ನಿ, ತಪ್ಪು – ಒಪ್ಪು, ಬೇವು – ಬೆಲ್ಲ, ಮಿತ್ರ – ಶತೃ, ಮೇಲೆ – ಕೆಳಗೆ.

ಈ ನಿದರ್ಶನಗಳನ್ನು ಗಮನಿಸಿದಾಗ ಶಾಲಾಪಠ್ಯಪುಸ್ತಕಗಳಲ್ಲಿ ಇದೇ ಮಾದರಿಯ ನಿದರ್ಶನಗಳಿಗೆ ವಿಪರೀತಾರ್ಥಕ ಸಹಚರಶಬ್ದ ಅಥವಾ ಮಾರುನುಡಿ ಎಂಬ ಪರಿಭಾಷೆಗಳನ್ನು ಬಳಸದೆ ವಿರೋಧ ಪದಗಳು, ವಿರೋಧಾರ್ಥಕ ಪದಗಳು, ವಿರುದ್ಧಾರ್ಥಕ ಪದಗಳು ಎಂಬ ಭಿನ್ನರೂಪಗಳನ್ನು ಬಳಸಲಾಗಿದೆ. ನಾಲ್ಕನೆ ತರಗತಿಯ

'ಪಕ್ಷಿಪ್ರೇಮಿ ಸಲೀಂ ಅಲಿ' ಎರಡನೆ ಪಾಠದ ಭಾಷಾಭ್ಯಾಸದಲ್ಲಿ ಕೊಟ್ಟಿರುವ ಪದಗಳಿಗೆ ವಿರುದ್ಧಾರ್ಥ ಬರೆಯಿರಿ ಎಂದು ಕೇಳಲಾಗಿದೆ.

ಉದಾಹರಣೆ

ಸ್ವೀಕರಿಸು x ______ ಉದ್ಯೋಗ x ______

ಪ್ರೀತಿ x ______ ಆರೋಗ್ಯ x ______

ಪ್ರಾರಂಭ x ______ ಸ್ವದೇಶ x ______

ಈ ವಿರುದ್ಧಾರ್ಥಕ ನುಡಿಗಳು ಎರಡು ಪದಗಳಿದ್ದು ಒಂದರ ವಿರುದ್ಧಾರ್ಥ ಕೊಡುವ ಇನ್ನೊಂದು ಪದವಿರುತ್ತದೆ. ಕಾರಣ ಇವುಗಳನ್ನು ವಿರುದ್ಧಾರ್ಥಕ ಜೋಡುನುಡಿಗಳೆಂದು ಹೇಳಲಾಗುತ್ತದೆ. ಇವುಗಳನ್ನು ಅಧ್ಯಯನದ ಅನುಕೂಲಕ್ಕಾಗಿ ಪ್ರಾಸ ಸಹಿತ, ಪ್ರಾಸ ರಹಿತ ಮತ್ತು ಉಪಸರ್ಗ ಸೇರಿದ ವಿರುದ್ಧಾರ್ಥಕ ನುಡಿಗಳೆಂದು ವಿಂಗಡಿಸಿ ಹೇಳುವುದು ರೂಢಿಯಲ್ಲಿದೆ.

**ಆ) ಏಕಾರ್ಥಕ ಸಹಚರಶಬ್ದ (ಜೋಡುನುಡಿ)**

ಪರಾಮರ್ಶನ ಗ್ರಂಥಗಳಲ್ಲಿ ೧. ಏಕಾರ್ಥಕ ಸಹಚರಶಬ್ದ ೨. ಸಜಾತೀಯ ಸಹಚರಶಬ್ದ ಎಂಬ ಪರಿಭಾಷೆಗಳನ್ನು ಬಳಸಲಾಗಿದೆ. ಶಾಲಾ ಪಠ್ಯಪುಸ್ತಕಗಳಲ್ಲಿ ಏಕಾರ್ಥಕ ಸಹಚರಶಬ್ದಕ್ಕೆ ಬದಲಾಗಿ ಜೋಡುನುಡಿ ಎಂಬ ರೂಪವನ್ನು ಬಳಸಲಾಗಿದೆ. ಇಲ್ಲಿ ಬಳಸಿರುವ ಪರಿಭಾಷೆಗಳಲ್ಲಿ ಭಿನ್ನತೆ ಕಂಡುಬಂದರೆ ಅವುಗಳ ವಿಶ್ಲೇಷಣೆಯಲ್ಲಿ ಸಾಮ್ಯತೆ ಇದೆ. ಭಾಷೆಯನ್ನು ಪರಿಣಾಮಕಾರಿಯಾಗಿ ಬಳಸುವ ಹಿನ್ನೆಲೆಯಲ್ಲಿ ಒಂದು ಪದದ ಜೊತೆಗೆ ಅದೇ ಅರ್ಥ ಛಾಯೆಯುಳ್ಳ ಅಥವಾ ಅದಕ್ಕೆ ಪೂರಕ ಅರ್ಥದ ಮತ್ತೊಂದು ಪದವನ್ನು ಜೊತೆಗೂಡಿಸಿ ಬಳಸಲಾಗುತ್ತದೆ. ಇಂಥ ನುಡಿಗಳಿಗೆ ಜೋಡುನುಡಿಗಳು, ಜೋಡುಪದಗಳು, ಸಾಮ್ಯಪದಗಳು ಎಂದು ಪಠ್ಯಪುಸ್ತಕಗಳು ವಿಶ್ಲೇಷಿಸುತ್ತವೆ. ಇಲ್ಲಿ ಬಳಕೆಯಾದ ಪರಿಭಾಷೆಗಳಲ್ಲಿ ಭಿನ್ನತೆ ಕಂಡುಬಂದರೆ, ಸೂತ್ರ/ನಿದರ್ಶನಗಳಲ್ಲಿ ಸಾಮ್ಯತೆ ಇದೆ. ಒಂದೇ ಅರ್ಥದ ಜೋಡುನುಡಿಗಳಿಗೆ ಏಕಾರ್ಥಕ ಸಹಚರಶಬ್ದ ಎಂಬ ಪರಿಭಾಷೆ ಬಳಸಿದರೆ, ಒಂದೇ ಜಾತಿಗೆ ಸೇರುವ ಜೋಡುನುಡಿಗಳನ್ನು ಸಜಾತೀಯ ಸಹಚರಶಬ್ದಗಳೆಂದು ಗುರುತಿಸಲಾಗಿದೆ.

ಉದಾಹರಣೆ ಏಕಾರ್ಥಕ ಸಹಚರಶಬ್ದಕ್ಕೆ : ಮಾನ – ಮರ್ಯಾದೆ, ಪದವಿ – ಪಟ್ಟ, ಕ್ರಿಮಿ – ಕೀಟ, ಶ್ರದ್ಧಾ – ಭಕ್ತಿ, ಗಂಟು – ಮೋಟೆ, ಅಲ್ಪ – ಸ್ವಲ್ಪ, ಚಾರ – ಚೂರು, ಕಾಗದ – ಪತ್ರ ಇತ್ಯಾದಿ.

ಮಾತಿಗೆ ಜೋರು ಬರುವುದಕ್ಕಾಗಿ ಧ್ವನಿಸ್ವಾಮ್ಯವುಳ್ಳ ಅರ್ಥವಿಲ್ಲದ ಶಬ್ದಗಳು ಕೂಡಿ ಆದ ಜೋಡುನುಡಿಗಳು.

ಉದಾಹರಣೆ

| | | |
|---|---|---|
| ಕಾಡು–ಮೇಡು | ಕಾಯಿ–ಪಲ್ಯ | ಠಕ್ಕು–ಠೌಳಿ |
| ನುಚ್ಚು –ನುರಿ | ತಾಳ–ಮೇಳ | ಹಳ್ಳ–ಕೊಳ್ಳ |
| ಪೂಜೆ–ಪುನಸ್ಕಾರ | ಕಳ್ಳರು–ಕಾಕರು | ದೇವರು–ದಿಂಡರು |
| ಸಂದಿ–ಗೊಂದಿ | ಮುಚ್ಚು–ಮರೆ | ನೀರು–ನಿಡಿ. |

ಇ) ಸಜಾತೀಯ ಸಹಚರಶಬ್ದ (ಜೋಡುನುಡಿ)

| | | |
|---|---|---|
| ಹಾಲು–ಮೊಸರು | ತಿಂಡಿ–ತೀರ್ಥ | ತಂದೆ–ತಾಯಿ |
| ಹಾವು–ಚೇಳು | ಹಬ್ಬ–ಹುಣ್ಣಿಮೆ | ಯಜ್ಞ–ಯಾಗ |
| ಛತ್ರ–ಚಾಮರ | ನಾಯಿ–ನರಿ | ಕಾಳು–ಕಡಿ |

ನಾಲ್ಕನೆ ತರಗತಿಯ ಮಂಗನ ಮದುವೆ ೧೩ನೆ ಪದ್ಯದ ಭಾಷಾಭ್ಯಾಸದಲ್ಲಿ ಕೊಟ್ಟಿರುವ ಪದ ಓದಿ ಅದೇ ತೆರನಾದ ಸಾಮ್ಯಪದ ಬರೆಯಿರಿ ಎಂದು ಕೇಳಲಾಗಿದೆ.

ಉದಾಹರಣೆ

| | | | |
|---|---|---|---|
| ಮೃಗ–ಖಗ | __________ | ಶುಕ–ಪಿಕ | __________ |
| ಗಿಡ–ಗಂಟಿ | __________ | ಕಾಡು–ಮೇಡು | __________ |
| ಪೈರು–ಪಚ್ಚೆ | __________ | ಮರ–ಮುಟ್ಟು | __________ |

೫. ಅನೇಕಾರ್ಥಕ ಶಬ್ದಗಳು

| ಪಠ್ಯಪುಸ್ತಕಗಳು | ಪರಾಮರ್ಶನ ವ್ಯಾಕರಣ ಗ್ರಂಥಗಳು |
|---|---|
| ಅನೇಕಾರ್ಥಕ ಪದಗಳು | ಅನೇಕಾರ್ಥಕ ಪದಗಳು |
| ನಾನಾರ್ಥಕ ಪದಗಳು | ಭಿನ್ನಾರ್ಥಕ ಪದಗಳು |
| ಬೇರೆಬೇರೆ ಅರ್ಥಗಳು | |

ಅನೇಕ ಎಂದರೆ ಒಂದಕ್ಕಿಂತ ಹೆಚ್ಚು ಎಂದರ್ಥ. ಒಂದಕ್ಕಿಂತ ಹೆಚ್ಚು ಅರ್ಥಗಳನ್ನು ಹೊಂದಿರುವ ಶಬ್ದಗಳನ್ನು ಅನೇಕಾರ್ಥಕ ಶಬ್ದಗಳೆಂದು ಕರೆಯಲಾಗಿದೆ.

ಉದಾಹರಣೆ

೧. ಅಕ್ಷರ : ಬ್ರಹ್ಮ, ವಿಷ್ಣು, ವರ್ಣ, ಗಗನ, ಮೋಕ್ಷ, ಸತ್ಯ.

೨. ದಂಡ : ಕೋಲು, ಶಿಕ್ಷೆ, ವ್ಯರ್ಥ, ಉಪಾಯ, ಸೈನ್ಯ.

೩. ದ್ವಿಜ : ಬ್ರಾಹ್ಮಣ, ಪಕ್ಷಿ, ಹಲ್ಲು, ಹಾವು, ನಕ್ಷತ್ರ, ಚಂದ್ರ.

೪. **ಸೋಮ** : ಚಂದ್ರ, ಅಮೃತ, ನೀರು, ಆಕಾಶ, ಶ್ರೇಷ್ಠ.

ಶಾಲಾ ಪಠ್ಯಪುಸ್ತಕಗಳಲ್ಲಿ ಅನೇಕಾರ್ಥಕ ಪದಗಳು, ನಾನಾರ್ಥಕ ಪದಗಳು, ಬೇರೆಬೇರೆ ಅರ್ಥಗಳು ಎಂಬ ರೂಪಗಳನ್ನು ಬಳಸಲಾಗಿದೆ. ಇಲ್ಲಿ ಬಳಸಲಾಗಿರುವ ಪರಿಭಾಷೆಗೆ ಬಳಕೆಯಲ್ಲಿ ಭಿನ್ನತೆ ಕಂಡುಬಂದರೆ, ವಿಶ್ಲೇಷಣೆಯಲ್ಲಿ ಸಾಮ್ಯತೆ ಇರುವುದು ಕಂಡುಬರುತ್ತದೆ. ಅಂದರೆ ಒಂದೇ ಶಬ್ದವು ವಿಶಿಷ್ಟ ಸಂದರ್ಭ, ಸನ್ನಿವೇಷಗಳ ಹಿನ್ನೆಲೆಯಲ್ಲಿ ಬೇರೆಬೇರೆ ಅರ್ಥಗಳು ಹೊರಹೊಮ್ಮುತ್ತವೆ. ಹೀಗಾಗಿ ಅನೇಕ ಸಲ ಒಂದು ಶಬ್ದದ ನಿರ್ಧಿಷ್ಟ ಅರ್ಥವನ್ನು, ಸಂದರ್ಭದ ವಿಶೇಷವನ್ನು ಗಮನಿಸಿಯೇ ಹೇಳಬೇಕಾಗುತ್ತದೆ. ಭಾಷೆಯ ಪರಿಣತಿ ಹಾಗೂ ಭಾಷೆಯ ತಿಳುವಳಿಕೆಯನ್ನು ಈ ಪದಗಳು ಸಾಬೀತುಪಡಿಸುತ್ತವೆಂದು ಹೇಳಬಹುದು. ಐದನೆ ತರಗತಿಯ 'ತಿರುಕನ ಕನಸು' ಐದನೆ ಪಾಠದ ಭಾಷಾಭ್ಯಾಸದಲ್ಲಿ ಕೊಟ್ಟಿರುವ ಪದಗಳಿಗೆ ಬೇರೆಬೇರೆ ಅರ್ಥಗಳನ್ನು ಬರೆಯಿರಿ ಎಂದು ಕೇಳಲಾಗಿದೆ.

ಉದಾಹರಣೆ

೧. ಕರಿ : ______ ______ ______ ______

೨. ತೊಡೆ : ______ ______ ______ ______

೩. ತೆರೆ : ______ ______ ______ ______

೪. ಕಾಡು : ಅರಣ್ಯ, ಪೀಡಿಸು, ಅನಾಗರೀಕ, ಸ್ಮಶಾನ

ಈ ವಾಕ್ಯಗಳಲ್ಲಿ 'ಕಾಡು' ಪದವನ್ನು ಬೇರೆ ಬೇರೆ ಅರ್ಥಗಳಲ್ಲಿ ಬಳಸಿರುವುದು ಕಂಡುಬರುತ್ತದೆ. ಇದನ್ನೇ ನಾನಾರ್ಥ, ಅನೇಕಾರ್ಥ. ಬೇರೆ ಬೇರೆ ಅರ್ಥ ರೂಪಗಳೆಂದು ವ್ಯಾಖ್ಯಾನಿಸಲಾಗುತ್ತದೆ.

**೬. ಶಬ್ದ ವ್ಯುತ್ಪತ್ತಿ**

| **ಪಠ್ಯಪುಸ್ತಕಗಳು** | **ಪರಾಮರ್ಶನ ವ್ಯಾಕರಣ ಗ್ರಂಥಗಳು** |
|---|---|
| ತದ್ಧಿತಾಂತಗಳು/ತದ್ಧಿತ ಪ್ರತ್ಯಯಗಳು | ಶಬ್ದವ್ಯುತ್ಪತ್ತಿ |

೧೯೪೬ರಲ್ಲಿ ಪಂಡಿತ ಮ, ಪ್ರ, ಪೂಜಾರ ಅವರು ಕನ್ನಡ ನುಡಿಗನ್ನಡಿ ಭಾಗ – ೨ ಎಂಬ ಪರಾಮರ್ಶನ ವ್ಯಾಕರಣ ಗ್ರಂಥದಲ್ಲಿ 'ಶಬ್ದವ್ಯುತ್ಪತ್ತಿ' ಎಂಬ ಪರಿಭಾಷೆಯನ್ನು ಬಳಕೆ ಮಾಡಿದ್ದಾರೆ. ಇಲ್ಲಿ ಉತ್ಪತ್ತಿ ಎಂದರೆ ಶಬ್ದಗಳು ಹೇಗೆ ಉಂಟಾದವೆಂಬುದನ್ನು ತಿಳಿದುಕೊಳ್ಳುವುದಾಗಿದೆ. ಲೇಖಕರೇ ಹೇಳುವಂತೆ ಮೂಲ ಶಬ್ದಗಳಿಗೆ ಹೊಸ (ಶಬ್ದ)

ನಾಮಗಳನ್ನು ರಚಿಸಿಕೊಳ್ಳುವ ವಿಷಯದಲ್ಲಿ, ಹಿಂದಿನವರು ಅನುಸರಿಸುತ್ತ ಬಂದಿರುವ ದಾರಿಯನ್ನು ಮಾತ್ರ ತೋರಿಸುವುದು. ನಾಮ, ಧಾತು ಇವುಗಳಿಗೆ ಪ್ರತ್ಯಯಗಳನ್ನು ಸೇರಿಸುವುದೇ ಶಬ್ದವ್ಯುತ್ಪತ್ತಿ ಎಂದಿದ್ದಾರೆ.

ಉದಾಹರಣೆ

**ಇಗ, ಗ** – ಕನ್ನಡಿಗ (ಕನ್ನಡ+ಇಗ), ಪಟ್ಟಣಿಗ, ತೋಟಿಗ, ಬಣಜಿಗ, ಹಡಪಿಗ, ಶಿಲ್ಪಿಗ.

**ವಂತ** – ಹಣವಂತ, ಮಡಿವಂತ, ಗುಣವಂತ, ಸಿರಿವಂತ. (ಉಳ್ಳವ ಎಂದರ್ಥ)

**ವಳ** –ಮಡಿವಳ(ಮಡಿ+ವಳ),ಮಡಿವಾಳ, ಪಡೆವಳ–ಪಡೆ (ಸೈನ್ಯ)+ವಳ (ಸೇನಾಪತಿ)

ಮೇಲೆ ತೋರಿಸಿದಂತ ನಾಮಗಳಿಗೆ ಇ, ಇತಿ ಮೊದಲಾದ ಪ್ರತ್ಯಯಗಳು ಸೇರಿ ಸ್ತ್ರೀವಾಚಕ ನಾಮಗಳಾಗುವುವು.

ಉದಾಹರಣೆ

**ಇ** – ಹುಡುಗಿ (ಹುಡುಗ+ಇ), ಬಡವಿ, ಅರಸಿ, ಕುರುಡಿ, ಕಿವುಡಿ, ಎಬಡಿ, ಬಂಗಾರಿ.

**ಇತಿ(ಇತ್ತಿ)** – ಬೀಗತಿ, ಕನ್ನಡತಿ, ಕಳಸಗಿತ್ತಿ, ಸೂಲಗಿತ್ತಿ, ಮದುವಣಗಿತ್ತಿ, ಒಕ್ಕಲಗಿತ್ತಿ.

ಶಾಲಾಪಠ್ಯಪುಸ್ತಕಗಳಲ್ಲಿ ಶಬ್ದವ್ಯುತ್ಪತ್ತಿ ಪರಿಭಾಷೆಗೆ ಬದಲಾಗಿ ತದ್ಧಿತ ಪ್ರತ್ಯಯಗಳು, ತದ್ಧಿತಾಂತಗಳು ಎಂಬ ಪರಿಭಾಷೆಯನ್ನು ಬಳಸಲಾಗಿದೆ. ಈ ರೂಪಗಳನ್ನು ಪದರಚನೆ ಎಂದು ಸಹ ಬಳಕೆ ಮಾಡಬಹುದು. ಇಲ್ಲಿ ಬಳಸಿರುವ ಪರಿಭಾಷೆಗಳಲ್ಲಿ ಭಿನ್ನತೆ ಇದ್ದು ವಿಶ್ಲೇಷಣೆಯಲ್ಲಿ ಸಾಮ್ಯತೆ ಇರುವುದು ಕಂಡುಬರುತ್ತದೆ. 'ತದ್ಧಿತ' ಎಂಬ ಹೆಸರಿನ ಪ್ರತ್ಯಯಗಳು ಪದಾಂತ್ಯದಲ್ಲಿ ಉಳ್ಳವುಗಳನ್ನು ತದ್ಧಿತಾಂತಗಳೆಂದು ಕರೆಯುವರು. ನಾಮಗಳಿಗೆ ಗಾರ, ಕಾರ, ಇಗ, ವಂತ, ಅಡಿಗ, ಗುಳಿ, ಆರ ಇತ್ಯಾದಿ ತದ್ಧಿತ ಪ್ರತ್ಯಯಗಳನ್ನು ಹಚ್ಚಿದಾಗ ತದ್ಧಿತಾಂತಗಳಾಗುವುವು. ತದ್ಧಿತ ಪ್ರತ್ಯಯಗಳು ನಾಮಪದಗಳಿಗೆ ಸೇರುವಲ್ಲಿ ಮಧ್ಯದ ವಿಭಕ್ತಿ ಪ್ರತ್ಯಯ ಲೋಪವಾಗುವುದು ಸಾಮಾನ್ಯ. ತದ್ಧಿತಾಂತ ರಚನಾ ವಿಶೇಷತೆಯನ್ವಯ ತದ್ಧಿತಾಂತಗಳನ್ನು ತದ್ಧಿತಾಂತನಾಮ, ತದ್ಧಿತ ಭಾವನಾಮಗಳು, ತದ್ಧಿತಾಂತವ್ಯಯಗಳು ಎಂದು ಮೂರು ವಿಧಗಳಾಗಿ ವಿಂಗಡಿಸಿ ಶಾಲಾಪಠ್ಯಗಳಲ್ಲಿ ಕಲಿಸಲಾಗುತ್ತದೆ.

ಏಳನೆ ತರಗತಿಯ 'ಸರ್ಪಗಂಧಿ' ಹತ್ತನೆ ಪಾಠದ ಭಾಷಾಭ್ಯಾಸದಲ್ಲಿ ತದ್ಧಿತಾಂತ ನಾಮಪದ ರಚನಾ ವಿನ್ಯಾಸವನ್ನು ಗಮನಿಸಿ – ಅರ್ಥೈಸಿ ಎಂದು ಹೇಳಲಾಗಿದೆ.

| ತದ್ಧಿತಾಂತನಾಮ | ಪದದ ಅರ್ಥ | | ತದ್ಧಿತ ಪ್ರತ್ಯಯ |
|---|---|---|---|
| ಮಾಲೆಗಾರ | ಮಾಲೆಯನ್ನು ಕಟ್ಟುವವನು | – | ಗಾರ |
| ಓಲೆಕಾರ | ಓಲೆಯನ್ನು ಮಾರುವವನು | – | ಕಾರ |
| ಗಾಣಿಗ | ಗಾಣವನ್ನು ಆಡಿಸುವವನು | – | ಇಗ |
| ಹಣವಂತ | ಹಣವನ್ನು ಉಳ್ಳವನು | – | ವಂತ |
| ಹಾವಾಡಿಗ | ಹಾವನ್ನು ಆಡಿಸುವವನು | – | ಆಡಿಗ |
| ಲಂಚಗುಳಿ | ಲಂಚವನ್ನು ಮಾಡುವವನು | – | ಗುಳಿ |
| ಕುಂಬಾರ | ಕುಂಭವನ್ನು ಮಾಡುವವನು | – | ಆರ |

ಹೀಗೆ ತದ್ಧಿತಾಂತನಾಮಗಳು ಅವುಗಳ ಅರ್ಥ ಮತ್ತು ಅವುಗಳಿಗೆ ಹತ್ತುವ ಪ್ರತ್ಯಯಗಳನ್ನು ಬಿಡಿಸಿ ಕಲಿಸಿಕೊಡುವ ಪ್ರಕ್ರಿಯೆ ಸಮಕಾಲೀನ ಮಾಧ್ಯಮಿಕ/ಪ್ರೌಢಶಾಲಾ ಹಂತದ ಪಠ್ಯಗಳಲ್ಲಿ ಕಂಡುಬರುತ್ತದೆ.

೭. ಪದಗಳ ಕ್ರಮ, ಅನ್ವಯ ಕ್ರಮ

| ಪಠ್ಯಪುಸ್ತಕಗಳು | ಪರಾಮರ್ಶನ ವ್ಯಾಕರಣ ಕೃತಿಗಳು |
|---|---|
| ವಾಕ್ಯ ವಿಭಜನೆ | ಪದಗಳ ಕ್ರಮ |
| | ಅನ್ವಯ ಕ್ರಮ |

ವಾಕ್ಯದಲ್ಲಿ ಮೊದಲು ಕರ್ತೃ, ಆಮೇಲೆ ಕರ್ಮ ಕೊನೆಯಲ್ಲಿ ಕ್ರಿಯಾಪದ ಈ ರೀತಿಯ ವ್ಯಾಕರಣಾಂಶಗಳ ವಾಕ್ಯಾನುಕ್ರಮಣಿಕೆಗೆ/ರಚನೆಗೆ 'ಪದಗಳ ಕ್ರಮ' ಎಂಬ ರೂಪವನ್ನು ೧೯೩೯ರಲ್ಲಿ ಡಾ.ಎ.ಎನ್.ನರಸಿಂಹಯ್ಯನವರು ತಮ್ಮ ಕನ್ನಡ ಪ್ರಥಮವ್ಯಾಕರಣದಲ್ಲಿ ಬಳಸಿದರೆ, ಇದೇ ವಿಶ್ಲೇಷಣೆಗೆ ತೀ.ನಂ.ಶ್ರೀ ಅವರು ೧೯೪೦ರಲ್ಲಿ ತಮ್ಮ ಕನ್ನಡ ಮಧ್ಯಮವ್ಯಾಕರಣದಲ್ಲಿ 'ಅನ್ವಯ ಕ್ರಮ' ಎಂಬ ರೂಪವನ್ನು ಬಳಕೆ ಮಾಡಿರುವುದು ಕಂಡುಬರುತ್ತದೆ.

ಉದಾಹರಣೆ

೧. ಹುಡುಗಿಯು ಹಾಡನ್ನು ಹಾಡಿದಳು.

೨. ಬಡಗಿ ಪೆಟ್ಟಿಗೆಯನ್ನು ಮಾಡುತ್ತಾನೆ.

೩. ನಮ್ಮ ಬಡಗಿ ಸೊಗಸಾದ ಪೆಟ್ಟಿಗೆಯನ್ನು ಮಾಡುತ್ತಾನೆ.

೪. ನಮ್ಮ ಬಡಗಿ ಮರದ ಪೆಟ್ಟಿಗೆಯನ್ನು ಸೊಗಸಾಗಿ ಮಾಡುತ್ತಾನೆ.

ಸಾಮಾನ್ಯವಾಗಿ ಕರ್ತೃಪದವು ವಾಕ್ಯದ ಮೊದಲಲ್ಲಿಯೂ, ಕ್ರಿಯಾಪದವು ವಾಕ್ಯದ ಕೊನೆಯಲ್ಲಿಯೂ ಇರುತ್ತವೆ. ಕರ್ಮವಿದ್ದರೆ ಅದು ಕರ್ತೃಪದ ಕ್ರಿಯಾಪದಗಳಿಗೆ ನಡುವೆ ಬರುತ್ತದೆ. ನಾಮವಿಶೇಷಣ ಕ್ರಿಯಾವಿಶೇಷಣಗಳು ತಮ್ಮ ತಮ್ಮ ವಿಶೇಷ್ಯಗಳ ಹಿಂದೆ ಬರುತ್ತವೆಂಬುದು ಮೇಲಿನ ನಿದರ್ಶನಗಳಿಂದ ತಿಳಿದುಬರುತ್ತದೆ.

ಶಾಲಾಪಠ್ಯಪುಸ್ತಕಗಳಲ್ಲಿ ಪದಗಳ ಕ್ರಮ, ಅನ್ವಯ ಕ್ರಮ ಎಂಬ ರೂಪಗಳನ್ನು ಬಳಸದೆ 'ವಾಕ್ಯವಿಭಜನೆ' ಎಂಬ ಭಿನ್ನ ರೂಪವನ್ನು ಬಳಸಲಾಗಿದೆ. ನಾಲ್ಕನೆ ತರಗತಿಯ ಕನ್ನಡ ಕಲಿ-ನಲಿ ಅಭ್ಯಾಸ ಸಹಿತ ಪಠ್ಯಪುಸ್ತಕದ 'ನಿಸರ್ಗ' ಎಂಬ ೨೨ನೆಯ ಪಾಠದ ಭಾಷಾಭ್ಯಾಸದಲ್ಲಿ ಕೊಟ್ಟಿರುವ ವಾಕ್ಯಗಳನ್ನು ಗಮನಿಸಿ ಹಾಗೂ ಅದರ ವಿಭಜನೆಯನ್ನು ನೋಡಿ ತಿಳಿಯಿರಿ ಎಂದು ಕೊಡಲಾಗಿದೆ.

ಉದಾಹರಣೆ

| ಕರ್ತೃ | ಕರ್ಮ | ಕ್ರಿಯಾಪದ |
|---|---|---|
| ರಾಮ | ರಾವಣನನ್ನು | ಕೊಂದನು |
| ನಾನು | ದೇಶವನ್ನು | ಪ್ರೀತಿಸುತ್ತೇನೆ |
| ಶಂಕರನಿಗೆ | ವಿದ್ಯಾರ್ಥಿವೇತನ | ದೊರೆಯಿತು |

ವ್ಯಾಕರಣ ಪರಿಭಾಷೆಗಳಾದ ಕರ್ತೃ, ಕರ್ಮ, ಕ್ರಿಯಾಪದವೆಂದು ಮೇಲಿನ ವಾಕ್ಯಗಳಲ್ಲಿ ವಿಭಜನೆಮಾಡಿ ಅವುಗಳ ಅನುಕ್ರಮವನ್ನು ತಿಳಿಸಿಕೊಡಲಾಗಿದೆ. ಈ ಕ್ರಮ ಕೆಲವು ಸಂದರ್ಭಗಳಲ್ಲಿ ತಪ್ಪಿಹೋಗುವುದು ಉಂಟು ಎಂಬುದನ್ನು ಪರಾಮರ್ಶನ ಗ್ರಂಥಗಳು ನಿದರ್ಶನಗಳೊಂದಿಗೆ ವಿವರಿಸುತ್ತವೆ. ಆದರೆ ಶಾಲಾಪಠ್ಯಪುಸ್ತಕಗಳಲ್ಲಿ ಪದಗಳ ಕ್ರಮ, ಅನ್ವಯ ಕ್ರಮ ರೂಪಗಳ ಬದಲಾಗಿ, ವಾಕ್ಯವಿಭಜನೆ ಎಂಬ ರೂಪವನ್ನು ಬಳಸಿರುವುದು ಕಂಡುಬರುತ್ತದೆ

**೮. ಪದಸ್ಥಿತಿ, ರೂಪನಿಷ್ಪತ್ತಿ**

| ಪಠ್ಯಪುಸ್ತಕಗಳು | ಪರಾಮರ್ಶನ ವ್ಯಾಕರಣ ಕೃತಿಗಳು |
|---|---|
| ಭಾಷಾಭ್ಯಾಸ | ಪದಸ್ಥಿತಿ<br>ರೂಪನಿಷ್ಪತ್ತಿ |

ಡಾ.ಎ.ಎನ್.ನರಸಿಂಹಯ್ಯನವರು ೧೯೩೮ರಲ್ಲಿ ರಚಿಸಿದ ಕನ್ನಡ ಪ್ರಥಮವ್ಯಾಕರಣದಲ್ಲಿ ಪದಸ್ಥಿತಿ ಎಂಬ ಪರಿಭಾಷೆಯನ್ನು ಬಳಕೆ ಮಾಡಿದ್ದಾರೆ. ವಾಕ್ಯಗಳಲ್ಲಿರುವ ಪದಗಳನ್ನು ಬಿಡಿಸಿ, ಅವುಗಳ ಸ್ವರೂಪವನ್ನು ತಿಳಿಸುವುದಕ್ಕೆ ಪದಸ್ಥಿತಿ

ಎಂದು ಕರೆದರೆ, ಶಿ. ಚ. ನಂದಿಮಠ ಅವರು ೧೯೭೦ರಲ್ಲಿ ರಚಿಸಿದ ಕನ್ನಡ ವ್ಯಾಕರಣ ದರ್ಪಣದಲ್ಲಿ ರೂಪನಿಷ್ಪತ್ತಿ ಎಂಬ ಪರಿಭಾಷೆಯನ್ನು ಬಳಸಿದ್ದಾರೆ. ಭಾಷೆಯನ್ನು ನಾವು ಮಾತನಾಡುವಾಗ ಮತ್ತು ಬರೆಯುವಾಗ, ಕಾವ್ಯಗಳಲ್ಲಿ ಬರುವ ಶಬ್ದಗಳು ವ್ಯಾಕರಣದ ಯಾವ ನಿಯಮಕ್ಕನುಗುಣವಾಗಿ ಸಿದ್ಧವಾಗಿವೆ? ಅವುಗಳ ಕಾರ್ಯ ಮತ್ತು ಪ್ರಯೋಜನಗಳೇನು? ಸಂಬಂಧವೇನು ಎಂಬುದನ್ನು ತಿಳಿಸುವುದೇ ರೂಪನಿಷ್ಪತ್ತಿ ಎನಿಸುವುದು ಎಂದಿದ್ದಾರೆ. ವಾಕ್ಯವೊಂದರಲ್ಲಿಯ ಪದಗಳ ಪದಸ್ಥಿತಿಯನ್ನು ಈ ಕೆಳಗಿನ ಉದಾಹರಣೆಯಲ್ಲಿ ಗಮನಿಸಬಹುದು.

ಉದಾಹರಣೆ ವಾಕ್ಯ

**'ಮಳೆಗಾಲದಲ್ಲಿ ಮೋಡಗಳು ಭೂಮಿಗೆ ಮಳೆಯನ್ನು ಕರೆಯುವುವು'**

**ಮಳೆಗಾಲದಲ್ಲಿ** – ನಾಮಪದ, ನಪುಂಸಕಲಿಂಗ, ಏಕವಚನ, ಸಪ್ತಮಿ ವಿಭಕ್ತಿ.

**ಮೋಡಗಳು** – ನಾಮಪದ, ನಪುಂಸಕಲಿಂಗ, ವಸ್ತುವಾಚಕ, ಪ್ರಥಮಾ ವಿಭಕ್ತಿ, ಬಹುವಚನ, ಇದೇ ಕರ್ತೃ.

**ಮಳೆಯನ್ನು** – ನಾಮಪದ, ವಸ್ತುವಾಚಕ, ನಪುಂಸಕಲಿಂಗ, ದ್ವಿತೀಯ ವಿಭಕ್ತಿ, ಏಕವಚನ, ಇದೇ ಕರ್ತೃ.

**ಕರೆಯುವುವು** – ಕ್ರಿಯಾಪದ, ಸಕರ್ಮಕ, ಭವಿಷ್ಯತ್ಕಾಲ, ಪ್ರಥಮ ಪುರುಷ, ಬಹುವಚನ, ಧಾತು–ಕರೆ.

ಮೇಲಿನ ವಾಕ್ಯದಲ್ಲಿ ಬಂದಿರುವ ವ್ಯಾಕರಣ ಪರಿಭಾಷೆಗಳನ್ನು ಗಮನಿಸಿದಾಗ ಶಾಲಾಪಠ್ಯಪುಸ್ತಕಗಳ ವಾಕ್ಯದಲ್ಲಿ ಕಂಡುಬರುವ ಪದಗಳಲ್ಲಿಯ ವ್ಯಾಕರಣಾಂಶಗಳ ಸ್ವರೂಪವನ್ನು ಕಲಿಸಿಕೊಡದೆ ಶಾಲಾ ಹಂತಗಳಿಗನುಗುಣವಾಗಿ ಪರಿಭಾಷೆಗಳನ್ನು ಸೂತ್ರದೋಪಾದಿಯಲ್ಲಿ ಕಲಿಸಿಕೊಡಲಾಗುತ್ತದೆ. ಅಂದರೆ ವಸ್ತುವಾಚಕಗಳು, ಕ್ರಿಯಾಪದಗಳು, ಕಾಲಗಳು, ಲಿಂಗಗಳು, ಪುರುಷಗಳು, ವಿಭಕ್ತಿ ಪ್ರತ್ಯಯಗಳು, ಗುಣವಿಶೇಷಣಗಳು, ಧಾತುಗಳು, ವಚನಗಳು, ನಾಮಪದಗಳು, ಕ್ರಿಯಾಪದಗಳು ಇತ್ಯಾದಿ ಪರಿಭಾಷೆಗಳನ್ನು ಪಠ್ಯದ ಜೊತೆಗೆ ಭಾಷಾಭ್ಯಾಸದಡಿಯಲ್ಲಿ ಅಳವಡಿಸಿರುವುದು ಕಂಡುಬರುತ್ತದೆ. ಮಕ್ಕಳಿಗೆ ವಾಕ್ಯವನ್ನು ಕಲಿಸುವಾಗ ಕರ್ತೃ, ಕರ್ಮ, ಕ್ರಿಯೆ ಎಂಬ ಅನುಕ್ರಮಣಿಕೆಯನ್ನು ಹೇಳಿಕೊಡುತ್ತೇವೆಯೇ ಹೊರತು, ವಾಕ್ಯದ ಪದಗಳಲ್ಲಿಯ ವ್ಯಾಕರಣಾಂಶಗಳನ್ನು ಹೆಕ್ಕಿ ನೋಡುವ ನೆಲೆಯನ್ನು ಕಲಿಸಿಕೊಡುವುದಿಲ್ಲ. ಸೇವಾಹಿರಿತನ ಹೊಂದಿದ ಶಿಕ್ಷಕರು ಹೇಳುವಂತೆ ಪದಸ್ಥಿತಿ, ರೂಪನಿಷ್ಪತ್ತಿ ಈ ತೆರನಾದ ಪರಿಭಾಷೆಗಳ ವಿಶ್ಲೇಷಣಾ ಮಾದರಿಯನ್ನು ಅಭ್ಯಾಸ ಮಾಡುವ ವಿಧಾನವನ್ನು ಮಕ್ಕಳಿಗೆ ಕಲಿಸಿದರೆ

ವ್ಯಾಕರಣ ಕ್ಲಿಷ್ಟವಾಗುವುದಿಲ್ಲ. ಜೊತೆಗೆ ಮಕ್ಕಳು ಭಾಷಾಜ್ಞಾನವನ್ನು ಪಡೆಯಲು ಹೆಚ್ಚು ಅನುಕೂಲವಾಗುತ್ತದೆ. ಆದರೆ ಈ ವಿಧಾನ ಪ್ರೌಢಶಾಲಾಹಂತಕ್ಕೆ ಸೂಕ್ತವಾದುದು ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ.

**೯. ಅಪಭ್ರಂಶಗಳು**

| ಪಠ್ಯಪುಸ್ತಕಗಳು | ಪರಾಮರ್ಶನ ವ್ಯಾಕರಣ ಕೃತಿಗಳು |
| --- | --- |
| ಪದಗಳ ರೂಪಾಂತರಗಳು | ಅಪಭ್ರಂಶಗಳು |
| ಪದರೂಪಗಳು : ಸಂಸ್ಕೃತರೂಪ/ಕನ್ನಡರೂಪ | ತತ್ಸಮ-ತದ್ಭವಗಳು |
| ತತ್ಸಮ-ತದ್ಭವಗಳು | |

ಡಾ.ಎ.ಎನ್.ನರಸಿಂಹಯ್ಯನವರು ೧೯೩೮ರಲ್ಲಿ ರಚಿಸಿದ ಕನ್ನಡ ಪ್ರಥಮ ವ್ಯಾಕರಣದಲ್ಲಿ 'ಅಪಭ್ರಂಶಗಳು' ಎಂಬ ಪರಿಭಾಷೆಯನ್ನು ಬಳಸಿದರೆ ಇತರ ಪರಾಮರ್ಶನ ಗ್ರಂಥಗಳಲ್ಲಿ ತತ್ಸಮ-ತದ್ಭವ ಎಂಬ ಪರಿಭಾಷೆಯನ್ನು ಬಳಸಿರುವುದು ಕಂಡುಬರುತ್ತದೆ.

ಅಪಭ್ರಂಶ ಎಂದರೆ ಸಂಸ್ಕೃತ ಅಥವಾ ಪ್ರಾಕೃತದಿಂದ ವಿಕಾರಹೊಂದಿ ಬಳಕೆಗೆ ಬಂದಿರುವ ಶಬ್ದ ತದ್ಭವ ಶಬ್ದ ಎಂಬರ್ಥ (ಸಂ.ಕ.ನಿಘಂಟು,ಕ.ಸಾ.ಪ) ಇದೆ. ಸಂಸ್ಕೃತದಿಂದ ವಿಕಾರವನ್ನು ಹೊಂದದೆ ಬಂದ ಶಬ್ದಗಳು ತತ್ಸಮಗಳು. ವಿಕಾರವನ್ನು ಹೊಂದಿ ಬಂದ ಶಬ್ದಗಳು ತದ್ಭವಗಳು. ಈ ವಿಕಾರವು ಶಬ್ದದ ಅಂತ್ಯದಲ್ಲಿಯೂ, ಕೆಲವೆಡೆ ಮಧ್ಯದಲ್ಲಿಯೂ, ಇನ್ನೂ ಕೆಲವೆಡೆ ಮಧ್ಯಾಂತರಗಳೆರಡರಲ್ಲಿಯೂ ಕಂಡುಬರುವುದೆಂಬ ವಿಶ್ಲೇಷಣೆಯನ್ನು ಪರಾಮರ್ಶನ ಗ್ರಂಥಗಳು ಸೂತ್ರರೂಪದಲ್ಲಿ ವಿವರಿಸುತ್ತವೆ. ಶಾಲಾಪಠ್ಯಪುಸ್ತಕಗಳಲ್ಲಿ ಅಪಭ್ರಂಶಗಳು ಎಂಬ ಪರಿಭಾಷೆಗೆ ಬದಲಾಗಿ ತತ್ಸಮ-ತದ್ಭವ ಎಂಬ ರೂಪವನ್ನು ಬಳಸಲಾಗಿದೆ. ತತ್ಸಮ ಎಂದರೆ ಅದಕ್ಕೆ (ಸಂಸ್ಕೃತ) ಸಮನಾದದ್ದು. ತತ್ ಅಂದರೆ ಅದರಿಂದ (ಸಂಸ್ಕೃತ), ಭವ ಅಂದರೆ ಹುಟ್ಟಿದುದು ಎಂಬರ್ಥವನ್ನು ಕೊಡಲಾಗಿದೆ. ಮಾಧ್ಯಮಿಕ ಹಂತದ ಕನ್ನಡ ಪಠ್ಯಗಳಲ್ಲಿ ಆಧುನಿಕ ಭಾಷಾವಿಜ್ಞಾನದಿಂದ ಕಸಿಗೊಂಡ ರೂಪಗಳಾದ ಪದಗಳ ರೂಪಾಂತರಗಳು, ಪದರೂಪಗಳು (ಸಂಸ್ಕೃತರೂಪ/ಕನ್ನಡರೂಪ) ಎಂದು ಬಳಸಿದರೆ, ಪ್ರೌಢಶಾಲಾ ಹಂತದ ಕನ್ನಡ ಪಠ್ಯಗಳಲ್ಲಿ ತತ್ಸಮ - ತದ್ಭವಗಳು ಎಂದು ಬಳಕೆ ಮಾಡಿರುವುದು ಕಂಡುಬರುತ್ತದೆ. ಆರನೆ ತರಗತಿಯ ಮೊದಲನೆಯ ಸೆಮಿಸ್ಟರ್ ಕನ್ನಡ ಕಸ್ತೂರಿ ಪ್ರಥಮ

ಭಾಷೆ ಪಠ್ಯಪುಸ್ತಕದ ಚುಟುಕುಗಳು ಪದ್ಯಪಾಠದ ಅಭ್ಯಾಸ-ಚಟುವಟಿಕೆಯಲ್ಲಿ ಕೊಟ್ಟಿರುವ ಪದಗಳ ರೂಪಾಂತರ ತಿಳಿಯಿರಿ ಎಂದು ಕೊಡಲಾಗಿದೆ.

ಉದಾಹರಣೆ

| ಸಂಸ್ಕೃತ ರೂಪ | | ಕನ್ನಡ ರೂಪ |
|---|---|---|
| ಅಟವೀ | – | ಅಡವಿ |
| ಸ್ವರ್ಗ | – | ಸಗ್ಗ |
| ಪ್ರತಿ | – | ಪಡಿ |
| ಮಲ್ಲಿಕಾ | – | ಮಲ್ಲಿಗೆ |
| ವಲ್ಲಿ | – | ಬಳ್ಳಿ |

ಎಂಟನೆ ತರಗತಿ ಕನ್ನಡ ಕಸ್ತೂರಿ ಪ್ರಥಮ ಭಾಷಾ ಪಠ್ಯಪುಸ್ತಕದ 'ಗಂಗೆಯಲ್ಲಿ ದೀಪಮಾಲೆ' ೨೧ನೆ ಪಾಠದ ಭಾಷಾಭ್ಯಾಸದಲ್ಲಿ ತದ್ಭವ ರೂಪಗಳನ್ನು ಬರೆಯಿರಿ ಎಂದು ಕೇಳಲಾಗಿದೆ. ಉದಾಹರಣೆ : ಮುಕ್ತಿ, ಘೋಷಣೆ, ಶಬ್ದ, ಘಂಟೆ, ಶಂಖ, ಸಂಧ್ಯಾ, ಬ್ರಹ್ಮ, ವಿಸ್ತಾರ, ಋಷಿ, ಶ್ರೀಮಂತ, ಯೋಧ, ನಿತ್ಯ, ಪುಸ್ತಕ, ತ್ಯಾಗ, ಸಂತೋಷ.

## ೧೦. ಆಜ್ಞಾರೂಪ

| ಪಠ್ಯಪುಸ್ತಕಗಳು | ಪರಾಮರ್ಶನ ವ್ಯಾಕರಣ ಕೃತಿಗಳು |
|---|---|
| ಆಜ್ಞಾರ್ಥಕ ಪದಗಳು | ವಿಧ್ಯರ್ಥಕ ರೂಪಗಳು |
| ಆಜ್ಞಾರ್ಥಕ ರೂಪಗಳು | ವಿಧಿರೂಪಗಳು |
| ವಿಧ್ಯರ್ಥಕ ರೂಪಗಳು | ಆಜ್ಞಾರೂಪಗಳು |

ಪರಾಮರ್ಶನ ವ್ಯಾಕರಣ ಕೃತಿಗಳಲ್ಲಿ ಮತ್ತು ಪ್ರೌಢಶಾಲಾ ಹಂತದ ಪಠ್ಯಗಳಲ್ಲಿ ವಿಧ್ಯರ್ಥಕ ಕ್ರಿಯಾಪದಗಳು ಎಂಬ ಪರಿಭಾಷೆಯನ್ನು ಬಳಸಿದರೆ, ಪ್ರಾಥಮಿಕ ಶಾಲಾಹಂತದ ಪಠ್ಯಪುಸ್ತಕಗಳಲ್ಲಿ ವಿಧ್ಯರ್ಥಕ ಪದಗಳಿಗೆ ಪೂರಕವಾಗಿ ಆಜ್ಞಾರ್ಥಕ ಪದಗಳು ಎಂಬ ರೂಪವನ್ನು ಬಳಕೆ ಮಾಡಿರುವುದು ಕಂಡುಬರುತ್ತದೆ. ಇಲ್ಲಿ ಬಳಕೆಯಾದ ಪರಿಭಾಷೆಗಳಲ್ಲಿ ಭಿನ್ನತೆ ಇದ್ದರೆ, ವಿಶ್ಲೇಷಣೆಯಲ್ಲಿ ಸಾಮ್ಯತೆ ಇದೆ. ಮನಸ್ಸಿನಲ್ಲಿರುವ ಇಷ್ಟವನ್ನು ಅಥವಾ ಕೆಲಸಗಳು ಹೀಗೆ ನಡೆಯಬೇಕೆಂಬ ಉದ್ದೇಶವನ್ನು ತಿಳಿಸುವ ಕ್ರಿಯಾಪದಗಳಿಗೆ ವಿಧ್ಯರ್ಥಕ ಕ್ರಿಯಾಪದಗಳು ಎಂದು ಕರೆಯಲಾಗಿದೆ. ವಿಧಿ ಎಂದರೆ ನಿಯಮ, ಅಪ್ಪಣೆ, ಆಜ್ಞೆ ಎಂದರ್ಥ. ಈ ಅರ್ಥದ ಕ್ರಿಯಾಪದಗಳೇ ಆಜ್ಞಾರೂಪಗಳೆಂದು ಪಠ್ಯಗಳು ಮತ್ತು ವ್ಯಾಕರಣ ಕೃತಿಗಳು ವಿಶ್ಲೇಷಣೆ ಮಾಡುತ್ತವೆ.

ಉದಾಹರಣೆ

೧. ರಾಮಾ, ಆ ಹಣ್ಣನ್ನು ಇಲ್ಲಿ ಕೊಡು.

೨. ನೀವು ಮನೆಗೆ ಹೋಗಿ.

೩. ಹುಡುಗಿಯರು ಅಲ್ಲಿ ನಿಲ್ಲಲಿ.

೪. ನೀನು ಅದನ್ನು ಬರೆ.

ಕೊಡು, ಹೋಗಿ, ನಿಲ್ಲಲಿ, ಬರೆ ಎಂಬ ಕ್ರಿಯಾಪದಗಳು ಮನಸ್ಸಿನಲ್ಲಿರುವ ಇಷ್ಟವನ್ನು ಆಯಾ ವಾಕ್ಯಗಳಲ್ಲಿ ತಿಳಿಸುತ್ತವೆ. ಇಲ್ಲಿ ಧಾತುವಿಗೆ ಯಾವ ಕಾಲಸೂಚಕ ಪ್ರತ್ಯಯವೂ ಸೇರಿಲ್ಲ. ಉ, ಇ, ಅಲಿ ಎಂಬ ಆಖ್ಯಾತ ಪ್ರತ್ಯಯಗಳು ಮಾತ್ರ ಸೇರಿವೆ. ಕೊಡು, ಬರೆ ಎಂಬಲ್ಲಿ ಧಾತುರೂಪದಲ್ಲಿಯೇ ಕ್ರಿಯಾಪದರೂಪವು ನಿಂತಿದೆ. ಪ್ರಾಥಮಿಕ ಶಾಲಾ ಕನ್ನಡ ಪಠ್ಯಪುಸ್ತಕಗಳಲ್ಲಿ ಮಾದರಿಯಲ್ಲಿ ಸೂಚಿಸಿರುವಂತೆ ಆಜ್ಞಾರೂಪ ವಾಕ್ಯ ರಚಿಸಿ ಎಂದು ಕೇಳಲಾಗಿದೆ.

ಉದಾಹರಣೆ

ಮಾದರಿ: ನೀನು ಈ ಕೆಲಸ ಮಾಡುತ್ತೀಯಾ?

ನೀನು ಈ ಕೆಲಸ ಮಾಡಲೇಬೇಕು.

೧. ಈ ಪಾಠವನ್ನು ಬರೆಯುವಿಯಾ?

೨. ಅವನು ನಾನು ಹೇಳಿದಂತೆ ಮಾಡಬಹುದೆ?

೩. ನೀನು ನಾಳೆ ಬರುತ್ತೀಯಾ?

ಮೇಲಿನ ವಾಕ್ಯಗಳು ನಿಯಮ, ಅಪ್ಪಣೆ, ಆಜ್ಞೆಯನ್ನು ಪಾಲಿಸುವ ಅರ್ಥದಲ್ಲಿ ರಚಿತವಾಗಿರುವುದರಿಂದ, ಆಜ್ಞೆಯನ್ನು ಹೇಳುವಂಥವುಗಳು ಆಗಿರುವುದರಿಂದ ಆಜ್ಞಾರೂಪವೆಂಬ ಪರಿಭಾಷೆಯನ್ನು ಬಳಸಲಾಗಿದೆ.

**೧೧. ಉಭಯ ಪದಗಳು**

| ಪಠ್ಯಪುಸ್ತಕಗಳು | ಪರಾಮರ್ಶನ ವ್ಯಾಕರಣ ಕೃತಿಗಳು |
|---|---|
| ಕ್ರಿಯಾಪದ ಅರ್ಥ, ನಾಮಪದ ಅರ್ಥ | ಉಭಯ ಪದಗಳು |

ಡಾ.ಕೆ.ಗಣಪತಿಭಟ್, ಶೈಲಜಾ ಎಂ.ಭಟ್ ಅವರು ೧೯೮೫ರಲ್ಲಿ ರಚಿಸಿದ ಕನ್ನಡ ಸರಳವ್ಯಾಕರಣ ಪುಸ್ತಕದಲ್ಲಿ ಉಭಯಪದಗಳು ಎಂಬ ಪರಿಭಾಷೆಯನ್ನು ಬಳಕೆ ಮಾಡಲಾಗಿದೆ. ಉಭಯ ಎಂದರೆ ಎರಡು ಎಂದರ್ಥ. ಇಲ್ಲಿ ವಿರೋಧ ಪದಗಳಾಗಲಿ, ಜೋಡುಪದಗಳಾಗಲಿ, ಸಮಾನ ಪದಗಳಾಗದೆ ಎರಡು ವ್ಯಾಕರಣ ಪರಿಭಾಷೆಗಳನ್ನು ಒಂದೇ ಪದ ಹೊಂದಿರುವಂತಹ ಪದಗಳಿಗೆ ಉಭಯ ಪದಗಳೆಂದು ಕರೆಯಲಾಗಿದೆ.

ಉದಾಹರಣೆ

| ಮೂಲಶಬ್ದ | ನಾಮಪದ | ಕ್ರಿಯಾಪದ |
|---|---|---|
| ಹೊಳೆ | ನದಿ | ಪ್ರಕಾಶಿಸು |
| ಮಡಿ | ಬೀಜ ನೆಡುವ ಸ್ಥಳ | ಸಾಯು |
| ಕುಣಿ | ತಗ್ಗು | ನರ್ತಿಸು |
| ದೊರೆ | ರಾಜ | ಸಿಗು |
| ಎಳೆ | ದಾರ | ಕೀಳುವುದು |

ಮೇಲಿನ ನಿದರ್ಶನಗಳನ್ನು ಗಮನಿಸಿದಾಗ ಒಂದು ಪದವು ನಾಮಪದವಾಗಿಯೂ ಮತ್ತು ಕ್ರಿಯಾಪದವಾಗಿಯೂ ಬಳಕೆಯಾಗಿರುವುದು ಕಂಡುಬರುತ್ತದೆ. ಇತರ ಪರಾಮರ್ಶನ ವ್ಯಾಕರಣ ಕೃತಿಗಳಲ್ಲಿ ಪ್ರತ್ಯೇಕ ಅಧ್ಯಾಯದಡಿಯಲ್ಲಿ ಕರ್ತೃವು ಮಾಡಿದ ಕೆಲಸವನ್ನು ಸೂಚಿಸುವ ಪದಕ್ಕೆ ಕ್ರಿಯಾಪದವೆಂದು ಹೇಳಲಾಗಿದೆ. ಮನುಷ್ಯ, ಪ್ರಾಣಿ, ಸ್ಥಳ, ಪದಾರ್ಥ ಇವುಗಳ ಹೆಸರನ್ನು ಹೇಳುವ ನಾಮಪದಕ್ಕೆ ವಸ್ತುವಾಚಕ ಎಂದು ಹೇಳಲಾಗಿದೆ. ಇದೇ ಮಾದರಿಯಲ್ಲಿ ಶಾಲಾ ಕನ್ನಡ ಪಠ್ಯಪುಸ್ತಕಗಳು ವ್ಯಾಕರಣಾಂಶಗಳನ್ನು ಹೊಂದಿದ್ದರೂ ಉಭಯ ಪದಗಳು ಎಂಬ ರೂಪದಡಿಯಲ್ಲಿ ವಿಶ್ಲೇಷಣೆ ಮಾಡದೆ ಕೆಲವು ಕ್ರಿಯಾಪದಗಳು ನಾಮಪದಗಳಾಗಿ ಬಳಸಲ್ಪಡುತ್ತವೆಂದು ತಿಳಿಸುತ್ತಾ ನಿದರ್ಶನಗಳನ್ನು ಕೊಡಲಾಗಿದೆ. ೪ ಮತ್ತು ೬ನೆಯ ತರಗತಿಯ 'ನಿಸರ್ಗ' ಮತ್ತು 'ಹಿಮಮಣಿ' ಪಾಠಗಳ ಭಾಷಾಭ್ಯಾಸಗಳಲ್ಲಿ ಕ್ರಿಯಾಪದ – ಅರ್ಥ, ನಾಮಪದ – ಅರ್ಥ ನೀಡಲಾಗಿದೆ.

ಉದಾಹರಣೆ

| ಕ್ರಿಯಾಪದ | – | ಅರ್ಥ | ನಾಮಪದ | – | ಅರ್ಥ |
|---|---|---|---|---|---|
| ಅರಸು | – | ಹುಡುಕು | ಅರಸು | – | ರಾಜ |
| ಅರಿ | – | ತಿಳಿ | ಅರಿ | – | ಶತ್ರು, ವೈರಿ |
| ಉಸುರು | – | ಹೇಳು | ಉಸುರು | – | ಜೀವ |
| ಕುಡಿ | – | ಕುಡಿಯುವಿಕೆ | ಕುಡಿ | – | ಚಿಗುರು |
| ಕೆರೆ | – | ತುರುಸು | ಕೆರೆ | – | ನೀರುಸಂಗ್ರಹಸ್ಥಳ |
| ತಾರೆ | – | ತೆಗೆದುಕೊಂಡು ಬಾ | ತಾರೆ | – | ನಕ್ಷತ್ರ |

ಮೇಲಿನ ನಿದರ್ಶನಗಳನ್ನು ಗಮನಿಸಿದಾಗ ವ್ಯಾಕರಣದ ಪರಿಭಾಷೆಗಳಾದ ಕ್ರಿಯಾಪದ, ಮತ್ತು ನಾಮಪದಗಳು ಅರ್ಥದ ದೃಷ್ಟಿಯಿಂದ ಹೇಗೆ ಭಿನ್ನಾರ್ಥವನ್ನು ಪಡೆದುಕೊಳ್ಳುತ್ತವೆಂಬುದನ್ನು ತಿಳಿಸಲಾಗಿದೆ. ಈ ಸ್ವರೂಪವನ್ನು ಶಾಲಾಪಠ್ಯಪುಸ್ತಕಗಳು ನಿದರ್ಶನಗಳ ಮೂಲಕ ಪರಿಚಯಿಸುತ್ತವೆ ಎಂಬುದು ಸ್ಪಷ್ಟವಾಗಿ ಕಂಡುಬರುತ್ತದೆ.

೧೨. ಏಕಪದಗಳು (ಅನೇಕ ಪದಗಳಿಗೆ ಒಂದು ಪದ ಪ್ರಯೋಗ)

| ಪಠ್ಯಪುಸ್ತಕಗಳು | ಪರಾಮರ್ಶನ ವ್ಯಾಕರಣ ಕೃತಿಗಳು |
|---|---|
| ಸೂಕ್ತಪದ/ಒಂದೇಪದ | ಏಕಪದಗಳು |

ಡಾ.ಕೆ.ಗಣಪತಿ ಭಟ್, ಶೈಲಜಾ ಎಂ.ಭಟ್ ಅವರು ೧೯೮೫ರಲ್ಲಿ ರಚಿಸಿದ ಕನ್ನಡ ಸರಳವ್ಯಾಕರಣ ಎಂಬ ಪುಸ್ತಕದಲ್ಲಿ 'ಏಕಪದಗಳು' ಎಂಬ ರೂಪವನ್ನು ಬಳಕೆ ಮಾಡಿದ್ದಾರೆ. ಮಾನವ ಸಭ್ಯತೆಯ ತುತ್ತತುದಿಯನ್ನು ತಲುಪಿದಾಗ, ಅವನ ವೇಷಭೂಷಣ, ಆಚಾರ, ವ್ಯವಹಾರಗಳೊಂದಿಗೆ ಅವನಾಡುವ ಭಾಷೆಯು ವಿಕಾಸವಾಗುತ್ತಾ ಹೋಗುತ್ತದೆ. ಆಗ ಅವನು ದೊಡ್ಡ ವಿಷಯವನ್ನು ಪುಟ್ಟ ಪದದಲ್ಲಿ ಅಡಗಿಸಲೆತ್ನಿಸುತ್ತಾನೆ. ಇದನ್ನೇ 'ಪಿರಿದನ್ನು ಕಿರಿದರಲ್ಲಿ ಪೇಳುವ ಕಲೆ' ಎಂದು ಪಂಡಿತರು ಅಲಂಕೃತ ಭಾಷೆಯಲ್ಲಿ ಇದನ್ನು ಭಾಷಾ ಸಭ್ಯತೆ ಎಂದು ಲೇಖಕರು ಹೇಳುತ್ತಾರೆ.

ಉದಾಹರಣೆ

೧. ಕೈಯಲ್ಲಿ ಚಕ್ರವುಳ್ಳವನು – ಚಕ್ರಪಾಣಿ (ವಿಷ್ಣು)
೨. ಉತ್ತಮ ಕುಲದಲ್ಲಿ ಜನಿಸಿದವನು – ಕುಲೀನ
೩. ದೇವರಲ್ಲಿ ನಂಬಿಕೆವುಳ್ಳವನು – ಆಸ್ತಿಕ
೪. ಶತ್ರುವೇ ಇಲ್ಲದವನು – ಅಜಾತಶತ್ರು
೫. ಇಂದ್ರಿಯಗಳನ್ನು ಗೆದ್ದವನು – ಜಿತೇಂದ್ರಿಯ
೬. ಕಡಿಮೆ ಮಾತಾಡುವವನು – ಮಿತಭಾಷಿ

ಈ ಮೇಲಿನ ನಿದರ್ಶನಗಳನ್ನು ಗಮನಿಸಿದಾಗ ಅನೇಕ ಪದಗಳಿಗೆ ಸೂಕ್ತವಾದ ಒಂದು ಪದವನ್ನು ಪ್ರಯೋಗ ಮಾಡಿರುವುದು ಕಂಡುಬರುತ್ತದೆ. ಇದೇ ರೀತಿ ವಿಶ್ಲೇಷಣಾ ಮಾದರಿಯನ್ನು ಸಮಕಾಲೀನ ಶಾಲಾ ಪಠ್ಯಪುಸ್ತಕಗಳಲ್ಲಿ 'ಏಕಪದ' ಎಂಬ ರೂಪಕ್ಕೆ ಬದಲಾಗಿ ಸೂಕ್ತಪದ, ಒಂದೇಪದ ಎಂಬ ರೂಪಗಳನ್ನು ಬಳಸಿರುವುದು ಕಂಡುಬರುತ್ತದೆ. ನಾಲ್ಕನೆಯ ತರಗತಿಯ ಕನ್ನಡ ಕಲಿ – ನಲಿ ಅಭ್ಯಾಸ ಸಹಿತ

ಪಠ್ಯಪುಸ್ತಕದ 'ಪುಟ್ಟ ಕೌಮುದಿ' ಗದ್ಯಪಾಠ ಎಂಟರ ಭಾಷಾ-ಚಟುವಟಿಕೆಯಲ್ಲಿ ಕೊಟ್ಟಿರುವ ವಿವರಣೆ ಓದಿ ಸೂಕ್ತ ಪದ ರಚನೆ ಮಾಡಿ ಎಂದು ಕೇಳಲಾಗಿದೆ.

ಉದಾಹರಣೆ

**ಮಾದರಿ :** ವಿದ್ಯೆಯನ್ನು ದಾನ ಮಾಡುವುದು – ವಿದ್ಯಾದಾನ

೧. ರಕ್ತವನ್ನು ದಾನ ಮಾಡುವುದು ____________

೨. ಭೂಮಿಯನ್ನು ದಾನ ಮಾಡುವುದು ____________

೩. ಗೋವುಗಳನ್ನು ದಾನ ಮಾಡುವುದು ____________

೪. ತೀರ್ಪು ಕೊಡುವವನು ____________

೫. ಹೆಚ್ಚು ತಿಂಡಿ ತಿನ್ನುವವನು ____________

೬. ದನಗಳನ್ನು ಕಾಯುವವನು ____________

ಮೇಲಿನ ನಿದರ್ಶನಗಳನ್ನು ಗಮನಿಸಿದಾಗ ಪರಾಮರ್ಶನ ಗ್ರಂಥಗಳಲ್ಲಿಯ 'ಏಕಪದ' ಪರಿಭಾಷೆಗೆ ಬದಲಾಗಿ ಸಮಕಾಲೀನ ಪ್ರಾಥಮಿಕ ಶಾಲಾ ಪಠ್ಯಪುಸ್ತಕಗಳಲ್ಲಿ ಮೇಲೆ ಹೇಳಿದ ಸೂಕ್ತಪದ, ಒಂದೇಪದ ಎಂಬ ಆಧುನಿಕ ಭಾಷಾವಿಜ್ಞಾನದಿಂದ ಕಸಿಗೊಂಡ ರೂಪಗಳನ್ನು ಬಳಕೆ ಮಾಡಿರುವುದು ಕಂಡುಬರುತ್ತದೆ. ಪರಿಭಾಷೆಗಳಲ್ಲಿ ಭಿನ್ನತೆ ಇದ್ದರೆ ವಿಶ್ಲೇಷಣೆಯಲ್ಲಿ ಸಾಮ್ಯತೆ ಇದೆ.

**೧೩. ಸಂಘನಾಮಗಳು, ಸಮೂಹವಾಚಕ ಪದಗಳು**

| ಪಠ್ಯಪುಸ್ತಕಗಳು | ಪರಾಮರ್ಶನ ವ್ಯಾಕರಣ ಕೃತಿಗಳು |
|---|---|
| ವಚನಗಳು | ಸಂಘನಾಮಗಳು<br>ಸಮೂಹವಾಚಕ ಪದಗಳು |

ಪಂಜೆಮಂಗೇಶರಾವ್ ಅವರು ೧೯೦೫ರಲ್ಲಿ ರಚಿಸಿದ ಕನ್ನಡ ಮೂಲವ್ಯಾಕರಣದಲ್ಲಿ 'ಸಂಘನಾಮಗಳು' ಎಂಬ ಪರಿಭಾಷೆಯನ್ನು ಬಳಕೆಮಾಡಿದ್ದಾರೆ. ಸಂಘ ಎಂದರೆ ಗುಂಪು ಎಂದರ್ಥ. ಮಂದೆ, ತೋಪು, ಗೊಂಚಲು, ಕೂಟ ಮೊದಲಾದ ಪದಗಳು ವ್ಯಾಕರಣದಲ್ಲಿ ಸಂಘನಾಮಗಳೆಂದೆನಿಸುತ್ತವೆಂದು ಅಭಿಪ್ರಾಯಪಟ್ಟರೆ, ಡಾ.ಕೆ.ಗಣಪತಿ ಭಟ್, ಶೈಲಜ ಎಂ.ಭಟ್ ಅವರು ೧೯೮೫ರಲ್ಲಿ ರಚಿಸಿದ ಕನ್ನಡ ಸರಳವ್ಯಾಕರಣದಲ್ಲಿ ಸಮೂಹವಾಚಕ ಪದಗಳು ಎಂಬ ಪರಿಭಾಷೆಯನ್ನು ಬಳಸಿದ್ದಾರೆ. ಪಂಜೆಯವರ ಮತ್ತು ಭಟ್ ಅವರ ಪರಿಭಾಷೆ ಬಳಕೆಯಲ್ಲಿ ಭಿನ್ನತೆ ಇದ್ದರೆ ವಿಶ್ಲೇಷಣೆಯಲ್ಲಿ ಸಾಮ್ಯತೆ ಇರುವುದು ಕಂಡುಬರುತ್ತದೆ.

ಉದಾಹರಣೆ ಪಂಜೆಯವರ ನಿದರ್ಶನಗಳು

೧. ನರಿಗಳು ಹಗಲಲ್ಲಿ ಹೊರಬರುವುದಿಲ್ಲ, ಕತ್ತಲಾಗುತ್ತಲೇ ಅವುಗಳ ಹಿಂಡುಗಳು ಕೂಗಾಡ ತೊಡಗುತ್ತವೆ.

೨. ನೀನು ಕಲಿಯುವ ವರ್ಗದಲ್ಲಿ ಎಷ್ಟು ಹುಡುಗರಿದ್ದಾರೆ.

೩. ಆ ಹೇಟೆಗೆ ಒಂದು ದೊಡ್ಡ ಬಳಗವು ಇದೆ.

೪. ಕೊತ್ತಳಿಯಲ್ಲಿದ್ದ ಒಂದು ಕಾಗೆಯು ಕಾ ಕಾ ಎನ್ನುತ್ತಲೇ ಎಲ್ಲಾ ಕಾಗೆಗಳು ಅರಚುವುವು.

ಈ ವಾಕ್ಯಗಳಲ್ಲಿಯ ಹಿಂಡುಗಳು, ಹುಡುಗರು, ಬಳಗವು, ಕೊತ್ತಳಿ ಪದಗಳು ಸಮೂಹ, ಗುಂಪು ಎಂಬರ್ಥದ ಜೊತೆಗೆ ಒಂದಕ್ಕಿಂತ ಹೆಚ್ಚು ಎಂಬುದನ್ನು ಸೂಚಿಸುತ್ತವೆ. ಅಲ್ಲದೆ ಗಳು, ಅರು, ಅವು ಎಂಬ ಬಹುವಚನ ಸೂಚಕ ಪ್ರತ್ಯಯಗಳನ್ನು ಹೊಂದಿವೆ. ಆದ್ದರಿಂದ ವಚನ ಪರಿಭಾಷೆಗೆ ಪೂರಕವಾಗಿ ಸಂಘನಾಮಗಳು ಎಂಬ ರೂಪವನ್ನು ಬಳಸಿದ್ದಾರೆನಿಸುತ್ತದೆ.

ಭಟ್ ಅವರ ಸಮೂಹವಾಚಕ ಪದಗಳಿಗೆ ಉದಾಹರಣೆ ದಳ–ಸೈನ್ಯ, ಗುಚ್ಛ–ಪುಷ್ಪ ಸಮೂಹ, ಹಿಂಡು–ಕುರಿಗಳ ಗುಂಪು, ತಂಡ–ಕಳ್ಳರ ಗುಂಪು, ಮಂಡಲ, ನಕ್ಷತ್ರಗುಂಪು, ಯೂಥ–ಆನೆಗಳ ಸಮೂಹ, ಗೊಂಚಲು–ಹಣ್ಣುಗಳು, ಹೊರೆ–ಕಟ್ಟಿಗೆಯ ಕಟ್ಟು, ಮಂದೆ–ಪಶು ಸಮೂಹ. ಸಮೂಹ, ಗುಂಪನ್ನು, ಪ್ರತಿನಿಧಿಸುವ ಅರ್ಥದಲ್ಲಿ ಸಮೂಹವಾಚಕ ಪದಗಳು ಎಂಬ ಪರಿಭಾಷೆಯನ್ನು ಅರ್ಥಕ್ಕನುಗುಣವಾಗಿ ಬಳಸಿರುವುದು ಕಂಡುಬರುತ್ತದೆ. ಮೇಲಿನ ಪರಾಮರ್ಶನ ಗ್ರಂಥಗಳ ಪರಿಭಾಷೆಗಳು ಸಮಕಾಲೀನ ಶಾಲಾಪಠ್ಯಪುಸ್ತಕಗಳಲ್ಲಿ ಕಂಡುಬರುವುದಿಲ್ಲ. ಇವುಗಳಿಗೆ ಪೂರಕವಾಗಿ ಏಕವಚನ, ಬಹುವಚನ ಎಂಬರ್ಥದಲ್ಲಿ ಕಲಿಸುವ ಪ್ರಕ್ರೀಯೆ ಕಂಡುಬರುತ್ತದೆಯೇ ಹೊರತು ಸಂಘನಾಮಗಳು, ಸಮೂಹವಾಚಕ ಪದಗಳು ಎಂಬ ಪರಿಭಾಷೆಗಳಡಿಯಲ್ಲಿ ಕಲಿಸುವುದಿಲ್ಲ.

**೧೪. ಸಮುಚ್ಚಯಗಳು ಮತ್ತು ಭಾವಬೋಧಕಗಳು**

| ಪಠ್ಯಪುಸ್ತಕಗಳು | ಪರಾಮರ್ಶನ ವ್ಯಾಕರಣ ಕೃತಿಗಳು |
|---|---|
| ಅವ್ಯಯಗಳು | ಸಮುಚ್ಚಯಗಳು ಮತ್ತು ಭಾವಬೋಧಕಗಳು |
| ಸಂಬಂಧಸೂಚಕ ಅವ್ಯಯಗಳು | ನಿಪಾತಗಳು |
| ಭಾವಸೂಚಕ ಅವ್ಯಯಗಳು | ಸಂಯೋಜಕಗಳು |

ಪಂಜೆಮಂಗೇಶರಾವ್ ಅವರು ೧೯೦೫ರಲ್ಲಿ ರಚಿಸಿದ ಕನ್ನಡ ಮೂಲವ್ಯಾಕರಣದ ೮ ಮತ್ತು ೩೧ನೆಯ ಪಾಠಗಳಲ್ಲಿ ಸಮುಚ್ಚಯಗಳು ಮತ್ತು ಭಾವಬೋಧಕಗಳು ಎಂಬ ಪರಿಭಾಷೆಗಳನ್ನು ಬಳಕೆ ಮಾಡಿದ್ದಾರೆ. ಎರಡು ಪದಗಳನ್ನಾಗಲಿ ಎರಡು ವಾಕ್ಯಗಳನ್ನಾಗಲಿ ಒಂದಕ್ಕೊಂದು ಜೋಡಿಸುವುದಕ್ಕೆ ಪ್ರಯೋಗವಾಗುವ ಅವ್ಯಯಗಳಿಗೆ ಸುಮುಚ್ಚಯಗಳೆಂದು ಕರೆದಿದ್ದಾರೆ. ಮತ್ತು, ಕೂಡ, ಸಹ, ಆದರೂ, ಆದಾಗ್ಯೂ, ಏಕೆಂದರೆ, ಆಗಲಿ, ಹಾಗೂ, ಆದ್ದರಿಂದ, ಪರಂತು ಮೊದಲಾದ ಪದಗಳು ಸಮುಚ್ಚಯಗಳು.

ಪದಗಳ ಜೋಡಣೆಗೆ ಉದಾಹರಣೆ

೧. ದೇವರನ್ನು ಭಕ್ತಿಯಿಂದ ಮತ್ತು ಪ್ರೀತಿಯಿಂದ ಪ್ರಾರ್ಥಿಸು.

೨. ದೇವರನ್ನು ಭಕ್ತಿಯಿಂದಲೂ ಪ್ರೀತಿಯಿಂದಲೂ ಪ್ರಾರ್ಥಿಸು.

೩. ಅಕ್ಕನು ತಂಗಿಯು ಕೂಡ ಪಾಠಶಾಲೆಗೆ ಹೋಗುತ್ತಾರೆ

ವಾಕ್ಯಗಳ ಜೋಡಣೆಗೆ ಉದಾಹರಣೆ

೧. ಹುಡುಗನು ಆಲಸ್ಯವಾಗಿದ್ದನು, ಆದರೂ ಶಾಲೆಗೆ ಬಂದನು.

೨. ಪ್ರತಾಪನು ಹೆಂಡತಿ ಮಕ್ಕಳನ್ನು ತೊರೆದುಬಿಟ್ಟನು, ಆದಾಗ್ಯೂ ಧೈರ್ಯವನ್ನು ಬಿಡಲಿಲ್ಲ.

೩. ನಾವು ಒಳ್ಳೆಯ ಮಾತುಗಳನ್ನು ಆಡಬೇಕು, ಏಕೆಂದರೆ ನಮ್ಮನ್ನು ಎಲ್ಲರೂ ಮೆಚ್ಚುವರು.

ಇಲ್ಲಿ ಸಮುಚ್ಚಯಗಳು ಪದಗಳನ್ನಾಗಲಿ, ವಾಕ್ಯಗಳನ್ನಾಗಲಿ ಜೋಡಿಸುವುದರಿಂದ ಅವು ಯಾವುದನ್ನು ಜೋಡಿಸುತ್ತವೆಂದು ತಿಳಿಸಲಾಗಿದೆ. ಈ ಸಮುಚ್ಚಯಗಳಿಗೆ ಲಿಂಗ, ವಚನ, ವಿಭಕ್ತಿಗಳು ಬಾರದ್ದರಿಂದ ಅವ್ಯಯಗಳೆಂದು ಹೇಳುತ್ತಾ, ಚಿಂತೆ, ಹರ್ಷ ಮುಂತಾದ ಮನಸ್ಸಿನ ಭಾವಗಳನ್ನು ಹೇಳುವ ಅವ್ಯಯಗಳಿಗೆ ಭಾವಬೋಧಕಗಳೆಂದು ಕರೆದಿದ್ದಾರೆ. ಇವುಗಳು ಕೂಡ ಲಿಂಗ, ವಚನ, ವಿಭಕ್ತಿರೂಪಗಳನ್ನು ಹೊಂದದೆ ಇರುವುದರಿಂದ ಇವುಗಳನ್ನು ಅವ್ಯಯಗಳೆಂದು ಕರೆದಿದ್ದಾರೆ. ಸಮಕಾಲೀನ ಶಾಲಾಪಠ್ಯಪುಸ್ತಕಗಳಲ್ಲಿ ಪಂಜೆಯವರು ಹೇಳಿದ ಪರಿಭಾಷೆಗಳಿಗೆ ಪೂರಕವಾಗಿ ಸಂಬಂಧ ಸೂಚಕ ಅವ್ಯಯ ಮತ್ತು ಭಾವಸೂಚಕ ಅವ್ಯಯ ಎಂದು ವಿಶ್ಲೇಷಣೆ ಮಾಡಲಾಗಿದೆ. ಅಂದರೆ ಅವ್ಯಯಗಳ ಬಗೆಗಳಲ್ಲಿ ಇವೆರಡೂ ಸೇರಿಕೊಂಡಿವೆ. ೯ನೆಯ ತರಗತಿಯ ಕನ್ನಡ ಕಸ್ತೂರಿ ಪ್ರಥಮ

ಭಾಷಾ ಪಠ್ಯಪುಸ್ತಕದ ಕೊನೆಗಿರುವ ವ್ಯಾಕರಣ ಭಾಗದಲ್ಲಿ ಅವ್ಯಯ ಮತ್ತು ಅವುಗಳಲ್ಲಿಯ ಬಗೆಗಳನ್ನು ವಿಶ್ಲೇಷಣೆ ಮಾಡಲಾಗಿದೆ. ಪಂಜೆಯವರು ಸಮುಚ್ಚಯಗಳಿಗೆ ಕೊಟ್ಟಂತಹ ನಿದರ್ಶನಗಳೆಲ್ಲ ಸಂಬಂಧ ಸೂಚಕ ಅವ್ಯಯಗಳಾಗಿವೆ.

ಉದಾಹರಣೆ

೧. ಕೃಷ್ಣನೂ, ರಹೀಮನೂ, ಆಪ್ತ ಮಿತ್ರರು.

೨. ನಾನು ಬಿಜಾಪುರಕ್ಕೆ ಹೋಗಿದ್ದೆ, ಆದರೆ ಗೋಳಗುಮ್ಮಟ ನೋಡುವುದು ಮರೆತೆ.

೩. ಉಷಾ ಬರಲಿಲ್ಲ, ಆದ್ದರಿಂದ ಅನುಶ್ರೀಯೂ ಬರಲಿಲ್ಲ.

ಮೇಲಿನ ನಿದರ್ಶನಗಳಲ್ಲಿ ಊ, ಆದರೆ, ಆದ್ದರಿಂದ ಎಂಬ ಅವ್ಯಯಗಳು ಸಂಬಂಧವನ್ನು ಸೂಚಿಸುತ್ತವೆ. ವಾಕ್ಯರಚನೆಯಲ್ಲಿ ಇವುಗಳನ್ನು ಸಂಯೋಜಕಗಳೆಂತಲೂ ಕರೆಯುವರು. ಭಾವಬೋಧಕಗಳು ಭಾವಗಳನ್ನು ವ್ಯಕ್ತಪಡಿಸುವ ಅವ್ಯಯಗಳಾದ್ದರಿಂದ ಭಾವಸೂಚಕ ಅವ್ಯಯಗಳೆಂದು ವಿವರಿಸಲಾಗಿದೆ. ಉದಾಹರಣೆ: ಅಯ್ಯೋ, ಆಹಾ!, ಛೀ, ಥೂ, ಎಲೆಲೇ, ಓಹೋ, ಭಲೇ, ಆಹಹಾ! ಇತ್ಯಾದಿ. ಈ ನಿದರ್ಶನಗಳನ್ನು ಗಮನಿಸಿದಾಗ ಪದ ಮತ್ತು ವಾಕ್ಯಗಳ ಜೋಡಣೆಯಲ್ಲಿ ಇವುಗಳು ಬಳಕೆಯಾಗಿರುವುದು ಸಮಕಾಲೀನ ಶಾಲಾಪಠ್ಯಪುಸ್ತಕಗಳಲ್ಲಿ ಕಂಡುಬರುತ್ತದೆ.

ಡಾ.ಕಾಂತರೈ,ವಿದ್ವಾನ್ ಅವರು ೧೯೫೫ರಲ್ಲಿ ರಚಿಸಿದ 'ಪ್ರೌಢಶಾಲಾವ್ಯಾಕರಣ ಮತ್ತು ಛಂದೋಲಂಕಾರಸಾರ'ದಲ್ಲಿ ಭಾವಬೋಧಕಗಳನ್ನು 'ನಿಪಾತಗಳು' ಎಂದು ಕರೆದಿದ್ದಾರೆ. ಸಮಕಾಲೀನ ಶಾಲಾಪಠ್ಯಪುಸ್ತಕಗಳು 'ನಿಪಾತಗಳು' ಪರಿಭಾಷೆಗೆ ಬದಲಾಗಿ ಭಾವಸೂಚಕ ಅವ್ಯಯಗಳೆಂದು ವಿವರಿಸುತ್ತವೆ. ಅವ್ಯಯಗಳಲ್ಲಿಯ ಕೆಲವನ್ನು ಪ್ರತ್ಯೇಕಿಸಿ ನಿಪಾತವೆಂಬ ಸಂಜ್ಞೆಯನ್ನು ಹೇಳಿರುವುದು ಏಕೆಂದರೆ ಇವುಗಳ ಮುಂದೆ ಸ್ವರ ಬಂದರೂ ಸಂಧಿ ಕಾರ್ಯಗಳು ಬರುವುದಿಲ್ಲ ಎಂದು ಲೇಖಕರು ಅಭಿಪ್ರಾಯಪಟ್ಟಿದ್ದಾರೆ. ಪರಿಭಾಷೆಗಳಲ್ಲಿ ಭಿನ್ನತೆ ಇದ್ದರೆ, ವಿಶ್ಲೇಷಣೆಯಲ್ಲಿ ಸಾಮ್ಯತೆ ಕಂಡುಬರುತ್ತದೆ.

**೧೫. ಉಪಸರ್ಗ**

| ಪಠ್ಯಪುಸ್ತಕಗಳು | ಪರಾಮರ್ಶನ ವ್ಯಾಕರಣ ಕೃತಿಗಳು |
|---|---|
| ಅವ್ಯಯಗಳು | ಉಪಸರ್ಗ |
| ಉಪಸರ್ಗ ಸೇರಿದ ವಿರುದ್ಧ ಪದಗಳು | |

ಪಂಜೆಮಂಗೇಶರಾವ್ ಅವರು ೧೯೦೫ರಲ್ಲಿ ರಚಿಸಿದ ಕನ್ನಡ ಮೂಲವ್ಯಾಕರಣದಲ್ಲಿ ಉಪಸರ್ಗ ಎಂಬ ಪರಿಭಾಷೆಯನ್ನು ಬಳಸಿದ್ದಾರೆ. ವಿಭಕ್ತಿ ಪ್ರತ್ಯಯಗಳ ಸ್ಥಳದಲ್ಲಿ

ನಾಮಪದಗಳ ಮೇಲೆ ಹತ್ತುವ ಅವ್ಯಯಗಳಿಗೆ ಉಪಸರ್ಗಗಳೆಂದು ಕರೆದಿದ್ದಾರೆ. ಹತ್ತಿರ, ಸಂಗಡ, ಒಡನೆ, ಒಂದಿಗೆ, ಸಲುವಾಗಿ, ತನಕ, ವರೆಗೆ, ಮಟ್ಟಿಗೆ, ಹಾಗೆ, ಅಂತೆ, ಹೊರತು, ಕುರಿತು, ಮೇರೆಗೆ, ಮುಖಾಂತರ, ಒಳಗೆ ಮೊದಲಾದ ಶಬ್ದಗಳು ಉಪಸರ್ಗವ್ಯಯಗಳೆಂದು ಅಭಿಪ್ರಾಯಪಟ್ಟಿದ್ದಾರೆ. ಪಂಜೆಯವರು ಮೇಲೆ ಹೇಳಿದ ನಿದರ್ಶನಗಳನ್ನು ಗಮನಿಸಿದಾಗ ಶಾಲಾಪಠ್ಯಪುಸ್ತಕಗಳಲ್ಲಿಯ ಅವ್ಯಯ ಪ್ರಕಾರಗಳಲ್ಲಿ ಕಂಡುಬರುವ ನಿದರ್ಶನಗಳಾಗಿವೆ. ಉಪಸರ್ಗವ್ಯಯಗಳೆಂದು ಬಳಸದೆ ಪ್ರೌಢಶಾಲಾ ಕನ್ನಡ ಪಠ್ಯಗಳಲ್ಲಿ (ಒಂಬತ್ತನೆ ತರಗತಿಯ ಕನ್ನಡ ಕಸ್ತೂರಿ ವ್ಯಾಕರಣ ಭಾಗದಲ್ಲಿ) ಅವ್ಯಯಗಳು ಎಂಬ ಪರಿಭಾಷೆಯಲ್ಲಿ ವಿಶ್ಲೇಷಣೆ ಮಾಡಲಾಗಿದೆ.

ಡಾ.ಕೆ.ಗಣಪತಿ ಭಟ್, ಶೈಲಜಾ ಎಂ.ಭಟ್ ಅವರು ೧೯೮೫ರಲ್ಲಿ ರಚಿಸಿದ ಕನ್ನಡ ಸರಳವ್ಯಾಕರಣದಲ್ಲಿ 'ಉಪಸರ್ಗ' ಎಂಬ ಪರಿಭಾಷೆಯನ್ನು ಬಳಕೆ ಮಾಡಿದ್ದಾರೆ. ಮನುಷ್ಯ, ಕಡಿಮೆ ಕಾಲದಲ್ಲಿ, ಕಡಿಮೆ ಪದ ಬಳಕೆಯಲ್ಲಿ, ಹೆಚ್ಚು ಅರ್ಥದ ಮಾತುಗಳನ್ನು ಬಳಸಲಿಚ್ಚಿಸುತ್ತಾನೆ. ಇದಕ್ಕಾಗಿ ಪದದ ಹಿಂದೆ ಕೆಲವು ಪದಾಂಶವನ್ನು ಸೇರಿಸಿ ಪದದ ವಾಸ್ತವಿಕ ಅರ್ಥದಲ್ಲಿ ಬದಲಾವಣೆಯನ್ನು ಮಾಡುತ್ತಾನೆ. ಈ ಪದಾಂಶವನ್ನು ಉಪಸರ್ಗವೆಂದು ಹೆಸರಿಸಿದ್ದಾರೆ.

ಉದಾಹರಣೆ

**ಅತಿ** – (ಹೆಚ್ಚು) – ಅತಿಶಯ, ಅತ್ಯಂತ, ಅತ್ಯಾಚಾರ, ಅತ್ಯುಕ್ತಿ, ಅತಿವ್ಯಾಪ್ತಿ.

**ಅನು** – (ಅನಂತರ, ಸಮಾನ) – ಅನುಕರಣ, ಅನುಚರ, ಅನುಪಾತ, ಅನುಕೂಲ.

**ಉತ್** – (ಹೆಚ್ಚಾಗು) – ಉತ್ಕರ್ಷ, ಉನ್ನತಿ, ಉತ್ಸಾಹ, ಉದ್ಯಮ.

**ಅಪ** – (ಅಲ್ಪತೆ, ನ್ಯೂನತೆ) – ಅಪಮಾನ, ಅಪಹರಣ, ಅಪಕಾರ, ಅಪವ್ಯಯ.

ಮೇಲಿನ ನಿದರ್ಶನಗಳನ್ನು ಗಮನಿಸಿದಾಗ ಧಾತುಗಳ ಹಿಂದೆ ಸೇರುವ ಅಕ್ಷರ, ಅಕ್ಷರ ಸಮುದಾಯವೆ ಉಪಸರ್ಗವಾಗಿದೆ. ನಾಮಗಳಿಗೆ ಆದಿಯಲ್ಲಿ ಸೇರುವ ಪ್ರತ್ಯಯಗಳೇ ಉಪಸರ್ಗಗಳೆನಿಸುತ್ತವೆ. ವಿಭಕ್ತಿ ಪ್ರತ್ಯಯಗಳು ಕೇವಲ ಎಂಟು ಇದ್ದರೆ, ಕಾಲಸೂಚಕ ಪ್ರತ್ಯಯಗಳು ಕೇವಲ ಮೂರು ಇದ್ದರೆ, ತದ್ಧಿತ ಪ್ರತ್ಯಯಗಳು, ಆಖ್ಯಾತ ಪ್ರತ್ಯಯಗಳು ಮತ್ತು ಉಪಸರ್ಗ ಪ್ರತ್ಯಯಗಳು ಸಂಖ್ಯೆಯಲ್ಲಿ ಅಸಂಖ್ಯಾತವಾಗಿವೆ. ತದ್ಧಿತ ಪ್ರತ್ಯಯಗಳಂತೆ ಉಪಸರ್ಗ ಪ್ರತ್ಯಯಗಳು ಸಹ ನಾಮದ ಮೂಲ ಅರ್ಥದಲ್ಲಿ ಅರ್ಥವ್ಯತ್ಯಾಸವನ್ನು ಉಂಟುಮಾಡುತ್ತವೆ. ಶಬ್ದದ ಆದಿಯಲ್ಲಿ ಸೇರುವ ಉಪಸರ್ಗ ಪ್ರತ್ಯಯಗಳ ಬಳಕೆಯು ಕನ್ನಡ ಭಾಷೆಯಲ್ಲಿ ಹೇರಳವಾಗಿದೆ. ಉದಾಹರಣೆ ಅ, ಅಪ,

ನಿರ್, ನಿಸ್, ಕು, ಸು, ಸತ್, ದುರ್, ಅವ, ವಿ, ಉ, ಅನ್, ನಿ ಮುಂತಾದ ಈ ಉಪಸರ್ಗಗಳು ಸಾಮಾನ್ಯವಾಗಿ ಶಬ್ದಗಳ ಆದಿಯಲ್ಲಿ ಇರುತ್ತವೆ.

**ಅ** – ಅಸುರ, ಅದೃಶ್ಯ, ಅಜ್ಞಾನ, ಅಮೃತ, ಅಧರ್ಮ, ಅನೀತಿ, ಅಶಾಂತಿ.

**ನಿರ್** – ನಿರುದ್ಯೋಗಿ, ನಿರಂಕುಶ, ನಿರಾಭಿಮಾನಿ, ನಿರುತ್ಸಾಹ, ನಿರ್ಜೀವ, ನಿರ್ಭಯ.

**ಕು** – ಕುರೂಪಿ, ಕುಮಾರ್ಗ, ಕುಚೇಷ್ಟೆ, ಕುಪ್ರಸಿದ್ಧ, ಕುಕಲ್ಪನೆ.

**ಸತ್** – ಸಜ್ಜನ, ಸಚ್ಚಾರಿತ್ರ, ಸದ್ಭಕ್ತಿ, ಸನ್ಮಿತ್ರ, ಸದುದ್ದೇಶ.

**ದುರ್** – ದುರ್ಜನ, ದುರಹಂಕಾರ, ದುರ್ಗತಿ, ದುರಾಲೋಚನೆ, ದುರ್ಮಾರ್ಗ.

ಮೇಲಿನ ನಿದರ್ಶನಗಳನ್ನು ಗಮನಿಸಿದಾಗ ಶಬ್ದದ ಆದಿಯಲ್ಲಿ ಉಪಸರ್ಗ ಪ್ರತ್ಯಯಗಳು ಸೇರಿ ಉಪಸರ್ಗ ಪದಗಳಾಗಿವೆ. ವಿಭಕ್ತಿ ಪ್ರತ್ಯಯಗಳು, ಆಖ್ಯಾತ ಪ್ರತ್ಯಯಗಳು ಮತ್ತು ತದ್ಧಿತ ಪ್ರತ್ಯಯಗಳು ಶಬ್ದದ ಕೊನೆಯಲ್ಲಿ ಸೇರಿ ನಾಮಪದ, ಕ್ರಿಯಾಪದ ಹಾಗೂ ತದ್ಧಿತ ಪದಗಳನ್ನು ನಿರ್ಮಾಣ ಮಾಡುತ್ತವೆ.

ಶಾಲಾಪಠ್ಯಪುಸ್ತಕಗಳಲ್ಲಿ ವಿರುದ್ಧಾರ್ಥಕ ಪದಗಳನ್ನು ಅಧ್ಯಯನದ ಅನುಕೂಲಕ್ಕಾಗಿ ಉಪಸರ್ಗಸೇರಿದ ವಿರುದ್ಧಾರ್ಥಕ ಪದಗಳೆಂದು ವಿಭಾಗಮಾಡಿ ಕಲಿಸುವ ಪ್ರಕ್ರಿಯೆ ಕಂಡುಬರುತ್ತದೆ. ಈ ಪ್ರಕಾರದ ಎರಡೂ ಶಬ್ದಗಳಲ್ಲಿ ಒಂದಕ್ಕೆ ಇಲ್ಲವೆ ಎರಡೂ ಶಬ್ದಗಳಿಗೆ ಉಪಸರ್ಗ ಸೇರಿ ವಿರುದ್ಧಾರ್ಥ ಕೊಡುತ್ತವೆ. ಸಾಮಾನ್ಯವಾಗಿ ಶಬ್ದಗಳ ಆದಿಯಲ್ಲಿ ಬಂದು ಅರ್ಥವಿರೋಧ ತೋರುತ್ತವೆ.

ಉದಾಹರಣೆ

| | | |
|---|---|---|
| ಚೇತನ X ಅಚೇತನ | ಆಸೆ X ನಿರಾಸೆ | ಆರೋಗ್ಯ X ಅನಾರೋಗ್ಯ |
| ನ್ಯಾಯ X ಅನ್ಯಾಯ | ಸದ್ಗುಣ X ದುರ್ಗುಣ | ಸಫಲ X ವಿಫಲ |
| ಸುರೂಪಿ X ಕುರೂಪಿ | ಸಜೀವ X ನಿರ್ಜೀವ | ಅಭಿಮಾನಿ X ನಿರಭಿಮಾನಿ |
| ಸ್ವೀಕರಿಸು X ತಿರಸ್ಕರಿಸು, | ಸದಾಚಾರ X ದುರಾಚಾರ | ಸುಪ್ರಸಿದ್ಧ X ಕುಪ್ರಸಿದ್ಧ |

ಈ ಮಾದರಿಯ ನಿದರ್ಶನಗಳನ್ನು ಶಾಲೆಯ ವಿವಿಧ ಹಂತಗಳ ಪಠ್ಯಗಳ ಭಾಷಾಭ್ಯಾಸದ ಅಡಿಯಲ್ಲಿ ಅಭ್ಯಾಸಕ್ಕೆ ಅಳವಡಿಸಿರುವುದು ಕಂಡುಬರುತ್ತದೆ.

**೧೬. ಆಖ್ಯೆ, ಕರ್ತೃ**

| ಪಠ್ಯಪುಸ್ತಕಗಳು | ಪರಾಮರ್ಶನ ವ್ಯಾಕರಣ ಕೃತಿಗಳು |
|---|---|
| ಕರ್ತೃಪದ | ಆಖ್ಯೆ<br>ಕರ್ತೃ |

ಪಂಜೆಮಂಗೇಶರಾವ್ ಅವರು ೧೯೦೫ರಲ್ಲಿ ರಚಿಸಿದ ಕನ್ನಡ ಮೂಲವ್ಯಾಕರಣದಲ್ಲಿ ವಾಕ್ಯದ ಆರಂಭದಲ್ಲಿ ಬರುವ ಕರ್ತೃಪದಕ್ಕೆ ಪರ್ಯಾಯವಾಗಿ 'ಆಖ್ಯೆ' ಎಂಬ ಪರಿಭಾಷೆಯನ್ನು ಬಳಸಿದ್ದಾರೆ. ವರ್ಣಿಸಲ್ಪಡುವ ವಸ್ತುವನ್ನು ಅಥವಾ ಸಂಗತಿಯನ್ನು ಕುರಿತು ಆಖ್ಯೆಯ ಪದವು ಹೇಳುತ್ತದೆ. ಆದುದರಿಂದಲೇ ವಾಕ್ಯದಲ್ಲಿ ಆಖ್ಯೆಯು ಯಾವಾಗಲೂ ನಾಮಪದವಾಗಿ ಅಥವಾ ಸರ್ವನಾಮವಾಗಿ ಇರುತ್ತದೆ.

ಉದಾರಹಣೆ

೧. ರಾಮನು ಮನೆಗೆ ಹೋದನು.

೨. ಮಾಲತೇಶ ಕೆಲಸವನ್ನು ಮಾಡುತ್ತಾನೆ.

ಈ ವಾಕ್ಯಗಳಲ್ಲಿ ಯಾರ ಸಂಗತಿಯನ್ನು ಕುರಿತು ಹೇಳುತ್ತೇವೆ? ಯಾರು ಹೋದರೋ, ಯಾರು ಮಾಡುತ್ತಾರೋ ಅವರ ವಿಷಯವಾಗಿ ಹೇಳುತ್ತೇವೆ. ನಾವು ಯಾವ ವಸ್ತುವನ್ನು ಅಥವಾ ಮನುಷ್ಯನನ್ನು ಕುರಿತು ಹೇಳುತ್ತೇವೆ ಆ ಪದಕ್ಕೆ ಆಖ್ಯೆ ಎಂದು ಕರೆದಿದ್ದಾರೆ. ಮೇಲಿನ ವಾಕ್ಯಗಳಲ್ಲಿ ರಾಮ, ಮಾಲತೇಶ ಎಂಬ ಪದಗಳು ಆಖ್ಯೆಯ ಪದಗಳು. ಆಖ್ಯೆಯ ಪದಕ್ಕೆ ಕರ್ತೃವೆಂದು ಹೆಸರುಂಟು ಎಂಬ ಅಭಿಪ್ರಾಯವನ್ನು ಪಂಜೆಯವರು ವ್ಯಕ್ತಪಡಿಸಿದ್ದಾರೆ. ಕೆಲವೊಂದು ವಾಕ್ಯಗಳಲ್ಲಿ ಆಖ್ಯೆಯ ಪದವನ್ನು ಸುಲಭವಾಗಿ ತಿಳಿದುಕೊಳ್ಳಬಹುದಾದ್ದರಿಂದ ಅದನ್ನು ಸೇರಿಸುವುದಿಲ್ಲ. ಬಂದೆನು ಎಂಬ ವಾಕ್ಯದಲ್ಲಿ ನಾನು ಎಂಬ ಆಖ್ಯೆಯನ್ನು ಹೇಳದಿದ್ದರೂ, ನಾವು ಆ ವಾಕ್ಯದ ಅರ್ಥದಿಂದ ಅದನ್ನು ತಿಳಿದುಕೊಳ್ಳಬಹುದು. ಹೀಗೆ ಅರ್ಥದಿಂದ ಸುಲಭವಾಗಿ ತಿಳಿಯಬಹುದಾದ ಪದಗಳನ್ನು ವಾಕ್ಯಗಳಲ್ಲಿ ಬಿಟ್ಟುಬಿಟ್ಟರೆ ಅವುಗಳು ಅಧ್ಯಾಹಾರವಾಗುತ್ತವೆಂದು ಅಭಿಪ್ರಾಯಪಡುತ್ತಾರೆ.

ಸಮಕಾಲೀನ ಶಾಲಾಪಠ್ಯಪುಸ್ತಕಗಳಲ್ಲಿ ಆಖ್ಯೆ ಎಂಬ ಪರಿಭಾಷೆಗೆ ಬದಲಾಗಿ 'ಕರ್ತೃಪದ' ಎಂಬ ಪರಿಭಾಷೆಯನ್ನು ಬಳಸಲಾಗಿದೆ. ಕಾರ್ಯವನ್ನು ಮಾಡುವವನೇ ಕರ್ತೃ. ನಡೆದ ಕಾರ್ಯವೇನೆಂಬುದೇ ಕ್ರಿಯೆ. ಆದ್ದರಿಂದ ಕರ್ತೃವಿನಿಂದ ಕ್ರಿಯೆ ಎಂದು ತಿಳಿಸುವ ಪದವನ್ನು ಕ್ರಿಯಾಪದವೆಂದು ತಿಳಿಸಲಾಗುತ್ತದೆ. ಇಲ್ಲಿ ಪರಿಭಾಷೆಗಳ ಬಳಕೆಯಲ್ಲಿ ಭಿನ್ನತೆ ಇದ್ದರೆ ವಿಶ್ಲೇಷಣೆಯಲ್ಲಿ ಸಾಮ್ಯತೆ ಇರುವುದು ಕಂಡುಬರುತ್ತದೆ.

೧೭. ಪ್ರಯೋಜಕ ಧಾತುಗಳು

| ಪಠ್ಯಪುಸ್ತಕಗಳು | ಪರಾಮರ್ಶನ ವ್ಯಾಕರಣ ಕೃತಿಗಳು |
|---|---|
| ಪ್ರೇರಣಾರ್ಥಕ ಧಾತುಗಳು | ಪ್ರಯೋಜಕ ಧಾತುಗಳು |

ಪಂಜೆಮಂಗೇಶರಾವ್ ಅವರು ೧೯೦೫ರಲ್ಲಿ ರಚಿಸಿದ ಕನ್ನಡ ಮೂಲವ್ಯಾಕರಣದಲ್ಲಿ ಪ್ರಯೋಜಕ ಧಾತುಗಳು ಎಂಬ ಪರಿಭಾಷೆಯನ್ನು ಬಳಕೆ ಮಾಡಿದ್ದಾರೆ. ಒಬ್ಬನು ಕ್ರಿಯೆಯನ್ನು ತಾನೇ ಮಾಡದೆ ಮತ್ತೊಬ್ಬನಿಂದ ಮಾಡಿಸುತ್ತಾನೆ ಎಂಬರ್ಥವನ್ನು ಹೇಳುವ ಧಾತುಗಳೇ ಪ್ರಯೋಜಕ ಧಾತುಗಳೆಂದು ಕರೆದಿದ್ದಾರೆ. ಇವುಗಳನ್ನು ಪ್ರೇರಣಾರ್ಥಕವೆಂದೂ ಹೇಳುವುದುಂಟು ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

ಉದಾಹರಣೆ

೧. ರೈತನು ಮನೆಯನ್ನು ಕಟ್ಟಿಸುತ್ತಾನೆ.

೨. ಅರಸನು ಮಂತ್ರಿಯನ್ನು ಕೊಲ್ಲಿಸಿದನು.

೩. ತಂದೆಯು ಮಗನಿಗೆ ಔಷಧವನ್ನು ಕೊಡಿಸುವನು.

೪. ಶಿಕ್ಷಕನು ಪಾಠವನ್ನು ಓದಿಸುತ್ತಾನೆ.

ಈ ಮೇಲಿನ ವಾಕ್ಯಗಳಲ್ಲಿ ಕ್ರಿಯೆಯನ್ನು ಮಾಡುವವನು ಕರ್ತೃವಲ್ಲ. ಅಂದರೆ ಕ್ರಿಯಾಪದಗಳು ಹೇಳುವ ಕ್ರಿಯೆಯನ್ನು ಕರ್ತೃವು ಮಾಡದೆ ಅದನ್ನು ಮತ್ತೊಬ್ಬನಿಂದ ಮಾಡಿಸುತ್ತಾನೆಂದು ತಿಳಿಯುತ್ತದೆ. ಕಟ್ಟಿಸು, ಕೊಲ್ಲಿಸು, ಕೊಡಿಸು, ಓದಿಸು ಎಂಬ ರೂಪಗಳೆ ಪ್ರಯೋಜಕ ಧಾತುಗಳು. ಇವುಗಳಿಗೆ ಕರ್ಮವು ಸೇರುತ್ತದೆ.

ಸಮಕಾಲೀನ ಶಾಲಾಪಠ್ಯಪುಸ್ತಕಗಳಲ್ಲಿ ಪ್ರಯೋಜಕ ಧಾತುಗಳು ಎಂಬ ಪರಿಭಾಷೆ ಕಂಡುಬರುವುದಿಲ್ಲ. ಕ್ರಿಯೆಯ ಅರ್ಥವನ್ನು ಸಂಪೂರ್ಣವಾಗಿ ಕೊಡುವ ಪದಗಳು ಕ್ರಿಯಾಪದಗಳೆನಿಸುತ್ತವೆ. ಕ್ರಿಯಾಪದದ ಮೂಲ ರೂಪವು ಧಾತು ಎನಿಸುವುದು. ಧಾತುವಿನಲ್ಲಿ ಸ್ವತಂತ್ರವಾದ ಧಾತುಗಳು ಮೂಲ ಧಾತುಗಳಾದರೆ, ಪ್ರತ್ಯಯಗಳನ್ನು ಸೇರಿಸಿ ಪಡೆಯುವ ಧಾತುಗಳು ಸಾಧಿತ ಧಾತುಗಳು ಎನಿಸುವುವು.

ಉದಾಹರಣೆ

**ಮೂಲಧಾತು :** ನೋಡು, ಏಳು, ಅರಸು, ಮಾಡು, ನಿಲ್ಲು, ಬಳಸು.

**ಸಾಧಿತಧಾತು :** ಕನ್ನಡಿಸು, ಅಬ್ಬರಿಸು, ಸಾಧಿಸು, ಸ್ಥಾಪಿಸು.

ಕ್ರಿಯೆಯನ್ನು ಅನುಸರಿಸಿ ಧಾತುವಿನಲ್ಲಿ ಎರಡು ವಿಭಾಗ ಮಾಡಲಾಗುತ್ತದೆ. ಕರ್ಮಪದವನ್ನು ಹೊಂದಿರುವ ಧಾತು 'ಸಕರ್ಮಕ ಧಾತು' ಎಂತಲೂ, ಕರ್ಮಪದವನ್ನು ಹೊಂದಿರದ ಧಾತು 'ಅಕರ್ಮಕ ಧಾತು' ಎಂದು ಧಾತುಗಳ ವರ್ಗೀಕರಣದಲ್ಲಿ ಪ್ರಯೋಜಕ ಧಾತುಗಳ ಬಳಕೆ ಕಂಡುಬರುವುದಿಲ್ಲ.

ಸಕರ್ಮಕ ಧಾತುವಿಗೆ ಉದಾಹರಣೆ

| ಕ್ರಸಂ | ಕರ್ತೃಪದ | ಕರ್ಮಪದ | ಕ್ರಿಯಾಪದ | ಧಾತು |
|---|---|---|---|---|
| ೧. | ನಿಹಾರಿಕಾ | ಹಾಡನ್ನು | ಹಾಡಿದಳು | ಹಾಡು |
| ೨. | ಇಂದುಶೇಖರ್ | ದೂರದರ್ಶನವನ್ನು | ನೋಡಿದನು | ನೋಡು |
| ೩. | ಮಕ್ಕಳು | ಪಾಠವನ್ನು | ಓದಿದರು | ಓದು |
| ೪. | ಮೇರಿಯು | ಕವಿತೆಯನ್ನು | ಕೇಳಿದಳು | ಕೇಳು |

ಅಕರ್ಮಕ ಧಾತುವಿಗೆ ಉದಾಹರಣೆ

| ಕ್ರಸಂ | ಕರ್ತೃಪದ | ಕ್ರಿಯಾಪದ | ಧಾತು |
|---|---|---|---|
| ೧. | ಆನಂದ | ಓಡಿದನು | ಓಡು |
| ೨. | ಅರವಿಂದ | ಮಲಗಿದನು | ಮಲಗು |
| ೩. | ಮಗು | ಸೊರಗಿತು | ಸೊರಗು |
| ೪. | ಮರಗಳು | ಬೆಳೆದವು | ಬೆಳೆ |

ಈ ವಾಕ್ಯಗಳಲ್ಲಿ ಕರ್ಮಪದವೇ ಇಲ್ಲ. ಹೀಗಾಗಿ ಇದು ಅಕರ್ಮಕ ಧಾತು ಎನಿಸುವುದು.

**೧೮. ಪರ್ಯಾಯವಾಚಿ ಶಬ್ದಗಳು (ಮೇಳ ನುಡಿ)**

| ಪಠ್ಯಪುಸ್ತಕಗಳು | ಪರಾಮರ್ಶನ ವ್ಯಾಕರಣ ಕೃತಿಗಳು |
|---|---|
| ಸಾಮ್ಯಪದಗಳು | ಪರ್ಯಾಯವಾಚಿಗಳು |
| ನೆನಪಿನಂಗಳದ ಪದಬಳ್ಳಿ | ಸಮಾನ ಪದಗಳು |
| ಸಮಾನಾರ್ಥಕ ಪದಬಳ್ಳಿ | |
| ಸಮಾನಾರ್ಥಕ ಪದಗಳು | |

ಮುಖಪುಟ ಹಾಳಾಗಿರುವ ಪರಾಮರ್ಶನ ಗ್ರಂಥವೊಂದರಲ್ಲಿ ಪರ್ಯಾಯವಾಚಿ ಶಬ್ದ/ಮೇಳನುಡಿ ಎಂಬ ಪರಿಭಾಷೆಯ ಬಳಕೆ ಕಂಡುಬರುತ್ತದೆ. ಒಂದು ಶಬ್ದಕ್ಕೆ ಸಮಾನಾರ್ಥವನ್ನು ಕೊಡುವ ಪರ್ಯಾಯ ಪದಗಳಿಗೆ ಪರ್ಯಾಯವಾಚಿ ಶಬ್ದಗಳು ಅಥವಾ ಮೇಳನುಡಿಗಳು ಎಂದು ಗುರುತಿಸಲಾಗಿದೆ. ಮೇಳ ಎಂದರೆ ಸೇರುವಿಕೆ ಎಂದರ್ಥ. ಸಮಾನವಾದ ಅರ್ಥಕೊಡುವ ಪದಗಳ ಗುಂಪು ಎಂದು ವ್ಯಾಖ್ಯಾನಿಸಲಾಗಿದೆ.

ಉದಾಹರಣೆ

**ಕುದುರೆ** : ಅಶ್ವ, ತುರಗ, ವಾಜಿ, ತೇಜಿ, ಘೋಟ, ಸೈಂಧವ.

**ಗಿಳಿ** : ಕನ್ನಡವಕ್ಕಿ, ಪಂಡಿತವಕ್ಕಿ, ಶುಕ, ಮುರಳಿ.

ಸ್ತ್ರೀ : ಅಬಲೆ, ನಾರಿ, ವನಿತೆ, ಮಹಿಳೆ, ಕಾಮಿನಿ.

**ಚಿಗುರು** : ಕೊನರು, ತಳಿರು, ಪಲ್ಲವ, ಕಿಸಲಯ.

ಸಮಕಾಲೀನ ಸಂದರ್ಭದ ಶಾಲಾಪಠ್ಯಪುಸ್ತಕಗಳಲ್ಲಿ ಪರ್ಯಾಯವಾಚಿ ಶಬ್ದ/ಮೇಳನುಡಿ ಎಂಬ ಪರಿಭಾಷೆಗಳ ಬಳಕೆ ಕಂಡುಬರುವುದಿಲ್ಲ. ಇದಕ್ಕೆ ಪೂರಕವಾಗಿ ಸಾಮ್ಯಪದಗಳು, ನೆನಪಿನಂಗಳದ ಪದಬಳ್ಳಿ, ಸಮಾನಾರ್ಥಕ ಪದಬಳ್ಳಿ, ಸಮಾನಾರ್ಥಕ ಪದಗಳು ಎಂಬ ರೂಪಗಳನ್ನು ಬಳಸಿರುವುದು ಕಂಡುಬರುತ್ತದೆ. ಉದಾಹರಣೆಗೆ ಮೂರನೆ ತರಗತಿಯ ಕನ್ನಡ ಕಲಿ – ನಲಿ ಅಭ್ಯಾಸ ಸಹಿತ ಪಠ್ಯಪುಸ್ತಕದ ಗದ್ಯಪಾಠ ೭ ಜೇನು ಪಾಠದ ಭಾಷಾ – ಚಟುವಟಿಕೆಯಲ್ಲಿ ಕೆಳಗಿನ ಮಾದರಿ ಪದಬಳ್ಳಿ ಗಮನಿಸಿ ಎಂದು ಕೊಡಲಾಗಿದೆ.

**ಕುಣಿ** -->ಜಿಗೆ -->ನೆಗೆ -->ಹಾರು -->ನಲಿ -->ನರ್ತಿಸು

**ಭಯ** -->ಹೆದರು -->ಅಂಜಿಕೆ -->ಗಾಬರಿ -->ನಡುಗು -->ಬೆದರು

**ಸಂತೋಷ** -->ಆನಂದ -->ಸಂತಸ -->ಉಲ್ಲಾಸ -->ಹಿಗ್ಗು -->ತಣಿ

**ಆಸೆ** -->ಬಯಕೆ -->ಇಚ್ಛೆ -->ಅಪೇಕ್ಷೆ -->ಅಭಿಲಾಷೆ -->ಆಕಾಂಕ್ಷೆ

ಈ ರೀತಿ ಪದಗಳನ್ನು ಹಿಗ್ಗಿಸುತ್ತಾ ಅವುಗಳನ್ನು ವಿವಿಧ ಅರ್ಥ ರೂಪದಲ್ಲಿ ಕಾಣಬಹುದು ಇದನ್ನೇ ಪದಬಳ್ಳಿ ಎಂದು ವಿವರಿಸಲಾಗಿದೆ. ಮೇಲಿನ ನಿದರ್ಶನಗಳನ್ನು ಗಮನಿಸಿದಾಗ ವಿಶ್ಲೇಷಣೆಯಲ್ಲಿ ಸಾಮ್ಯತೆ ಕಂಡುಬಂದರೆ ಪರಿಭಾಷೆಗಳಲ್ಲಿ ಭಿನ್ನತೆ ಕಂಡುಬರುತ್ತದೆ.

**೧೯. ದೂರದರ್ಶಕ ಮತ್ತು ಸಮೀಪದರ್ಶಕ ಸರ್ವನಾಮಗಳು**

| ಪಠ್ಯಪುಸ್ತಕಗಳು | ಪರಾಮರ್ಶನ ವ್ಯಾಕರಣ ಕೃತಿಗಳು |
|---|---|
| ನಿರ್ದೇಶಾತ್ಮಕ ಸರ್ವನಾಮಗಳು | ದೂರದರ್ಶಕ ಸರ್ವನಾಮಗಳು |
| ಆತ್ಮಾರ್ಥಕ ಸರ್ವನಾಮಗಳು | ಸಮೀಪದರ್ಶಕ ಸರ್ವನಾಮಗಳು |
| ಪುರುಷವಾಚಕ ಸರ್ವನಾಮಗಳು | ಸಾಮಾನ್ಯಾರ್ಥಕ ಸರ್ವನಾಮಗಳು |
| | ಸಂಬಂಧಾರ್ಥಕ ಸರ್ವನಾಮಗಳು |

ಪಂಡಿತ ಮ.ಪ್ರ.ಪೂಜಾರರು ೧೯೪೬ರಲ್ಲಿ ರಚಿಸಿದ ಕನ್ನಡ ನುಡಿಗನ್ನಡಿ ಭಾಗ-೨ರಲ್ಲಿ ದೂರದರ್ಶಕ ಮತ್ತು ಸಮೀಪದರ್ಶಕ ಸರ್ವನಾಮಗಳು ಎಂಬ ಪರಿಭಾಷೆಗಳನ್ನು ಬಳಕೆಮಾಡಿರುವುದು ಕಂಡುಬರುತ್ತದೆ. ಎಲ್ಲ ನಾಮಪದಗಳ ಸ್ಥಳದಲ್ಲಿ ಉಪಯೋಗಿಸುವ ಶಬ್ದಗಳು ಸರ್ವನಾಮಗಳೆಂದು ಹೇಳುತ್ತಾ, ಅವುಗಳಲ್ಲಿ ಪುರುಷಾರ್ಥಕ, ದರ್ಶಕ,

ಪ್ರಶ್ನಾರ್ಥಕ, ಸಾಮಾನ್ಯಾರ್ಥಕ ಮತ್ತು ಸಂಬಂಧಾರ್ಥಕ ಎಂಬ ಐದು ಭೇದಗಳನ್ನು ಗುರುತಿಸಿದ್ದಾರೆ. ಉತ್ತಮ, ಮಧ್ಯಮ ಮತ್ತು ಪ್ರಥಮ ಪುರುಷವಾಚಕ ಸರ್ವನಾಮಗಳಲ್ಲಿ ನಾನು, ನೀನು, ಅವನು ಎಂಬುವು ಏಕವಚನದಲ್ಲಿ ಬಳಕೆಯಾದರೆ, ಪ್ರಥಮ ಪುರುಷದ ಸರ್ವನಾಮಗಳಲ್ಲಿ ಅವನು, ಆತನು, ಅವಳು, ಆಕೆ, ಅವರು, ಅದು, ಅವು ಎಂಬುವು ದೂರದಲ್ಲಿದ್ದವರನ್ನು ತೋರಿಸುವಾಗ ಬರುವುದರಿಂದ ಇವುಗಳನ್ನು ದೂರದರ್ಶಕ ಸರ್ವನಾಮಗಳೆಂದು, ಇವನು, ಈತನು, ಇವಳು, ಈಕೆ, ಇವರು, ಇದು, ಇವು ಎಂಬುವು ಸಮೀಪದಲ್ಲಿದ್ದವರನ್ನು ತೋರಿಸುವಾಗ ಬರುವುದರಿಂದ ಇವುಗಳಿಗೆ ಸಮೀಪದರ್ಶಕ ಸರ್ವನಾಮಗಳೆಂದು ಕರೆದಿದ್ದಾರೆ. ಆದರೆ ಶಾಲಾ ಪಠ್ಯಪುಸ್ತಕಗಳಲ್ಲಿ ದರ್ಶಕ, ಸಾಮಾನ್ಯಾರ್ಥಕ ಮತ್ತು ಸಂಬಂಧಾರ್ಥಕ ಎಂಬ ಪರಿಭಾಷೆಗಳ ಬಳಕೆ ಕಂಡುಬರುವುದಿಲ್ಲ. ಇವುಗಳ ಬದಲಾಗಿ ನಿರ್ದೇಶಾತ್ಮಕ ಸರ್ವನಾಮಗಳು, ಆತ್ಮಾರ್ಥಕ ಸರ್ವನಾಮಗಳು ಎಂಬ ಪರಿಭಾಷೆಗಳ ಬಳಕೆ ಕಂಡುಬರುತ್ತದೆ. ಎಂಟನೆ ತರಗತಿಯ ಕನ್ನಡ ಕಸ್ತೂರಿ ಪ್ರಥಮ ಭಾಷಾ ಪಠ್ಯಪುಸ್ತಕದ ಅಂತ್ಯದಲ್ಲಿರುವ ವ್ಯಾಕರಣ ಭಾಗದಲ್ಲಿ ನಾಮಪದಗಳಿಗೆ ವಿಶೇಷಣವಾಗಿ ಕೆಲಸಮಾಡುವ ಸರ್ವನಾಮಗಳು ನಿರ್ದೇಶಾತ್ಮಕ ಸರ್ವನಾಮಗಳೆಂದು ಹೇಳಲಾಗಿದೆ.

ಉದಾಹರಣೆಗೆ

ತೇಜಸ್ವಿಯವರ ಮನೆಯ ಹೆಸರು ಪಂಚವಟಿ. ಆ ಮನೆ ಮೂಡಿಗೆರೆಯಲ್ಲಿದೆ. ಬೇಂದ್ರೆಯವರಿದ್ದ ಮನೆಯ ಬೀದಿಯ ಹೆಸರು ಸಾಧನಕೇರಿ. **ಈ** ಬೀದಿ ಧಾರವಾಡದಲ್ಲಿದೆ.

ಈ ಮೇಲಿನ ಉದಾಹರಣೆಯಲ್ಲಿ ಆ ಮತ್ತು ಈ ಗಳು ಮನೆ, ಬೀದಿ ನಾಮಪದಗಳನ್ನು ದೂರ ಮತ್ತು ಸಮೀಪ ಎಂಬರ್ಥದಲ್ಲಿಯೇ (ಅದು+ಮನೆ = ಆ ಮನೆ, ಇದು+ಬೀದಿ = ಈ ಬೀದಿ) ಬಳಕೆಯಾಗಿವೆ. ಪರಿಭಾಷೆಗಳಲ್ಲಿ ಭಿನ್ನತೆ ಇದ್ದರೆ ವಿಶ್ಲೇಷಣೆಯಲ್ಲಿ ಸಾಮ್ಯತೆ ಇರುವುದು ಕಂಡುಬರುತ್ತದೆ. ತಾವು – ನಾನು ಎಂಬ ರೂಪಗಳು ಆತ್ಮಾರ್ಥಕ ಸರ್ವನಾಮಗಳಾಗಿವೆ.

ಉದಾಹರಣೆ

೧. ಅವನು ತನ್ನ ಪಾಡಿಗೆ ತಾನು ಹೋದನು.

೨. ಅವರು ತಮ್ಮ ಪಾಡಿಗೆ ತಾವು ಹೋದರು.

ಸಾಮಾನ್ಯಾರ್ಥಕ ಮತ್ತು ಸಂಬಂಧಾರ್ಥಕ ಸರ್ವನಾಮಗಳು ಎಂಬ ಪರಿಭಾಷೆಗಳು ಸಮಕಾಲೀನ ಸಂದರ್ಭದ ಪಠ್ಯಪುಸ್ತಕಗಳಲ್ಲಿ ಕಂಡುಬರುವುದಿಲ್ಲ. ಸಾಮಾನ್ಯವಾಗಿ ಯಾವನಾದರೂ ಒಬ್ಬನು ಇಲ್ಲವೆ ಕೆಲವರು ಎಂದು ಹೇಳುವುದಕ್ಕಾಗಿ ಉಪಯೋಗಿಸುವ ಸರ್ವನಾಮಗಳು ಸಾಮಾನ್ಯಾರ್ಥಕ ಸರ್ವನಾಮಗಳು. ಉದಾಹರಣೆ ಯಾವನೊಬ್ಬನು, ಯಾವಳೊಬ್ಬಳು, ಯಾವುದೊಂದು, ಯಾರೊಬ್ಬರು, ಬೇರೊಂದು, ಇನ್ನೊಬ್ಬನು, ಒಬ್ಬಾನೊಬ್ಬನು, ಒಂದಾನೊಂದು ಇತ್ಯಾದಿ. ಕ್ರಿಯಾಸಂಬಂಧವನ್ನು ಸ್ಪಷ್ಟಪಡಿಸುವುದಕ್ಕಾಗಿ ಅವನು, ಅವಳು, ಅದು ಮೊದಲಾದವುಗಳಿಗೆ ಸಂಬಂಧಿಸಿ ಉಪಯೋಗಿಸುವ ಯಾವನು, ಯಾವಳು, ಯಾವುದು ಮೊದಲಾದವುಗಳಿಗೆ ಸಂಬಧಾರ್ಥಕ ಸರ್ವನಾಮಗಳೆಂದು ಪೂಜಾರರು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

ಉದಾಹರಣೆ

೧. ಯಾವನು ದುಡಿಯುವನೋ ಅವನು ಸುಖಪಡುವನು.

೨. ಯಾವಳು ನಗುವಳೋ ಅವಳ ಹಲ್ಲುಗಳು ಕಾಣಿಸುವವು.

೩. ಯಾವುದು ಓಡುವುದೋ ಅದು ದಣಿಯುವುದು.

೪. ಯಾರು ಸತ್ಯವನ್ನಾಡುವವರೋ ಅವರು ಮನ್ನಣೆ ಪಡೆಯುವರು.

ಈ ಮೇಲಿನ ವಾಕ್ಯಗಳಲ್ಲಿ ಅವನು, ಅವಳು, ಅದು, ಅವರು ಈ ಸರ್ವನಾಮಗಳನ್ನು ಎಂಟನೆ ತರಗತಿಯ ಕನ್ನಡ ಕಸ್ತೂರಿ ಪ್ರಥಮ ಭಾಷಾ ಪಠ್ಯಪುಸ್ತಕದ ವ್ಯಾಕರಣ ಭಾಗದಲ್ಲಿ ಪ್ರಥಮ ಪುರುಷ ಏಕವಚನ, ಬಹುವಚನ ಸರ್ವನಾಮ ರೂಪಗಳೆಂದು ವಿವರಿಸಲಾಗಿದೆ.

ಉದಾಹರಣೆ ಪುರುಷವಾಚಕ ಸರ್ವನಾಮಗಳು

ಮೇಲಿನ ಪರಾಮರ್ಶನ ಗ್ರಂಥಗಳ ಮತ್ತು ಸಮಕಾಲೀನ ಶಾಲಾಪಠ್ಯಗಳಲ್ಲಿ ಬಳಸಿದ ಪರಿಭಾಷೆಗಳಲ್ಲಿ ಭಿನ್ನತೆ ಇದ್ದರೆ ವಿಶ್ಲೇಷಣೆಯಲ್ಲಿ ಸಾಮ್ಯತೆ ಇರುವುದು ಕಂಡುಬರುತ್ತದೆ.

| ಪುರುಷ | ಲಿಂಗ | ಏಕವಚನ | ಬಹುವಚನ |
|---|---|---|---|
| ೧. ಪ್ರಥಮ | ಪುಲ್ಲಿಂಗ | ಅವನು | ಅವರು |
| | ಸ್ತ್ರೀಲಿಂಗ | ಅವಳು | ಅವರು |
| | ನಪುಂಸಕಲಿಂಗ | ಅದು | ಅವು |
| ೨. ಮಧ್ಯಮ | | ನೀನು | ನೀವು |

೩. ಉತ್ತಮ ನಾನು ನಾವು

೨೦. ಸಾಮಾನ್ಯ ನಾಮಗಳು

| ಪಠ್ಯಪುಸ್ತಕಗಳು | ಪರಾಮರ್ಶನ ವ್ಯಾಕರಣ ಕೃತಿಗಳು |
|---|---|
| ವಸ್ತುವಾಚಕಗಳು | ಸಾಮಾನ್ಯ ನಾಮಗಳು |
| ರೂಢನಾಮಗಳು | |

ಪಂಜೆಮಂಗೇಶರಾವ್ ಅವರು ೧೯೦೫ರಲ್ಲಿ ರಚಿಸಿದ ಕನ್ನಡ ಮೂಲವ್ಯಾಕರಣದಲ್ಲಿ ಸಾಮಾನ್ಯ ನಾಮಗಳು ಎಂಬ ಪರಿಭಾಷೆಯನ್ನು ಬಳಕೆಮಾಡಿರುವುದು ಕಂಡುಬರುತ್ತದೆ. ಸಾರ್ವತ್ರಿಕವಾಗಿ ಒಂದು ವಸ್ತುವಿನ ಹೆಸರು ಅಥವಾ ಒಂದು ವಸ್ತುವನ್ನು, ವ್ಯಕ್ತಿಯನ್ನು ಸೂಚಿಸುವ ಪದವು ಸಾಮಾನ್ಯ ನಾಮವಾಗಿದೆ. ಚರ್ಮದಲ್ಲಿ ರೋಮವೂ, ನಾಲ್ಕು ಕಾಲುಗಳೂ, ಹಿಂದುಗಡೆ ಬಾಲವೂ ಯಾವ ಪ್ರಾಣಿಯಲ್ಲಿರುವುವೋ ಆ ಪ್ರಾಣಿಯನ್ನು ನಾವು ಮೃಗವೆಂದು, ಎರಡು ಕಾಲುಗಳೂ, ಗರಿಗಳೂ, ಹಾರುವ ಶಕ್ತಿಯೂ ಯಾವ ಪ್ರಾಣಿಗಳಲ್ಲಿ ಸಾಮಾನ್ಯವಾಗಿರುವುವೋ ಅವುಗಳನ್ನು ನಾವು ಪಕ್ಷಿಗಳೆಂದು ಕರೆಯುತ್ತೇವೆ. ಈ ಸಮಾನತ್ವವೂ ಇರುವುದರಿಂದ ಮೃಗ, ಪಕ್ಷಿ, ಎಂಬೀ ಪದಗಳಿಗೆ ವ್ಯಾಕರಣದಲ್ಲಿ ಸಾಮಾನ್ಯ ನಾಮವೆಂಬ ಹೆಸರು ಬರುತ್ತದೆಂದು ಪಂಜೆಯವರು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಗಿಡ, ಮರ, ಬಳ್ಳಿ, ಸಸಿ, ಹೂ ಮೊದಲಾದ ಪದಗಳು ಸಾಮಾನ್ಯ ನಾಮಗಳಾಗುತ್ತವೆ.

ಸಮಕಾಲೀನ ಶಾಲಾಪಠ್ಯಪುಸ್ತಕಗಳಲ್ಲಿ ಸಾಮಾನ್ಯ ನಾಮಗಳು ಎಂಬ ಪರಿಭಾಷೆಗೆ ಬದಲಾಗಿ ವಸ್ತುವಾಚಕ ಅಥವಾ ರೂಢನಾಮವೆಂಬ ಪರಿಭಾಷೆಗಳನ್ನು ಬಳಸಲಾಗಿದೆ. ಅಂದರೆ ರೂಢಿಯಿಂದ ಬಂದ ಸಾಮಾನ್ಯ ವಾಚಕಗಳನ್ನು ವಸ್ತುವಾಚಕಗಳು ಅಥವಾ ರೂಢನಾಮಗಳೆಂದು ವಿಶ್ಲೇಷಣೆ ಮಾಡಲಾಗಿದೆ.

ಉದಾಹರಣೆ

**ವಸ್ತುವಾಚಕ :** ವ್ಯಕ್ತಿ – ವಸ್ತುಗಳ ಹೆಸರುಗಳನ್ನು ಹೇಳುವ ಶಬ್ದಗಳು ವಸ್ತುವಾಚಕ ಎನಿಸುವುವು.

**ರೂಢನಾಮ :** ರೂಢಿಯಿಂದ ಬಂದ ಸಾಮಾನ್ಯ ವಾಚಕಗಳು ರೂಢನಾಮ ಎನಿಸುವುವು.

ಉದಾಹರಣೆ : ಅರಸ, ನಾಯಿ, ನದಿ, ಹೆಂಗಸು ಇತ್ಯಾದಿ. ಪರಾಮರ್ಶನ ಗ್ರಂಥಗಳಲ್ಲಿ ಬಳಕೆಯಾಗಿರುವ ಪರಿಭಾಷೆಗಳಿಗೂ ಸಮಕಾಲೀನ ಸಂದರ್ಭದ ಶಾಲಾಪಠ್ಯಪುಸ್ತಕಗಳಲ್ಲಿ

ಬಳಕೆಯಾಗಿರುವ ಪರಿಭಾಷೆಗಳಿಗೂ ಭಿನ್ನತೆ ಇದ್ದರೆ ವಿಶ್ಲೇಷಣೆಯಲ್ಲಿ ಸಾಮ್ಯತೆ ಇರುವುದು ಕಂಡುಬರುತ್ತದೆ.

ಸಮಕಾಲೀನ ಸಂದರ್ಭದ ಪಠ್ಯಪುಸ್ತಕಗಳು ಮತ್ತು ಪರಾಮರ್ಶನ ಶಾಲಾವ್ಯಾಕರಣ ಕೃತಿಗಳ ತೌಲನಿಕವಾದ ಅಧ್ಯಯನದಲ್ಲಿ ಕಂಡುಬರುವ ಪ್ರಮುಖ ಅಂಶವೆಂದರೆ ಪರಿಭಾಷೆಗಳ ಬಳಕೆಯಲ್ಲಿ ಭಿನ್ನತೆ ಕಂಡುಬಂದರೆ, ಅವುಗಳ ವಿಶ್ಲೇಷಣೆಯಲ್ಲಿ ಸಾಮ್ಯತೆ ಇರುವುದು ಸ್ಪಷ್ಟವಾಗಿ ಕಂಡುಬರುತ್ತದೆ. ಮಕ್ಕಳ ಕಲಿಕೆಗೆ ಸರಳವಾಗಿ ಅರ್ಥವಾಗುವ ಉದ್ದೇಶದಿಂದ ಪರಿಭಾಷೆಗಳ ಬಳಕೆಯಲ್ಲಿ ಬದಲಾವಣೆ ಮಾಡಲಾಗಿದೆ ಎನಿಸುತ್ತದೆ. ಆಧುನಿಕ ಭಾಷಾವಿಜ್ಞಾನದಿಂದ ಕಸಿಗೊಂಡ ಕೆಲವು ರೂಪಗಳನ್ನು ಬಳಸಿದರೆ ಮತ್ತೆ ಹಲವು ಪರಿಭಾಷೆಗಳು ಸಾಂಪ್ರದಾಯಿಕವಾಗಿ ಉಳಿದುಕೊಂಡು ಬಂದಿರುವುದು ಸಮಕಾಲೀನ ಸಂದರ್ಭದ ಶಾಲಾಪಠ್ಯಪುಸ್ತಕಗಳಿಂದ ತಿಳಿದುಬರುತ್ತದೆ. ಈ ಹಿಂದೆ ಹೇಳಿದ ಸುಮಾರು ಇಪ್ಪತ್ತು ಭಿನ್ನವಾದ ಪರಿಭಾಷೆಗಳ ಬಳಕೆ ಸಮಕಾಲೀನ ಸಂದರ್ಭದ ಶಾಲಾಪಠ್ಯಪುಸ್ತಕಗಳಲ್ಲಿ ಕಂಡುಬರುವುದಿಲ್ಲ. ಇವುಗಳಿಗೆ ಭಿನ್ನವಾದ ಅಥವಾ ಪರ್ಯಾಯವಾದ ಪರಿಭಾಷೆಗಳನ್ನು, ರೂಪಗಳನ್ನು ಬಳಸಲಾಗಿದೆ. ೧೯೪೬ರಲ್ಲಿ ಮ.ಪ್ರ.ಪೂಜಾರರು ರಚಿಸಿದ ಕನ್ನಡ ನುಡಿಗನ್ನಡಿ ಮತ್ತು ಛಂದೋಮಂಜರಿ, ೧೯೫೫ರಲ್ಲಿ ಕೆ.ಕಾಂತರೈ ವಿದ್ವಾನ್ ಅವರು ರಚಿಸಿದ ಪ್ರೌಢಶಾಲಾವ್ಯಾಕರಣ ಮತ್ತು ಛಂದೋಲಂಕಾರಸಾರ, ೧೯೭೦ರಲ್ಲಿ ಶಿ.ಚ.ನಂದಿಮಠ ಅವರು ರಚಿಸಿದ ಕನ್ನಡ ವ್ಯಾಕರಣದರ್ಪಣ ಕೃತಿಗಳು ವ್ಯಾಕರಣದ ಜೊತೆಗೆ ಛಂದಸ್ಸು ಮತ್ತು ಅಲಂಕಾರಗಳನ್ನು ವಿವರಿಸಿದರೆ ಉಳಿದಿರುವ ಪರಾಮರ್ಶನ ವ್ಯಾಕರಣ ಗ್ರಂಥಗಳೆಲ್ಲವೂ ವ್ಯಾಕರಣದ ಪರಿಭಾಷೆಗಳನ್ನು ಮಾತ್ರ ವಿಶ್ಲೇಷಣೆ ಮಾಡುತ್ತವೆ. ಆದರೆ ವ್ಯಾಕರಣದ ಒಂದು ಭಾಗವಾದ ಛಂದಸ್ಸು ಮತ್ತು ಅಲಂಕಾರಗಳನ್ನು ಎಲ್ಲಿಯೂ ಬಳಕೆ ಮಾಡದಿರುವುದು ಸ್ಪಷ್ಟವಾಗಿ ಕಂಡುಬರುತ್ತದೆ. ಸಮಕಾಲೀನ ಸಂದರ್ಭದ ಮಾಧ್ಯಮಿಕ/ಪ್ರೌಢಶಾಲಾಹಂತದ ಪಠ್ಯಪುಸ್ತಕಗಳಲ್ಲಿ ವ್ಯಾಕರಣದ ಜೊತೆಗೆ ಛಂದಸ್ಸು ಮತ್ತು ಅಲಂಕಾರಗಳನ್ನು ಕಲಿಸಿಕೊಡಲಾಗುತ್ತದೆ. ಪರಾಮರ್ಶನ ಗ್ರಂಥಗಳಲ್ಲಿ ಬಳಕೆಯಾಗದೇ ಇರುವ ಛಂದಸ್ಸು, ಅಲಂಕಾರಗಳನ್ನು ಸಮಕಾಲೀನ ಶಾಲಾಪಠ್ಯಗಳಲ್ಲಿ ಕಲಿಸಿಕೊಡುತ್ತಿರುವುದು ಭಿನ್ನವಾದ ಅಂಶವಾಗಿದೆ.

೧೯೮೬ರ ರಾಷ್ಟ್ರೀಯ ಶಿಕ್ಷಣ ನೀತಿಯನ್ನು ಆಧರಿಸಿ ಕರ್ನಾಟಕ ಸರಕಾರ ಪಠ್ಯಪುಸ್ತಕ ಇಲಾಖೆ ಸಿದ್ಧಪಡಿಸಿ ಜಾರಿಗೆ ತಂದಿರುವ ಹೊಸ ಪಠ್ಯಕ್ರಮದ ಪ್ರಕಾರ

ಶಾಲೆಗಳಲ್ಲಿ ವ್ಯಾಕರಣಾಂಶಗಳನ್ನು ಪ್ರಯೋಗಾತ್ಮಕವಾಗಿ ಕಲಿಸಿಕೊಡಲಾಗುತ್ತದೆ. ಶಾಲಾ ವಿವಿಧ ಹಂತದಿಂದ ಹಂತಕ್ಕೆ ಭಾಷೆಯ ಜೊತೆಜೊತೆಯಲ್ಲಿ ವ್ಯಾಕರಣಾಂಶಗಳನ್ನು ಪಠ್ಯಗಳಲ್ಲಿ ಅಳವಡಿಸಲಾಗಿದೆ. ಕಾಲಕಾಲಕ್ಕೆ ಪಠ್ಯಕ್ರಮ ಪರಿಷ್ಕರಣೆಗೊಂಡಂತೆಲ್ಲ ಸಾಂಪ್ರದಾಯಿಕ ವ್ಯಾಕರಣ ಬರುಬರುತ್ತ ಕ್ರಿಯಾತ್ಮಕ/ಪ್ರಾಯೋಗಿಕ ಹಂತಕ್ಕೆ ತಿರುಗಿ ಇತ್ತೀಚೆಗೆ ಸಂದರ್ಭಕ್ಕನುಸಾರವಾಗಿ ವ್ಯಾಕರಣವನ್ನು ಕಲಿಸಿಕೊಡುತ್ತಿರುವುದರಿಂದ ಸಾಂದರ್ಭಿಕ ವ್ಯಾಕರಣವೆಂತಲೂ ಕರೆಯಲಾಗುತ್ತದೆ.

ಮಕ್ಕಳು ಪ್ರಾಥಮಿಕ ಹಂತವನ್ನು ದಾಟಿ ಮಾಧ್ಯಮಿಕ ಹಂತಕ್ಕೆ ಬಂದಾಗ ತಕ್ಕಮಟ್ಟಿಗೆ ಭಾಷಾ ಕೌಶಲಗಳನ್ನು ರೂಢಿಸಿಕೊಂಡು ಬಂದಿರುವುದರಿಂದ ಈ ಹಂತದಲ್ಲಿ ಸಾಂದರ್ಭಿಕವಾಗಿ ವ್ಯಾಕರಣದ ಕೆಲವು ಪರಿಭಾಷೆಗಳಾದ ಸಂಧಿಗಳು, ಸಮಾಸಗಳು, ವಿಭಕ್ತಿ ಪ್ರತ್ಯಯಗಳು, ನಾಮಪದಗಳು, ಕ್ರಿಯಾಪದಗಳು, ಲಿಂಗಗಳು, ಕಾಲಗಳು, ವಚನಗಳು, ತದ್ಧಿತಾಂತಗಳು, ಗುಣವಾಚಕಗಳು, ಸೂಕ್ತ ಲೇಖನಚಿಹ್ನೆಗಳು ಇತ್ಯಾದಿಗಳ ಜೊತೆಗೆ ಛಂದಸ್ಸು, ಅಲಂಕಾರಗಳನ್ನು ಕಲಿಸಿಕೊಡುತ್ತಿರುವುದು ಸಮಕಾಲೀನ ಪಠ್ಯಗಳಿಂದ ತಿಳಿದುಬರುತ್ತದೆ. ಶಿಕ್ಷಕರು ಪಾಠಮಾಡುವ ವೇಳೆ ಸಂದರ್ಭಾನುಸಾರ ಮೇಲಿನ ವ್ಯಾಕರಣಾಂಶಗಳನ್ನು ಪಾಠದ ಸ್ವಾರಸ್ಯ ಕೆಡದಂತೆ ಪ್ರಾಯೋಗಿಕವಾಗಿ/ಕ್ರಿಯಾತ್ಮಕವಾಗಿ ಮಕ್ಕಳಿಗೆ ಪದ್ಯ-ಗದ್ಯದ ನಿಯಮಗಳನ್ನು ತಿಳಿಸಿಕೊಡುವ ಉದ್ದೇಶದಿಂದ ಪಠ್ಯಗಳಲ್ಲಿ ಅಳವಡಿಸಲಾಗಿದೆ. ಶಿಕ್ಷಕರು ಪಾಠದ ಮುಖ್ಯ ವಿಚಾರವನ್ನು ಗೌಣಮಾಡಿ ವ್ಯಾಕರಣವನ್ನೇ ಪ್ರಧಾನವಾಗಿ ಮಾಡಿದರೆ ಪಾಠದ ಸ್ವಾರಸ್ಯ ಕೆಡುವುದು. ಇದರಿಂದ ಮಕ್ಕಳಲ್ಲಿ ಆಸಕ್ತಿ ಕುಸಿಯುವುದರ ಜೊತೆಗೆ, ವ್ಯಾಕರಣ ಕ್ಲಿಷ್ಟ ಎಂಬ ತೀರ್ಮಾನಕ್ಕೆ ಬಂದುಬಿಡುತ್ತಾರೆಂಬ ಉದ್ದೇಶದಿಂದ ಶಾಲಾ ಹಂತಗಳಿಗನುಗುಣವಾಗಿ ನಿಗಮ ಪದ್ಧತಿಯಲ್ಲಿ ವ್ಯಾಕರಣಾಂಶಗಳನ್ನು ಅಳವಡಿಸಲಾಗಿದೆ. ಶಾಲಾ ಪರಾಮರ್ಶನ ಗ್ರಂಥಗಳು ಪರಿಭಾಷೆಗಳನ್ನು ಕೆಲವು ಅನುಗಮನ ಪದ್ಧತಿಯಲ್ಲಿ, ನಿಗಮ ಪದ್ಧತಿಯ ವಿಶ್ಲೇಷಣಾ ಮಾದರಿಯಲ್ಲಿ ರೂಪಿತವಾಗಿವೆ.

ಇನ್ನು ಪ್ರೌಢಶಾಲಾ ಹಂತಕ್ಕೆ ಮಕ್ಕಳು ಬರುವ ಹೊತ್ತಿಗೆ ಭಾಷಾ ಪ್ರಭುತ್ವವನ್ನು ಪಡೆದುಕೊಂಡಿರುವುದರಿಂದ ಹಿಂದೆ ಕಲಿತಂತಹ ವ್ಯಾಕರಣಾಂಶಗಳ ಜೊತೆಗೆ ಮುಂದುವರಿದ ಪರಿಭಾಷೆಗಳನ್ನು ನಿಗಮ ಪದ್ಧತಿಯಲ್ಲಿ ಅಳವಡಿಸಿರುವುದು ಪಠ್ಯಗಳಿಂದ ತಿಳಿದುಬರುತ್ತದೆ. ಉದಾಹರಣೆ : ಸಂಧಿಗಳಲ್ಲಿ ಕನ್ನಡ ಸಂಧಿಗಳು ಮತ್ತು ಸಂಸ್ಕೃತ ಸಂಧಿಗಳು, ಅಲಂಕಾರಗಳಲ್ಲಿ ಶಬ್ದಾಲಂಕಾರಗಳು, ಅರ್ಥಾಲಂಕಾರಗಳು, ಛಂದಸ್ಸಿನಲ್ಲಿ

ಅಕ್ಷರಗಣ, ಮಾತ್ರಾಗಣ, ಅಂಶಗಣ, ವೃತ್ತಗಳು, ಕಂದ, ತ್ರಿಪದಿ, ಷಟ್ಪದಿ, ರಗಳೆ ಇತ್ಯಾದಿಗಳನ್ನು ಅಭ್ಯಾಸಗಳಡಿಯಲ್ಲಿ ಅಥವಾ 'ವ್ಯಾಕರಣ', 'ಛಂದಸ್ಸು ಶೀರ್ಷಿಕೆಗಳ' ಅಡಿಯಲ್ಲಿ ಅಳವಡಿಸಲಾಗಿದೆ. ಪ್ರೌಢಶಾಲಾ ಹಂತದ ನಂತರ ಬರುವ ಪದವಿಪೂರ್ವ ಹಂತದಲ್ಲಿ ವ್ಯಾಕರಣ ಗೌಣವಾಗಿರುವುದು ಕಂಡುಬರುತ್ತದೆ.

ಪ್ರಾಥಮಿಕ ಹಂತದಿಂದ ಪ್ರೌಢಹಂತದವರೆಗಿನ ಸಮಕಾಲೀನ ಶಾಲಾ ಪಠ್ಯಗಳಲ್ಲಿ ವ್ಯಾಕರಣಾಂಶಗಳನ್ನು ಅಳವಡಿಸಿರುವುದು ಸ್ಪಷ್ಟವಾಗಿ ಕಂಡುಬರುತ್ತದೆ. ಪ್ರಾಥಮಿಕ ಹಂತದಲ್ಲಿ ಮಕ್ಕಳಿಗೆ ಭಾಷೆ ಕಲಿಸಲೋಸುಗ ಪಠ್ಯಗಳು ರೂಪಿತವಾಗಿವೆ. ವ್ಯಾಕರಣ ಪರಿಭಾಷೆಯಿಂದ ಮುಕ್ತವಾಗಿವೆ. ನಂತರದ ಶಿಕ್ಷಣದ ಹಂತಗಳಲ್ಲಿ ಭಾಷೆಯ ಜೊತೆಗೆ ವ್ಯಾಕರಣದ ಪರಿಭಾಷೆಗಳನ್ನು ಸಾಧ್ಯವಾದಲ್ಲಿ ಆಧುನಿಕ ಭಾಷಾವಿಜ್ಞಾನದಿಂದ ಕಸಿಗೊಂಡ ರೂಪಗಳನ್ನು ಅಳವಡಿಸಲಾಗಿದೆ. ಮೊದಲು ಭಾಷೆ ನಂತರ ವ್ಯಾಕರಣ ಎಂಬ ಮಾತನ್ನು ಗಮನಿಸಿದಾಗ ಪ್ರಾಥಮಿಕ ಹಂತದ ಪಠ್ಯಗಳು ಭಾಷೆಯನ್ನು ಕಲಿಸಿದರೆ, ನಂತರದ ಹಂತದ ಪಠ್ಯಗಳು ಭಾಷೆಯ ಜೊತೆಗೆ ವ್ಯಾಕರಣಾಂಶಗಳನ್ನು ಕಲಿಸಿಕೊಡುತ್ತಿರುವುದು ಸ್ಪಷ್ಟವಾಗಿ ಕಂಡುಬರುತ್ತದೆ.

ಅಧ್ಯಾಯ – ಐದು

# ತಿಳಿದ ವ್ಯಾಕರಣ ಮತ್ತು ನುಡಿಯುವ ವ್ಯಾಕರಣ ಕಲಿಕೆ ಬಗೆಗೆ ಸಂವಾದ

## ಪ್ರಸ್ತಾವನೆ

ಶಾಲಾ ವಿವಿಧ ಹಂತಗಳಲ್ಲಿ ವ್ಯಾಕರಣಾಂಶಗಳನ್ನು ಹಿಂದೆಯೂ ಕಲಿಸುತ್ತಿದ್ದರು, ಈಗಲೂ ಕಲಿಸಲಾಗುತ್ತದೆ. ಒಂದು ಕಾಲಕ್ಕೆ ವ್ಯಾಕರಣವನ್ನು ಪ್ರತ್ಯೇಕ ಪಠ್ಯವನ್ನಿಟ್ಟು ಕಲಿಸಲಾಗುತ್ತಿತ್ತು. ಆದರೆ ಇತ್ತೀಚೆಗೆ ವ್ಯಾಕರಣವನ್ನು ಶಾಲಾ ವಿವಿಧ ಹಂತಗಳಲ್ಲಿ ಪಠ್ಯದ ಜೊತೆಜೊತೆಯಲ್ಲಿಯೇ ಪ್ರಯೋಗಾತ್ಮಕವಾಗಿ ಕಲಿಸಲಾಗುತ್ತಿದೆ. ವ್ಯಾಕರಣವು ಮಕ್ಕಳ ಭಾಷಾಕಲಿಕೆಗೆ ತೊಡಕಾಗುತ್ತದೆ, ಅದು ಕಠಿಣವಾದ ವಿಷಯ, ಸಂಸ್ಕೃತ ಭೂಯಿಷ್ಟವಾದದ್ದು, ಅದು ಬೋಧನೆಗೆ ನೀರಸವಾದುದು, ಕಬ್ಬಿಣದ ಕಡಲೆ ಇತ್ಯಾದಿ ಕಾರಣಗಳಿಂದ ಶಾಲಾ ಹಂತಗಳಲ್ಲಿ ವ್ಯಾಕರಣ ಬೇಕು ಎನ್ನುವವರು ಇದ್ದಾರೆ ಬೇಡ ಎನ್ನುವವರು ಇದ್ದಾರೆ. ಬೇಕು ಎನ್ನುವವರು ಸಾಂಪ್ರದಾಯಿಕ ವ್ಯಾಕರಣವನ್ನು ಒಪ್ಪಿಕೊಳ್ಳುತ್ತಾರೆಯೋ? ಅಥವಾ ಆಧುನಿಕ ವ್ಯಾಕರಣಕ್ಕೆ ಮಾರುಹೋಗುತ್ತಾರೆಯೋ? ಬೇಡ ಎನ್ನುವವರ ಕಾರಣಗಳೇನು? ಇತ್ಯಾದಿ ಕಾರಣಗಳನ್ನಿಟ್ಟುಕೊಂಡು ವ್ಯಾಕರಣಕಾರರನ್ನು, ಭಾಷಾವಿಜ್ಞಾನಿಗಳನ್ನು, ಪಠ್ಯಪುಸ್ತಕ ಸಮಿತಿಯ ಅಧ್ಯಕ್ಷರು ಮತ್ತು ಸದಸ್ಯರನ್ನು ಹಾಗೂ ಕನ್ನಡ ಭಾಷಾ ಶಿಕ್ಷಕರನ್ನು ಭೇಟಿಯಾಗಿ ಕೆಲವು ಪ್ರಶ್ನಾವಳಿಗಳನ್ನು ಕೇಳಿ ಅವುಗಳ ಬಗ್ಗೆ ಅವರ ಅಭಿಪ್ರಾಯಗಳನ್ನು ಈ ಅಧ್ಯಾಯದಲ್ಲಿ ಸಂಗ್ರಹಿಸಲಾಗಿದೆ.

### ೧. ಪ್ರೊ. ಟಿ. ವೆಂಕಟಾಚಲಶಾಸ್ತ್ರಿಗಳು

**೧. ಪಠ್ಯಪುಸ್ತಕದ ವ್ಯಾಕರಣಕ್ಕೂ ಪರಾಮರ್ಶನಕ್ಕಾಗಿಯೇ ರಚನೆಯಾಗಿರುವ ವ್ಯಾಕರಣಕ್ಕೂ ಪರಸ್ಪರ ಸಂಬಂಧ ಇದೆಯೇ? ಇದ್ದರೆ ಅದು ಹೇಗೆ?**

ಪಠ್ಯಪುಸ್ತಕದ ವ್ಯಾಕರಣಕ್ಕೂ ಪರಾಮರ್ಶನ ವ್ಯಾಕರಣಕ್ಕೂ ಪರಸ್ಪರ ಸಂಬಂಧ ಇದ್ದೇಇದೆ. ಪಠ್ಯಪುಸ್ತಕಗಳಲ್ಲಿಯ ಪದಗಳು, ಪದಪುಂಜಗಳು, ವಾಕ್ಯಗಳು ಎಲ್ಲಿಯವರೆಗೂ ಇರುತ್ತವೆಯೋ ಅಲ್ಲಿಯವರೆಗೂ ಅವುಗಳ ಸ್ವರೂಪವನ್ನು ಗುರುತಿಸಲು ಪರಾಮರ್ಶನ ಗ್ರಂಥಗಳೆ ಬೇಕು. ಪಠ್ಯಗಳು ವ್ಯಾಕರಣಬದ್ಧವಾಗಿ ರಚಿತವಾಗಿರುತ್ತವೆ. ಏಕೆಂದರೆ ಪಠ್ಯಗಳು ಸ್ವತಂತ್ರವಾಗಿರುತ್ತವೆ. ಪಠ್ಯಕ್ಕನುಗುಣವಾಗಿ ಭಾಷಾರಚನೆಗೆ ಸಂಬಂಧಿಸಿದಂತೆ ವ್ಯಾಕರಣಾಂಶಗಳನ್ನು ಹೇಳಿಕೊಡಲಾಗುತ್ತದೆ. ವಿವಿಧ

ಭಾಷಾಚಟುವಟಿಕೆಗಳಡಿಯಲ್ಲಿ ಪಠ್ಯಕ್ರಮವನ್ನು ರೂಪಿಸಲಾಗುತ್ತದೆ. ಹಾಗೆಂದಮಾತ್ರಕ್ಕೆ ವ್ಯಾಕರಣ ಕಲಿಸಲು ಪಠ್ಯಪುಸ್ತಕ ರೂಪಿಸಲಾಗುವುದಿಲ್ಲ. ಭಾಷಾಬಳಕೆ ಮತ್ತು ರಚನೆಯ ಸ್ವರೂಪ ತಿಳಿಯಲು ಪಠ್ಯಗಳು ಅಗತ್ಯ. ಈ ಸ್ವರೂಪದಿಂದ, ಬರವಣಿಗೆಯ ಕಲೆಯಿಂದ, ಭಾಷಾಶಿಸ್ತಿನಿಂದ ಪರಾಮರ್ಶನ ಗ್ರಂಥಗಳನ್ನು ಬರೆದುಕೊಂಡು ಬಂದಿದ್ದಾರೆ. ಹೀಗೆ ಬರೆಯುವಾಗ ವ್ಯಾಕರಣದ ಪರಿಭಾಷೆಗೆ ಬಂದಾಗ ಇಡೀ ವಾಕ್ಯದಲ್ಲಿ ಕಂಡುಬರುವ ರಚನೆಯನ್ನು ಪರಾಮರ್ಶನ ಗ್ರಂಥಗಳಿಂದಲೇ ತಿಳಿಯಬೇಕಾಗುತ್ತದೆ. ಪರಿಭಾಷೆಗಳ ಪರಿಜ್ಞಾನವಿದ್ದರೆ ಮಾತ್ರ ಉಚ್ಚಾರಶುದ್ಧಿ, ವಾಕ್ಯಶುದ್ಧಿ, ತರ್ಕಶುದ್ಧಿ ಬರಲುಸಾಧ್ಯ. ಶಾಲಾಪಠ್ಯಗಳ ವ್ಯಾಕರಣ ಸ್ವರೂಪವನ್ನು ಪರಾಮರ್ಶನ ಗ್ರಂಥಗಳ ಬಲದಿಂದಲೇ ನಿರ್ಧರಿಸುವುದರಿಂದ ಇವೆರಡಕ್ಕೂ ಪರಸ್ಪರ ಸಂಬಂಧ ಇದ್ದೇಇದೆ.

**೨. ಶಾಲಾವ್ಯಾಕರಣ ಕಲಿಕೆ ಬೇಕೆ ಬೇಡವೆ ಎಂಬುದರ ಬಗ್ಗೆ ಚರ್ಚೆ ಇದೆ. ಅದರ ಬಗ್ಗೆ ನಿಮ್ಮ ಅಭಿಪ್ರಾಯವೇನು?**

ಶ್ರೀಸಾಮಾನ್ಯ ವ್ಯಕ್ತಿಗೆ ವ್ಯಾಕರಣ ಅಗತ್ಯವಿಲ್ಲದಿರಬಹುದು ಅದರೆ ಶಾಲಾ ವಿವಿಧ ಹಂತಗಳಲ್ಲಿ ವ್ಯಾಕರಣ ಅವಶ್ಯಕವಾಗಿ ಬೇಕು. ವ್ಯಾಕರಣವನ್ನು ಒಂದು ಶಿಸ್ತಿನಿಂದ ಕಲಿಯದೇ ಇರುವುದರಿಂದ ಭಾಷೆಯ ಸ್ಥಿತಿ ಇಂದು ಹಾಳಾಗಿ ಹೋಗಿದೆ. ವ್ಯಾಕರಣ ಕಲಿಕೆ ಬೇಡವೆಂದರೆ ಇನ್ನೂ ಹಾಳಾಗಿ ಹೋಗುತ್ತದೆ. ಹಳೆಗನ್ನಡ ಕಾಲಘಟ್ಟದ ಕಾವ್ಯಗಳು ನಮಗೆ ಅರ್ಥವಾಗಬೇಕಾದರೆ ಕೇಶಿರಾಜನ ಶಬ್ದಮಣಿದರ್ಪಣ ಅಗತ್ಯವಾಗಿ ಬೇಕು. ಇಂದಿನ ಶಾಲಾಮಕ್ಕಳಿಗೆ ಶಬ್ದಮಣಿದರ್ಪಣದ ವ್ಯಾಕರಣಾಂಶಗಳೆಲ್ಲವನ್ನು ತಿಳಿಸಿಕೊಡುವುದರ ಅಗತ್ಯವಿಲ್ಲದೇ ಇರಬಹುದು. ಆದರೆ ಹೊಸಗನ್ನಡದಲ್ಲಿ ವಾಕ್ಯರಚನೆ ಶುದ್ಧವಾಗಿರಬೇಕಾದರೆ ವ್ಯಾಕರಣದ ಪ್ರಾಥಮಿಕಜ್ಞಾನ ಬೇಕು. ಏಕೆಂದರೆ ಪದಗಳನ್ನು ಪದಪುಂಜಗಳನ್ನು ವಾಕ್ಯಗಳನ್ನು ಸರಿಯಾಗಿ ಬಳಸುವುದಕ್ಕೆ ಮತ್ತು ರಚಿಸುವುದಕ್ಕೆ ವ್ಯಾಕರಣದ ಬಲವೆ ಮೂಲ. ಆ ಮೂಲವನ್ನು ಬಿಟ್ಟು ಭಾಷೆ ತಿಳಿಸುವುದು ಅವೈಜ್ಞಾನಿಕ. ಭಾಷೆ ಮೊದಲು ನಂತರ ವ್ಯಾಕರಣ. ಹೀಗಾಗಿ ಮಗುವಿಗೆ ಭಾಷೆಯ ಜೊತೆಯಲ್ಲಿ ವ್ಯಾಕರಣವನ್ನು ಶಾಲಾಪಠ್ಯಗಳಲ್ಲಿ ಪ್ರಾಯೋಗಿಕವಾಗಿ ಕಲಿಸಿಕೊಡುತ್ತಾ ಇದ್ದೇವೆ.

ಒಂದು ಕಾಲಕ್ಕೆ ವ್ಯಾಕರಣವನ್ನು ಪ್ರತ್ಯೇಕ ಪಠ್ಯಪುಸ್ತಕವನ್ನಾಗಿ (ನಾವು ಓದುವ ಕಾಲಕ್ಕೆ) ಕಲಿಸ್ತಾ ಇದ್ದರು. ಪ್ರತ್ಯೇಕವಾಗಿದ್ದ ವಿಷಯವನ್ನು ಇಂದು ಪಠ್ಯದ ಒಂದು ಭಾಗವಾಗಿ ಕಲಿಸಲಾಗುತ್ತಿದೆ. ಮಕ್ಕಳಿಗೆ ವ್ಯಾಕರಣಾಂಶಗಳನ್ನು ಕಲಿಸಲು ಕಡಿಮೆ ಮಾಡಿದಂತೆಲ್ಲ ಅವರು ಭಾಷೆಯ ಸ್ವರೂಪವನ್ನು ಅರಿಯಲು ಅಸಮರ್ಥರಾಗುವುದರಲ್ಲಿ

ಯಾವ ಸಂಶಯವೂ ಇಲ್ಲ. ಏಕೆಂದರೆ ಇವತ್ತು ಆಸಕ್ತಿಯಿಂದ ವ್ಯಾಕರಣವನ್ನು ಬೋಧಿಸುವ ಸಾಮರ್ಥ್ಯ ಶಿಕ್ಷಕರಲ್ಲಿ ಕಡಿಮೆಯಾಗಿರುವುದರಿಂದಲೇ ವ್ಯಾಕರಣ ಕಷ್ಟವೆಂಬ ನಿಲುವಿಗೆ ಬಂದು ನಿಂತಿದ್ದಾರೆ. ಶಾಸ್ತ್ರವಿಷಯಗಳನ್ನು ಬೋಧಿಸುವುದಕ್ಕೆ ಬೋಧಕರಿಗೆ ಸಾಮರ್ಥ್ಯವು ಬೇಕು. ಆ ಸಾಮರ್ಥ್ಯ ಶಿಕ್ಷಕರಲ್ಲಿ ಗೌಣವಾಗುತ್ತಿರುವುದರಿಂದ ವಿದ್ಯಾರ್ಥಿಗಳು ಕೂಡ ಆ ವಿಷಯ ಅರಿಯುವುದರಲ್ಲಿ ಹಿಂದೆ ಬಿದ್ದಿದ್ದಾರೆ. ಈ ಕಾರಣದಿಂದ ಮಕ್ಕಳಿಗೆ ಕಾಗುಣಿತ ಜ್ಞಾನವಿಲ್ಲ, ಅಕ್ಷರ ಜ್ಞಾನವಿಲ್ಲವೆಂದು ನಾವು ಗೊಣಗಾಡುತ್ತೇವೆ. ಆ ಗೊಣಗಾಡುವಿಕೆ ಕಡಿಮೆಯಾಗಬೇಕಾದರೆ ಶಾಲಾಹಂತಗಳಲ್ಲಿ ಮಕ್ಕಳ ಮಟ್ಟಕ್ಕನುಗುಣವಾಗಿ ವ್ಯಾಕರಣವನ್ನು ಕಲಿಸಬೇಕೆಂಬುದು ನನ್ನ ಅಭಿಪ್ರಾಯ.

**೩. ನಿಮ್ಮ ಸೇವಾವೃತ್ತಿ ಅನುಭವದ ಆಧಾರದ ಮೇಲೆ ಕಲಿಕೆಯ ಪಠ್ಯಪುಸ್ತಕಗಳು ಹೇಗಿರಬೇಕು. ನಿಮ್ಮ ಅಭಿಪ್ರಾಯವೇನು?**

ಇತ್ತೀಚೆಗೆ ಪಠ್ಯಪುಸ್ತಕಗಳು ತಮ್ಮ ಸ್ವರೂಪವನ್ನೇ ಕಳೆದುಕೊಳ್ಳುತ್ತಿವೆ. ಏಕೆಂದರೆ ರಾಜಕೀಯ, ಜಾತಿ, ವರ್ಗ, ಅಧಿಕಾರ ಇತ್ಯಾದಿಗಳ ಪ್ರಭಾವದಿಂದ ಅವುಗಳ ಸ್ವರೂಪವನ್ನು ಹಾಳುಮಾಡಲಾಗುತ್ತಿದೆ. ಯಾವಾಗಲೂ ಮಕ್ಕಳಿಗೆ ಸರ್ವಸಮಾನತೆಯ ಸಂಗತಿಗಳನ್ನು ಹೇಳಿಕೊಡಬೇಕು. ಪಠ್ಯಪುಸ್ತಕಗಳು ಮಕ್ಕಳ ಕಲಿಯುವಿಕೆಗೆ ಹೊರೆಯಾಗಬಾರದು. ಏಕೆಂದರೆ ಮಕ್ಕಳಿಗಾಗಿ ಪಠ್ಯಪುಸ್ತಕವೇ ಹೊರತು ಪಠ್ಯಪುಸ್ತಕಕ್ಕಾಗಿ ಮಕ್ಕಳಲ್ಲವೆಂಬುದನ್ನು ಮನಗಾಣಬೇಕು. ಮಕ್ಕಳಲ್ಲಿ ಭಾಷಾ ಸಾಮರ್ಥ್ಯ ಬೆಳೆಯಬೇಕಾದರೆ ವ್ಯಾಕರಣ ಜ್ಞಾನ ಅಗತ್ಯವಾಗಿ ಬೇಕು. ಆದರೆ ಆ ವ್ಯಾಕರಣವನ್ನು ಭಾಷಾಚಟುವಟಿಕೆಗಳ ಮೂಲಕ ಪ್ರಯೋಗಾತ್ಮಕವಾಗಿ ಅಳವಡಿಸಬೇಕು. ಇದರ ಜೊತೆಗೆ ಪದ್ಯದ ಸ್ವರೂಪವನ್ನರಿಯಲು ಛಂದಸ್ಸು, ಅಲಂಕಾರಗಳು ಇವುಗಳ ಪ್ರಾಥಮಿಕ ಜ್ಞಾನವನ್ನು ತಿಳಿಸಿಕೊಡುವ ಅಭ್ಯಾಸಗಳನ್ನು ಪಠ್ಯಗಳು ಒಳಗೊಂಡಿರಬೇಕು. ಮಕ್ಕಳಲ್ಲಿ ಸುಪ್ತವಾಗಿ ಅಡಗಿರುವ ಪ್ರತಿಭೆಗಳನ್ನು ಹೊರಹೊಮ್ಮಿಸಲು ನೆರವಾಗುವಂತೆ ಪಠ್ಯ ಅಭ್ಯಾಸಗಳಿರಬೇಕು. ವೈಚಾರಿಕತೆ, ವೈಜ್ಞಾನಿಕ ಮನೋಭಾವವನ್ನು ಬೆಳೆಸಲು ನೆರವಾಗುವಂತೆ ರಚಿಸಬೇಕು. ಭಾಷಾ ಕೌಶಲಗಳನ್ನು ವೃದ್ಧಿಸುವ ವಿವಿಧ ಭಾಷಾಭ್ಯಾಸಗಳನ್ನು ಪಠ್ಯಗಳು ಒಳಗೊಂಡಿರಬೇಕು. ಪಠ್ಯಪುಸ್ತಕವು ಗತಿಸಿಹೋದ ಸಂಗತಿಗಳನ್ನು ಮಾತ್ರ ಒಳಗೊಂಡಿರದೆ ಇಂದಿನ ಜ್ವಲಂತ ಸಮಸ್ಯೆಗಳ ಬಗ್ಗೆ ಬೆಳಕು ಚೆಲ್ಲುವಂತಿರಬೇಕು. ಕನ್ನಡ ಭಾಷಾ ಪಠ್ಯಪುಸ್ತಕ ಕನ್ನಡ ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ಹೆಸರು ಮಾಡಿದಂತ ಕವಿಗಳ ಸಾಹಿತ್ಯವನ್ನು ಒಳಗೊಂಡಿರಬೇಕು. ಪಠ್ಯಪುಸ್ತಕಗಳಲ್ಲಿ

ಶಿಕ್ಷಕರಿಗೆ ಮತ್ತು ವಿದ್ಯಾರ್ಥಿಗಳಿಗೆ ಅವಶ್ಯಕವಾದ ಸೂಚನೆಗಳಿರಬೇಕು. ಪಠ್ಯಪುಸ್ತಕದಲ್ಲಿ ಬಳಸುವ ಭಾಷೆ ಮಕ್ಕಳ ಮಟ್ಟಕ್ಕನುಗುಣವಾಗಿರಬೇಕು. ಒಟ್ಟಿನಲ್ಲಿ ಕನ್ನಡ ಭಾಷಾ ಬೋಧನೆಯ ಗುರಿ ಮತ್ತು ಉದ್ದೇಶಗಳ ಈಡೇರಿಕೆಯನ್ನು ಪೂರೈಸುವ ನಿಟ್ಟಿನಲ್ಲಿ ಪಠ್ಯಪುಸ್ತಕಗಳನ್ನು ರೂಪಿಸಬೇಕು.

**೪. ವ್ಯಾಕರಣವನ್ನು ಸೂತ್ರದ ಮೂಲಕ ಕಲಿಸುವುದು ಸೂಕ್ತವೋ? ಅಥವಾ ಉದಾಹರಣೆಗಳ ಮೂಲಕ ಕಲಿಸುವುದು ಸೂಕ್ತವೋ? ಇವೆರಡಕ್ಕಿಂತ ಭಿನ್ನವಾದ ವಿಧಾನದಿಂದ ಸುಲಭವಾಗಿ ಕಲಿಸಲು ಸಾಧ್ಯತೆ ಇದೆಯೇ?**

ಸೂತ್ರವನ್ನು ಹೇಳಿ ಉದಾಹರಣೆಗಳನ್ನು ಕೊಡುತ್ತಾ ಹೋಗುವುದು ನಿಗಮ ಪದ್ಧತಿಯಾದರೆ, ಉದಾಹರಣೆಗಳ ಮುಖಾಂತರ ನಿಯಮಕ್ಕೆ ಬರುವುದು ಅನುಗಮನ ಪದ್ಧತಿಯಾಗಿದೆ. ಇವೆರಡರಲ್ಲಿ ಯಾವುದನ್ನು ಯಾವ ವಿಧಾನದಲ್ಲಿ ಕಲಿಸಬೇಕು ಎನ್ನುವುದಕ್ಕಿಂತ, ಬೋಧಿಸುವ ಬೋಧಕನು ತನ್ನ ಸೌಲಭ್ಯಕ್ಕೆ ಯಾವುದನ್ನು ಸಮರ್ಥವಾಗಿ ಕಲಿಸಿಕೊಡಬಲ್ಲನು ಎಂಬುದರ ಮೇಲೆ ನಿರ್ಧಾರವಾಗುತ್ತದೆ. ನನ್ನ ಪ್ರಕಾರ ಸಮರ್ಥವಾಗಿ, ರುಚಿಕರವಾಗಿ ಕಲಿಸುವುದರ ಮೇಲೆ ನಿರ್ಧರಿಸಬಹುದು. ಇವೆರಡಕ್ಕಿಂತ ಭಿನ್ನವಾದ ವಿಧಾನವನ್ನು ಹೇಳುವುದಾದರೆ, ನಾನು ಬೋಧಿಸುವಾಗ ಮಕ್ಕಳಿಗೆ ತಪ್ಪು ವಾಕ್ಯಗಳನ್ನು ಬರೆದಾಗ/ನುಡಿದಾಗ ಮಕ್ಕಳೇ ಆ ತಪ್ಪುಗಳನ್ನು ಗುರುತಿಸುತ್ತಿದ್ದರು.

ಉದಾಹರಣೆಗೆ

೧. ಆನೆಯು ನಡೆದುಕೂಂಡು ಬರುತ್ತಾನೆ.

೨. ರಮೇಶ ಓದುತ್ತಾ ಇದ್ದಾಳೆ.

೩. ಬೆಕ್ಕು ಹಾರಿ ಹೋದನು.

೪. ಅವರು ಬಂದನು

ಈ ವಾಕ್ಯಗಳಲ್ಲಿಯ ತಪ್ಪುಗಳನ್ನು ಶಾಲಾ ಮಕ್ಕಳಷ್ಟೇಅಲ್ಲ ಶ್ರೀಸಾಮಾನ್ಯನು ಕೂಡ ಗುರುತಿಸುತ್ತಾನೆ. ಮಕ್ಕಳಿಗೆ ವಾಕ್ಯಗಳಲ್ಲಿಯ ತಪ್ಪುಗಳನ್ನು ಅವರಿಂದಲೇ ಗುರುತಿಸುವುದರ ಮೂಲಕ ವ್ಯಾಕರಣಾಂಶಗಳನ್ನು ಸ್ಪಷ್ಟಪಡಿಸಬಹುದು. ಈ ರೀತಿಯಲ್ಲೂ ಕಲಿಸಬಹುದು. ಇದಕ್ಕೆ ಪ್ರತ್ಯೇಕ ವಿಧಾನವೆಂದು ನಾನು ಹೆಸರಿಸಿಲ್ಲ. ಮಕ್ಕಳಿಗೆ ಸರಳವಾಗಿ ಕಲಿಸುವುದಕ್ಕೆ ನಾನು ಕಂಡುಕೊಂಡ ವಿಧಾನವಷ್ಟೆ. ಈ ರೀತಿ ಕಲಿಸುವುದರಿಂದ ಮಕ್ಕಳು ವಾಕ್ಯಗಳಲ್ಲಿಯ ತಪ್ಪುಗಳನ್ನು ಹುಡುಕುತ್ತಾರೆಂದರೆ ಅವರಿಗೆ ವ್ಯಾಕರಣದ ಪ್ರಾಥಮಿಕ

ಜ್ಞಾನ ಇದ್ದೇ ಇರುತ್ತದೆ. ಆ ಪ್ರಾಥಮಿಕಜ್ಞಾನ ಯಾವುದು? ಅದನ್ನರಿಯುವುದರಿಂದ ಭಾಷೆಯ ತಿಳುವಳಿಕೆಯನ್ನು ಪಡೆಯಲು ಸಾಧ್ಯವಾಗುತ್ತದೆಂಬುದನ್ನು ವ್ಯಾಕರಣಾಂಶಗಳ ಮೂಲಕ ಕಲಿಸಲಾಗುತ್ತದೆ. ಈ ಕಲಿಸುವಿಕೆ ಬೋಧಕರ ಸಾಮರ್ಥ್ಯಕ್ಕೆ ಬಿಟ್ಟದ್ದು. ಆದರೆ ಇತ್ತೀಚೆಗೆ ವ್ಯಾಕರಣವೆಂಬ ಶಾಸ್ತ್ರವಿಷಯವನ್ನು ಶಾಸ್ತ್ರೋಕ್ತವಾಗಿ ತಿಳಿದುಕೊಂಡು ರುಚಿಕರವಾಗಿ ಬೋಧನೆ ಮಾಡುವವರು ಕಡಿಮೆಯಾಗಿರುವುದರಿಂದ ಅದನ್ನು ಕಠಿಣ, ಕ್ಲಿಷ್ಟ ಇತ್ಯಾದಿ ಗೂಬೆ ಕೂರಿಸಿದ್ದಾರೆ. ಬೋಧಕರು ತಾವು ತಾಳ್ಮೆಯಿಂದ ಅದನ್ನು ತಿಳಿಯದೆ ಇರುವುದರಿಂದ ಅದು ಕಠಿಣವೆಂಬುದನ್ನು ಮಕ್ಕಳಲ್ಲಿ ಬಿಂಬಿಸುತ್ತಾರೆ. ಮನುಷ್ಯನ ಸಾಮರ್ಥ್ಯಕ್ಕೆ ಯಾವುದು ಕಠಿಣವಲ್ಲ. ಇವತ್ತು ಮಾಧ್ಯಮಗಳು ಬಂದಿರುವುದರಿಂದ ಮಕ್ಕಳು ಅವುಗಳ ಪ್ರಭಾವಕ್ಕೊಳಗಾಗಿ ಓದು, ಬರಹಗಳೆ ಕುಗ್ಗುತ್ತಾ ಇವೆ. ಹಾಗೆಂದ ಮಾತ್ರಕ್ಕೆ ಮಾಧ್ಯಮಗಳು ಬೇಡವೆಂದಲ್ಲ. ಯಾವುದನ್ನು ಹೇಗೆ ಬಳಸಿಕೊಳ್ಳಬೇಕೆಂಬುದರ ಮೇಲೆ ಅದರ ಸಾಧಕ ಬಾಧಕಗಳು ಅವಲಂಬಿತವಾಗಿರುತ್ತವೆ. ಹಾಗೆಯೇ ವ್ಯಾಕರಣವು ಅಷ್ಟೆ.

**೫. ವ್ಯಾಕರಣ ಕಲಿಸುವಾಗ ಪರಿಭಾಷೆ ಕಲಿಕೆಗೆ ಕಠಿಣವಾಗುತ್ತದೆಯೇ? ಕಠಿಣವಾದರೆ ಯಾವ ಪರಿಭಾಷೆಗಳು ಕಠಿಣವಾಗುತ್ತವೆ?**

ಶಾಸ್ತ್ರವಿಷಯವಾದ ವ್ಯಾಕರಣವು ತನ್ನದೇಆದ ಪರಿಭಾಷೆಯನ್ನು ಹೊಂದಿದೆ. ಪರಿಭಾಷೆಯ ಸ್ವರೂಪ ಶಿಕ್ಷಕನಿಗೆ ತಿಳಿದಿರಬೇಕು. ವ್ಯಾಕರಣದ ಪರಿಭಾಷೆ ಕಠಿಣವಾಗುವುದಿಲ್ಲ. ಏಕೆಂದರೆ ಮಕ್ಕಳ ಭಾಷಾಕಲಿಕೆಗೆ ವ್ಯಾಕರಣಾಂಶಗಳು ಭಾಷೆಯ ಒಡಲೊಳಗೆ ಅಂತರ್ಗತವಾಗಿರುತ್ತವೆ. ಅಲ್ಲದೆ ಶಾಲಾ ಹಂತಗಳಲ್ಲಿ ಮಕ್ಕಳ ಮಾನಸಿಕ ಮತ್ತು ದೈಹಿಕ ವಯೋಮಾನಕ್ಕೆ ತಕ್ಕಂತೆ ಕಲಿಸುವುದರಿಂದ ಕಷ್ಟವಾಗುವುದಿಲ್ಲ. ವ್ಯಾಕರಣಾಂಶಗಳೆಲ್ಲವು ಸೂತ್ರದಿಂದ ಕೂಡಿರುತ್ತವೆ. ಸೂತ್ರಗಳನ್ನು ಮಕ್ಕಳು ಅರ್ಥಸಹಿತ ತಿಳಿದು ಬಳಕೆ/ರಚನೆ ಮಾಡುವುದನ್ನು ಕಲಿತರೆ ಅದು ಅವರ ಉಸಿರಿರುವತನಕ ಮರೆಯಲು ಸಾಧ್ಯವಿಲ್ಲ. ಉದಾಹರಣೆಗೆ: ಒಂದು ಮಗು ಈಜಾಡುವುದನ್ನು ಕಲಿತರೆ ಅದು ಈಜುವುದನ್ನು ಎಂದಿಗೂ ಮರೆಯುವುದಿಲ್ಲ. ಹಾಗೆಯೇ ವ್ಯಾಕರಣವು ಕಲಿಯುವಾಗ ಮಕ್ಕಳಿಗೆ ಶಿಕ್ಷಕರು ಸರಿಯಾದ ರೀತಿಯಲ್ಲಿ ಕಲಿಸುವುದರಿಂದ ವ್ಯಾಕರಣದ ಪರಿಭಾಷೆಗಳು ಕಷ್ಟವಾಗುವುದಿಲ್ಲ. ಸರಿಯಾಗಿ ಕಲಿಸದೇ ಇರುವುದರಿಂದ ಕಠಿಣವೆಂಬ ಅಭಿಪ್ರಾಯಕ್ಕೆ ಬಂದಿದ್ದಾರೆಂಬುದು ನನ್ನ ಅಭಿಪ್ರಾಯ.

೬. ಇತ್ತೀಚೆಗೆ ವ್ಯಾಕರಣ ಅಧ್ಯಯನದ ಬಗ್ಗೆ ಆಧುನಿಕ ಚಿಂತನೆಗಳು ನಡೆಯುತ್ತಿವೆ. ಅದರ ಬಗ್ಗೆ ತಮ್ಮ ಅಭಿಪ್ರಾಯವೇನು?

ಆಧುನಿಕ ಚಿಂತನೆಯನ್ನು ನಾನು ಸ್ವಾಗತಿಸುತ್ತೇನೆ. ಅದರೆ ಆಧುನಿಕ ಚಿಂತನೆ ಚರಿತ್ರೆಗೆ ಅಪಪ್ರಚಾರ, ವ್ಯಭಿಚಾರ ಮಾಡುವ ನಿಟ್ಟಿನಲ್ಲಿ ಚಿಂತನೆಗಳು ಅನಗತ್ಯ. ವಿದ್ಯಾರ್ಥಿಗಳಿಗೆ ಹಾದಿತಪ್ಪಿಸುವ ಕೆಲಸವನ್ನು ಮಾಡುವ ಹಿನ್ನೆಲೆಯೊಳಗೆ ಚಿಂತನೆಗಳು ಬರಕೂಡದು. ಇಂಥ ಚಿಂತನೆಗಳನ್ನು ಶಾಲಾ ಪಠ್ಯಕ್ಕೆ ಅಳವಡಿಸಕೂಡದು. ಅದೆಲ್ಲ ಅಬದ್ಧ. ಮಾತಿನ ಸೌಲಭ್ಯ ನೋಡಿಕೊಂಡು ಬಳಕೆಗೊ, ರಚನೆಗೊ ವ್ಯತ್ಯಾಸವಿಲ್ಲವೆಂದು ಹೇಳುವ ಚಿಂತನೆಗಳು ಚಿಂತನೆಗಳಲ್ಲ. ನಮ್ಮ ಕನ್ನಡ ಸಾಹಿತ್ಯ ಚರಿತ್ರೆಯು ಸಾವಿರದೈನೂರು ವರ್ಷಗಳ ಸುದೀರ್ಘ ಚರಿತ್ರೆ ಹೊಂದಿದೆ. ಅಂತಹ ಚರಿತ್ರೆಯನ್ನು ಅಳಿಸಿಹಾಕುವ ಕೆಲಸ ಮಾಡುತ್ತಾರೆ. ನಾಲ್ಕಾರು ಜನ ಸೇರಿಕೊಂಡು ಒಂದು ಚಿಂತನೆ ಮಾಡಿದರೆ ಅದು ಅವರಿಗೆ ಮೀಸಲಾಗಿ ಉಳಿಯುತ್ತದೆ. ಸಾಮೂಹಿಕವಾಗಿ ಎಲ್ಲರೂ ಅದನ್ನು ಒಪ್ಪುವುದಿಲ್ಲ. ಎಲ್ಲಿಯತನಕ ಸಾಮೂಹಿಕ ಜನತೆಯ ಮುದ್ರೆ ಬೀಳುವುದಿಲ್ಲವೋ ಅಲ್ಲಿಯತನಕ ಇಂತಹ ಆಧುನಿಕ ಚಿಂತನೆಗಳಿಗೆ ಯಾವುದೇ ಬೆಲೆ ಇರುವುದಿಲ್ಲ. ಇವರು ಮಾಡಿದ ಬದಲಾವಣೆಯನ್ನು ಒಪ್ಪಿದರೆ ಹಿಂದಿನ ಚರಿತ್ರೆಯಲ್ಲಾ ಪ್ರಮಾದವೆಂಬ ಪ್ರಶ್ನೆ ಉದ್ಭವವಾಗುತ್ತದೆ. ಹಿಂದಿನ ಗ್ರಂಥ ರಾಶಿಗಳನ್ನೆಲ್ಲ ಸುಟ್ಟುಹಾಕಬೇಕೆ? ಇತ್ಯಾದಿ ಪ್ರಶ್ನೆಗಳನ್ನು ಶಾಲೆಯಲ್ಲಿ ಕಲಿಸುವಾಗ ಶಿಕ್ಷಕನಿಗೆ ವಿದ್ಯಾರ್ಥಿಗಳು ಕೇಳುತ್ತಾರೆ. ಆಧುನಿಕ ಚಿಂತನೆಯಲ್ಲಿ ಸಂಸ್ಕೃತದ ವ್ಯಾಕರಣಾಂಶಗಳಿಗೆ ಬದಲಾಗಿ ಕನ್ನಡದ್ದೇಆದ ಪದಗಳನ್ನು ಸೃಷ್ಟಿಸುವುದರಿಂದ ವಿದ್ಯಾರ್ಥಿಗಳಲ್ಲಿ, ಸಾಹಿತ್ಯಾಸಕ್ತರಲ್ಲಿ, ಶಿಕ್ಷಕರಲ್ಲಿ ಪರಿಭಾಷೆಗಳ ಗೊಂದಲ ಶುರುವಾಗುತ್ತದೆ. ಇದರಿಂದ ವಿಷಯಗಳನ್ನು ಕಲಿಯಲು ನಿರಾಸಕ್ತಿ ಹೊಂದುವ ಸಾಧ್ಯತೆ ಇದೆ. ಚಿಂತನೆ ಕಲಿಯಲು ಅಸಕ್ತಿದಾಯಕವಾಗಿರಬೇಕು.

೭. ಛಂದಸ್ಸು ಮತ್ತು ಅಲಂಕಾರಗಳು ವ್ಯಾಕರಣದ ವ್ಯಾಪ್ತಿಗೆ ಬರುತ್ತವೆಯೋ ಅಥವಾ ಇಲ್ಲವೋ?

ವ್ಯಾಕರಣಶಾಸ್ತ್ರದಂತೆ ಛಂದಶಾಸ್ತ್ರ, ಅಲಂಕಾರಶಾಸ್ತ್ರಗಳು ಕೂಡ ಸುದೀರ್ಘವಾದ ಚರಿತ್ರೆಯೊನ್ನೊಳಗೊಂಡ ಶಾಸ್ತ್ರವಿಷಯಗಳು. ಆದರೆ ಛಂದಸ್ಸು ಮತ್ತು ಅಲಂಕಾರ ಶಾಸ್ತ್ರಗಳ ಕ್ಷೇತ್ರವೇ ಬೇರೆ. ಭಾಷಾ ಪ್ರಭುತ್ವದ ದೃಷ್ಟಿಯಿಂದ ವ್ಯಾಕರಣವನ್ನು ಕಲಿಸಿದರೆ, ಪದ್ಯದಲ್ಲಿ ಬರುವ ಪ್ರಾಸ, ಶಿಥಿಲದಿತ್ವ, ಲಯ, ಪಾದಗಳು ಮುಂತಾದವುಗಳ ದೃಷ್ಟಿಯಿಂದ ಛಂದಸ್ಸು, ಅಲಂಕಾರಗಳನ್ನು ಕಲಿಸಿಕೊಡಲಾಗುತ್ತದೆ. ಭಾಷೆಯೊಳಗೆ

ವ್ಯಾಕರಣವು ಅಂತರ್ಗತವಾಗಿರುವಂತೆ ಪದ್ಯದೊಳಗೆ ಛಂದಸ್ಸು, ಅಲಂಕಾರಗಳು ಅಂತರ್ಗತವಾಗಿರುತ್ತವೆ. ಇವೆರಡರ ತಿಳುವಳಿಕೆ ಮಕ್ಕಳಿಗಿದ್ದರೆ ಗದ್ಯಪದ್ಯದಿಂದ ಕೂಡಿದ ಸಾಹಿತ್ಯವನ್ನು ಅರ್ಥಮಾಡಿಕೊಂಡು ಆ ನಿಟ್ಟಿನಲ್ಲಿ ಸಾಗಲು ಸಾಧ್ಯವಾಗುವುದೆಂಬ ದೃಷ್ಟಿಯಿಂದ ಅವುಗಳನ್ನು ನಾವು ಹಿಂದಿನಿಂದಲೂ ಪಠ್ಯದೊಳಗೆ ಅಳವಡಿಸುತ್ತಲಿದ್ದೇವೆ. ವ್ಯಾಕರಣವೇ ಬೇರೆ ಛಂದಸ್ಸು, ಅಲಂಕಾರಗಳೆ ಬೇರೆ. ವ್ಯಾಕರಣವು ಭಾಷೆಯ ಶುದ್ಧ ರಚನೆಯನ್ನು ತಿಳಿಸಲೆತ್ನಿಸಿದರೆ ಛಂದಸ್ಸು, ಅಲಂಕಾರಗಳು ಪದ್ಯದ ಲಯಬದ್ಧವಾದ ಹಾಡುಗಾರಿಕೆ, ಪ್ರಾಸ ಇತ್ಯಾದಿಗಳನ್ನು ತಿಳಿದುಕೊಳ್ಳುವುದರಿಂದ ಭಾಷೆಯ ದೋಷ ಅದೋಷಗಳನ್ನು, ಸೌಂದರ್ಯವನ್ನು ತಿಳಿಯಲು ಸಾಧ್ಯವಾಗುತ್ತದೆ. ವ್ಯಾಕರಣದ ಜೊತೆಗೆ ಛಂದಸ್ಸು, ಅಲಂಕಾರಗಳನ್ನು ಕಲಿಸಿಕೊಡಬೇಕೆಂಬುದು ನನ್ನ ಅಭಿಪ್ರಾಯ.

**೨. ಪ್ರೊ. ಕೆ. ವಿ. ನಾರಾಯಣ**

**೧. ಪಠ್ಯಪುಸ್ತಕದ ವ್ಯಾಕರಣಕ್ಕೂ ಪರಾಮರ್ಶನಕ್ಕಾಗಿಯೇ ರಚನೆಯಾಗಿರುವ ವ್ಯಾಕರಣಕ್ಕೂ ಪರಸ್ಪರ ಸಂಬಂಧ ಇದೆಯೇ? ಇದ್ದರೆ ಅದು ಹೇಗೆ?**

ವ್ಯಾಕರಣವನ್ನು ಕನ್ನಡ ಮೊದಲ ಭಾಷೆಯಾಗಿ ಕಲಿಸ್ತಾ ಇದೀವಿ ಅನ್ನುವುದಾದರೆ ಆ ಮಗುವಿಗೆ ವ್ಯಾಕರಣ ಗೊತ್ತಿರುತ್ತದೆ. ಆದರೆ ತನಗೆ ಗೊತ್ತಿರುವ ವ್ಯಾಕರಣ ಯಾವುದು ಅಂತ ಗೊತ್ತಿಲ್ಲ. ಸಂಧಿ ನಿಯಮಗಳು, ಸಮಾಸ ನಿಯಮಗಳು ಯಾವು ಗೊತ್ತಿರೋದಿಲ್ಲ. ಯಾವ ಕನ್ನಡಿಗರಿಗೂ ಗೊತ್ತಿಲ್ಲ. ವ್ಯಾಕರಣದ ನಿಯಮಗಳು ಎಲ್ಲರಿಗೂ ತಿಳಿದಿರುತ್ತವೆ. ಅದರಲ್ಲಿ ಅವರು ತಪ್ಪು ಮಾಡುವುದಿಲ್ಲ. ಶಾಲಾವ್ಯಾಕರಣಗಳಾಗಲಿ, ಪರಾಮರ್ಶನ ವ್ಯಾಕರಣಗಳಾಗಲಿ ಎರಡನೆಯ ಭಾಷೆಯಾಗಿ ಕನ್ನಡವನ್ನು ಕಲಿಯುವವರಿಗೆ ಅಗತ್ಯವಾಗಿ ನನ್ನ ಪ್ರಕಾರ ಬೇಕು. ಉದಾಹರಣೆಗೆ : ತೆಲುಗು ಕನ್ನಡ, ಉರ್ದು ಕನ್ನಡ ಹೀಗೆ ಎರಡನೆಯ ಭಾಷೆಯಾಗಿ ಕನ್ನಡವನ್ನು ಕಲಿಯುವ ಮಕ್ಕಳಿಗೆ ವ್ಯಾಕರಣದ ನಿಯಮಗಳನ್ನು ಹೇಳಿಕೊಡಬೇಕಾಗುತ್ತದೆ. ಏಕೆಂದರೆ ಅನೌಪಚಾರಿಕವಾಗಿ ಭಾಷೆಯನ್ನು ಕಲಿಯದಿದ್ದರೆ ಭಾಷೆಯ ರಚನೆ ಪರಿಚಯ ಮಾಡಿಕೊಡುವಾಗ ಎಲ್ಲ ಇದೆ ಅಂತ ತೋರಿಸಿಕೊಡಬಹುದು ಅಷ್ಟೆ, ಕಲಿಸುವುದಲ್ಲ. ಭಾಷಿಕ ರಚನೆಯ ನಿಯಮಗಳನ್ನು ಬಳಸಿ ಹೊಸಹೊಸ ರಚನೆಗಳನ್ನು ಕಟ್ಟುವ ಹಾಗೆ ಮಾಡಬೇಕು. ಸಾಮಾನ್ಯವಾಗಿ ಶಾಲಾಪಠ್ಯಪುಸ್ತಕಗಳಲ್ಲಿ ಪದವಿಭಜಿಸಿ ಬರೆಯಿರಿ, ಕೂಡಿಸಿ ಬರೆಯಿರಿ, ಪ್ರತ್ಯಯಗಳನ್ನು ಗುರುತಿಸಿ ಇತ್ಯಾದಿ ಪ್ರಶ್ನೆಗಳನ್ನು ಅಭ್ಯಾಸದಲ್ಲಿ ಕೊಟ್ಟಿರುತ್ತಾರೆ. ಉದಾಹರಣೆಗೆ : ಮರದಲ್ಲಿ, ಕಿಟಕಿಯಲ್ಲಿ ಈ ರೀತಿಯ ನಿಯಮ ಸರಿಯಿದೆ. ಆದರೆ ಈ ರೀತಿ ಗೊತ್ತಿರುವ

ನಿಯಮ ಕಲಿಸುವುದಲ್ಲ. ಒಂದು ಕಡೆ ನಾಮಪದ ಕೊಟ್ಟು ಅಲ್ಲಿ, ಅನ್ಯ ಪ್ರತ್ಯಯಗಳನ್ನು ಕೊಟ್ಟು ಅವೆರಡನ್ನು ಕೂಡಿಸಿ ಬರೆಯಲು ಹೇಳಿದಾಗ ತಮಗೆ ಗೊತ್ತಿರುವ ನಿಯಮವನ್ನು ಮಕ್ಕಳು ಬಳಸುತ್ತಾರೆ. ಇದನ್ನು ನಾವು ಹೇಳಿಕೊಡುವ ಅಗತ್ಯವಿಲ್ಲ. ಅಪರಿಚಿತವಾದ ನಾಮಪದವನ್ನು ಕೊಟ್ಟಾಗಲು ಪ್ರತ್ಯಯ ಹಚ್ಚಿ ಬಳಸುವಾಗ ಮಕ್ಕಳು ತಪ್ಪು ಮಾಡುವುದಿಲ್ಲ. ತರಗತಿಯಲ್ಲಾಗಲಿ, ಭಾಷಾಭ್ಯಾಸದಲ್ಲಾಗಲಿ, ಪರೀಕ್ಷೆಯಲ್ಲಾಗಲಿ ವ್ಯಾಕರಣದಲ್ಲಿ ಒಡೆದು ನೋಡುವ ಬಗೆಯನ್ನು ಕಲಿಸಬೇಕಾಗಿಲ್ಲ. ಶಾಲಾ ವ್ಯಾಕರಣದಲ್ಲಿ ಕಟ್ಟುವ ಕ್ರಿಯೆಯನ್ನು ಹೇಳಿಕೊಡಬೇಕು. ಪರಾಮರ್ಶನ ವ್ಯಾಕರಣಗಳು ಬಹುಮಟ್ಟಿಗೆ ಬಿಡಿಬಿಡಿಯಾಗಿ ಒಡೆದು ನೋಡುವ ಪ್ರಕ್ರಿಯೆಯನ್ನು ಹೇಳುತ್ತವೆ. ಶಾಲಾವ್ಯಾಕರಣಗಳ ಲಕ್ಷಣ ಕಟ್ಟುವಿಕೆ. ಪರಾಮರ್ಶನ ವ್ಯಾಕರಣಗಳ ಲಕ್ಷಣ ಒಡೆಯುವಿಕೆ. ಅಥವಾ ಬಿಡಿಬಿಡಿ ಮಾಡುವುದು, ಹೇಳುವುದು ಅಂತ ನನ್ನ ಅಭಿಪ್ರಾಯವಾಗಿದೆ. ಪಠ್ಯಪುಸ್ತಕದ ವ್ಯಾಕರಣ ಮತ್ತು ಪರಾಮರ್ಶನ ವ್ಯಾಕರಣ ಎರಡಕ್ಕೂ ನಿಯಮ ಒಂದೆ. ಆದರೆ ನಿಯಮವನ್ನು ಬಳಸುವ ವಿಧಾನ ಬೇರೆ ಬೇರೆ. ಒಂದು ರೀತಿಯಲ್ಲಿ ನಿಗಮ ಪದ್ಧತಿ, ಅನುಗಮನ ಪದ್ಧತಿಯಂತಲೂ ತಿಳಿಯಬಹುದು. ಪಠ್ಯಪುಸ್ತಕಗಳು ಮತ್ತು ಪರಾಮರ್ಶನ ವ್ಯಾಕರಣಗಳು ಇದನ್ನೇ ಹೇಳುತ್ತವೆ. ಬಹುಮಟ್ಟಿಗೆ ಎಲ್ಲರೂ ಒಡೆಯುವುದನ್ನು ಹೇಳಿಕೊಡುತ್ತಾರೆ.

**೨. ಶಾಲಾವ್ಯಾಕರಣ ಕಲಿಕೆ ಬೇಕೆ ಬೇಡವೆ ಎಂಬುದರ ಬಗ್ಗೆ ಚರ್ಚೆ ಇದೆ. ಅದರ ಬಗ್ಗೆ ನಿಮ್ಮ ಅಭಿಪ್ರಾಯವೇನು?**

ವ್ಯಾಕರಣ ಎನ್ನುವುದು ಪಾಠಮಾಡುವ ಶಿಕ್ಷಕರಿಗೆ ಗೊತ್ತಿರಬೇಕು. ಆದರೆ ತಮಗೆ ಗೊತ್ತಿರುವುದನ್ನು ಹೇಳಿಕೊಡುವುದಾಗಲಿ ಅಥವಾ ತಮಗೆ ಗೊತ್ತಿರುವ ವ್ಯಾಕರಣ ಪರಿಭಾಷೆಗಳನ್ನು ಕಲಿಸುವುದಲ್ಲ. ವ್ಯಾಕರಣಾಂಶಗಳನ್ನು ಬಳಸಿ ಕನ್ನಡ ಭಾಷೆಯನ್ನು ಹೇಗೆ ಕಟ್ಟಬೇಕು ಎಂಬುದನ್ನು ಕಲಿಸಿಕೊಡಬೇಕು. ಮಕ್ಕಳು ನಿಯಮವನ್ನು ಬಳಸಬೇಕು. ಆದರೆ ನಿಯಮವನ್ನು ಹೇಳಿಕೊಡುವುದಲ್ಲ. ನಿಯಮದ ಮುಖಾಂತರ ಹೊಸ ಹೊಸ ರಚನೆಗಳನ್ನು ಕಟ್ಟುವುದನ್ನು, ರೂಪಿಸುವುದನ್ನು ಕಲಿಸಿಕೊಡಬೇಕು. ಚೆಸ್ ಆಟವನ್ನು ಹೇಳಿಕೊಡುವುದು ಅಂದ್ರೆ ನಿಯಮ ಹೇಳಿಕೊಡುವುದಲ್ಲ. ಹೊಸ ಹೊಸ ಅಟಗಳನ್ನು ಆಡ್ತಾ ಇದ್ರೆ ಜಾಣ್ಮೆ ಹೆಚ್ಚುತ್ತದೆ. ಇದರಿಂದ ಆಟವನ್ನು ಸುಲಭವಾಗಿ ಆಡಬಹುದು. ಭಾಷೆಯ ಬಳಕೆಯು ಹಾಗೆಯೇ. ಔಪಚಾರಿಕ ವಲಯಗಳಲ್ಲಿ ಭಾಷಾ ಬಳಕೆಯನ್ನು ಕಲಿಸಬೇಕು. ವಿವಿಧ ವಲಯಗಳಲ್ಲಿ ಅಪರಿಚಿತರೊಂದಿಗೆ ಹೇಗೆ ಭಾಷಾಬಳಕೆ

ಮಾಡಬೇಕೆಂಬುದನ್ನು ಹೇಳಿಕೊಡಬೇಕು. ಇದಕ್ಕೆ ವ್ಯಾಕರಣವನ್ನು ಓನ್ನೆಲೆಯಾಗಿ ಕಟ್ಟುವುದನ್ನು ಕಲಿಸಿಕೊಡಬೇಕು. ಈಗಿರುವ ಪಠ್ಯಗಳಲ್ಲಿ ವ್ಯಾಕರಣಾಂಶಗಳಾದ ಸಂಧಿ, ಸಮಾಸ, ಕ್ರಿಯಾಪದ ರಚನೆ, ಅವ್ಯಯ ಇತ್ಯಾದಿಗಳನ್ನೆಲ್ಲ ನನ್ನ ಪ್ರಕಾರ ಹೇಳಿಕೊಡಬೇಕಾಗಿಲ್ಲ. ಹಾಗೆಂದ ಮಾತ್ರಕ್ಕೆ ವ್ಯಾಕರಣ ಬೇಡ ಅಂತ ನಾನು ಹೇಳ್ತಾ ಇಲ್ಲ. ಆದರೆ ಅದನ್ನು ಶಾಲೆಯಲ್ಲಿ ಹೇಗೆ ಬೋಧಿಸಬೇಕು ಮತ್ತು ಬದಲಾವಣೆಯಾಗಬೇಕೆಂಬುದು ನನ್ನ ಅಭಿಪ್ರಾಯ. ವ್ಯಾಕರಣದ ಪರಿಭಾಷೆಗಳನ್ನು ಹೇಳುವುದೇ ಬೇಡ. ಇವುಗಳನ್ನು ಹೇಳುವುದರಿಂದ ಕಠಿಣ, ಕಷ್ಟ, ಭಾರವನಿಸುತ್ತದೆ. ಇದರಿಂದ ಮಕ್ಕಳ ತಿಳುವಳಿಕೆಯನ್ನು ಹೆಚ್ಚು ಮಾಡಲು ಸಾಧ್ಯವಿಲ್ಲ. ವ್ಯಾಕರಣ ಕಲಿಸುವುದು ಒಂದು ರೀತಿ ಈಜುವುದನ್ನು ಹೇಳಿಕೊಟ್ಟಂಗೆ. ಅಂದ್ರೆ ನಿಯಮ ಹೇಳುವುದರಿಂದ ಏನೂ ಪ್ರಯೋಜನವಿಲ್ಲ. ನೀರಿಗೆ ಬಿದ್ದಾಗ ತನ್ನಷ್ಟಕ್ಕೆ ತಾನೆ ಕಲಿತಾನೆ. ಹಾಗೆಯೇ ಭಾಷೆಯನ್ನು ಬಳಸುವುದನ್ನು ಹೇಳಿಕೊಡಬೇಕೆ ವಿನಹ ಸಂಧಿ, ಸಮಾಸ ಮಾಡುವುದಲ್ಲ. ಶಾಲಾ ವ್ಯಾಕರಣವನ್ನು ಈಗಿರುವ ಪದ್ಧತಿಯಲ್ಲಿ ಕಲಿಸ್ತಾ ಇರುವುದು ನಿರುಪಯುಕ್ತ, ಭಾರ, ಹೆಚ್ಚು ಕಷ್ಟವಾಗುತ್ತದೆಂಬುದು ನನ್ನ ಅಭಿಪ್ರಾಯ. ಮಕ್ಕಳು ಭಾಷೆಯನ್ನು ಕೇಳಿಸಿಕೊಂಡು ಅರ್ಥಮಾಡಿಕೊಳ್ಳುವುದು, ತಾವೇ ಮಾತನಾಡುವ ಎಲ್ಲಾ ಕೌಶಲಗಳು ಇರುವುದರಿಂದ ಭಾಷಿಕ ರಚನೆಯ ನಿಯಮಗಳನ್ನು ಸರಿಯಾಗಿ ತಿಳಿದುಕೊಂಡರೆ ಅವರ ಕೊನೆಉಸಿರಿರುವವರೆಗೂ ಇರುತ್ತವೆ. ಒಟ್ಟಿನಲ್ಲಿ ಮಕ್ಕಳನ್ನು ಹೊಸಬಗೆಯ ರಚನೆಗಳಲ್ಲಿ ತೊಡಗುವ ಹಾಗೆ ನಾವು ಕಲಿಸಿಕೊಡಬೇಕಾಗಿದೆ.

**೩. ನಿಮ್ಮ ಸೇವಾವೃತ್ತಿ ಅನುಭವದ ಆಧಾರದ ಮೇಲೆ ಕಲಿಕೆಯ ಪಠ್ಯಪುಸ್ತಕಗಳು ಹೇಗಿರಬೇಕು? ನಿಮ್ಮ ಅಭಿಪ್ರಾಯವೇನು?**

ಪಠ್ಯಪುಸ್ತಕಗಳಲ್ಲಿಯ ಪಠ್ಯ ಎನ್ನುವುದು ಚಿಮ್ಮುವ ಹಲಗೆಯಂತೆ ಇರಬೇಕು. ಪಠ್ಯಗಳು ದಾರಿಗಳೆ ವಿನಹ ಗುರಿಗಳಲ್ಲ. ಪಠ್ಯಗಳಲ್ಲಿಯೆ ಸುತ್ತಾಡುವುದಲ್ಲ. ಉದಾಹರಣೆಗೆ: ಸಂಸ್ಕೃತಿಯನ್ನು ಬಿಂಬಿಸುವ ಒಂದು ಹಬ್ಬದ ಬಗ್ಗೆ ಪಠ್ಯವಿದ್ದರೆ ಅದರ ಬಗ್ಗೆ ನಿರೂಪಣೆಯನ್ನು ಕೊಡಲಾಗಿರುತ್ತದೆ. ಈ ಹಬ್ಬದ ಬಗ್ಗೆ ಅರಿಯುವುದು ಮೊದಲ ಆದ್ಯತೆಯಾಗಿರುತ್ತದೆ. ಈ ನಿರೂಪಣೆಯ ಮಾದರಿಯನ್ನಿಟ್ಟುಕೊಂಡು ಭಾಷೆಯ ರಚನೆಯನ್ನು ಪುನರಾವರ್ತಿಸಬೇಕು. ಅಂದರೆ ಭಾಷೆಯನ್ನು ಪಠ್ಯದ ಆಚೆ ಬೇರೆ ಬೇರೆ ಬಳಕೆಯ ಬಗೆಗಳಿಗೆ ಆ ಪಠ್ಯವನ್ನು ಬಳಸಿಕೊಳ್ಳಬೇಕು. ಅದಕ್ಕೆ ಅನುಕೂಲವಾಗುವಂತೆ ಪ್ರತಿಯೊಬ್ಬ ಶಿಕ್ಷಕರಿಗೂ ಮಾರ್ಗದರ್ಶನ ಕೊಡಬೇಕು. ಪಠ್ಯಪುಸ್ತಕ ರಚಿಸಿ ಅದಕ್ಕೆ

ಅಭ್ಯಾಸಸೂಚಿ ಕೊಟ್ಟರೆ ಸಾಲದು. ಶಿಕ್ಷಕರಿಗೆ ಪಠ್ಯಪುಸ್ತಕದ ಜೊತೆಗೆ ಕೈಪಿಡಿ ಕೊಡಬೇಕು. ಪಠ್ಯವನ್ನು ಭಾಷಿಕ ವಿವಿಧ ರೂಪಗಳನ್ನು ಬಳಸಿಕೊಂಡು ಹೇಗೆ ಬೋಧಿಸಬೇಕೆಂಬುದನ್ನು ಕೈಪಿಡಿ ಹೊಂದಿರಬೇಕು. ಕೈಪಿಡಿಯಲ್ಲಿ ಮಾದರಿಯಾಗಿ ನಾಲ್ಕಾರು ಚಟುವಟಿಕೆಗಳನ್ನು ಹೇಳಿಕೊಡುವುದರ ಮೂಲಕ ಕಲಿಕಾರ್ಥಿಗಳನ್ನು ಹತ್ತಾರು ಭಾಷಾ ಚಟುವಟಿಕೆಗಳಲ್ಲಿ ಸೃಜನಶೀಲತೆಯಿಂದ, ಕ್ರಿಯಾಶೀಲತೆಯಿಂದ ತೊಡಗಿಕೊಳ್ಳುವಂತೆ ಮಾಡಬೇಕು. ಆಗ ಕಲಿಕಾರ್ಥಿಗಳು ಭಾಷಾ ಬಳಕೆ ಮತ್ತು ರಚನೆಯ ಸ್ವರೂಪವನ್ನು ಅರಿತು ಹೊಸ ಹೊಸ ರಚನೆಗಳನ್ನು ಕಟ್ಟುವುದನ್ನು ಕಲಿಯುತ್ತಾರೆ. ಆಗ ಭಾಷಾ ವಿಷಯದ ಬಗ್ಗೆ ಗೊಣಗುವಿಕೆ, ನಿರ್ಲಕ್ಷ್ಯ, ಅಸಡ್ಡೆಗಳು ತಾವಾಗಿಯೆ ಮಾಯವಾಗುತ್ತವೆಂಬುದು ನನ್ನ ಅಭಿಪ್ರಾಯ.

**೪. ವ್ಯಾಕರಣವನ್ನು ಸೂತ್ರದ ಮೂಲಕ ಕಲಿಸುವುದು ಸೂಕ್ತವೋ ಅಥವಾ ಉದಾಹರಣೆಗಳ ಮೂಲಕ ಕಲಿಸುವುದು ಸೂಕ್ತವೋ ? ಇವೆರಡಕ್ಕಿಂತ ಭಿನ್ನವಾದ ವಿಧಾನದಿಂದ ಸುಲಭವಾಗಿ ಕಲಿಸಲು ಸಾಧ್ಯತೆ ಇದೆಯೇ?**

ಯಾವುದೇ ಒಂದು ಕೆಲಸವನ್ನು ಯಾಕೆ ಮಾಡಬೇಕು ಎಂದು ಗೊತ್ತಿದ್ರೆ ಹೇಗೆ ಮಾಡಬೇಕು ಎಂಬುದನ್ನು ರೂಪಿಸಿಕೊಳ್ಳಬೇಕಾಗುತ್ತದೆ. ಕಲಿಕಾರ್ಥಿಗಳಿಗೆ ಭಾಷೆಯ ರಚನೆಯನ್ನು ತಿಳಿಹೇಳುವುದು ಶಾಲಾಪಠ್ಯಗಳ ಗುರಿಯಲ್ಲ. ಕಲಿಕಾರ್ಥಿಗಳಿಗೆ ವ್ಯಾಕರಣ ಗೊತ್ತಿರುತ್ತದೆ. ಅದನ್ನು ಅವರಿಗೆ ಬಳಸುವುದನ್ನು ತಿಳಿಸಿಕೊಡಬೇಕು. ಭಾಷಿಕ ರಚನೆಯ ಎಷ್ಟೋ ನಿಯಮಗಳನ್ನು ಕಲಿಕಾರ್ಥಿಗಳು ಬಳಸದೇ ಇರಬಹುದು. ಅದಕ್ಕೆ ಬೇಕಾದಂತಹ ಬೇರೆ ಬೇರೆ ಭಾಷಾ ಚಟುವಟಿಕೆಗಳನ್ನು ಶಿಕ್ಷಕರು ರೂಪಿಸಬೇಕು. ಅದು ಎಲ್ಲಾ ಶಿಕ್ಷಕರಿಗೂ ರೂಪಿಸಲಿಕ್ಕೆ ಸಾಧ್ಯ ಇಲ್ಲದೇ ಇರಬಹುದು. ಆದ್ದರಿಂದ ಅಂತಹ ಚಟುವಟಿಕೆಗಳನ್ನು ರೂಪಿಸಿದಂತಹ ಕೋಶವನ್ನು ಪಠ್ಯಪುಸ್ತಕದ ನಿರ್ಮಾತೃಗಳು ಎಲ್ಲಾ ಶಿಕ್ಷಕರಿಗೂ ಒದಗಿಸಬೇಕು. ಮೌಲ್ಯಮಾಪನದಲ್ಲಿ ಇದು ಬಳಕೆಯಾಗುತ್ತಾ ಬಂದಾಗ ಶಿಕ್ಷಕರು ಅದನ್ನು ನೋಡಿ ಅಭ್ಯಾಸಮಾಡಿ ಹತ್ತಾರು ಚಟುವಟಿಕೆಗಳನ್ನು ಮಾಡುವುದರ ಮುಖಾಂತರ ಕಲಿಸಲು ಮುಂದಾಗಬೇಕು. ಪಠ್ಯಪುಸ್ತಕದಲ್ಲಿ ಪಠ್ಯವಸ್ತು ಮಾತ್ರ ಇರಬೇಕು. ಇತರೆ ಯಾವುದೇ ಅಭ್ಯಾಸವಿರಕೂಡದು. ಶಿಕ್ಷಕರು ತಮಗೆ ನೀಡಿದ ಕೈಪಿಡಿಯನ್ನೋದಿಕೊಂಡು ಪಠ್ಯವಸ್ತುವಿಗಾಗಿ ವಿವಿಧ ಚಟುವಟಿಕೆಗಳನ್ನು ತಾವೇ ರೂಪಿಸಿಕೊಳ್ಳುವುದರ ಮುಖಾಂತರ ಬೋಧಿಸಬೇಕು.

ನಿಗಮ ಮತ್ತು ಅನುಗಮನ ಬೋಧನಾ ಪದ್ಧತಿಗಳನ್ನು ಬಿಟ್ಟುಬಿಡೋಣ. ನನಗೆ ಭಾಷಾ ಚಟುವಟಿಕೆಗಳಲ್ಲಿ ತೊಡಗಿಸಿಕೊಳ್ಳುವಿಕೆ ಬಹಳ ಮುಖ್ಯ. ಪಠ್ಯಪುಸ್ತಕ ನಿರ್ಮಾತೃಗಳು ಪಠ್ಯಪುಸ್ತಕದಲ್ಲಿ ಶಿಕ್ಷಕರಿಗೆ ವಿವಿಧ ಚಟುವಟಿಕೆಗಳಲ್ಲಿ ತೊಡಗಿಸಿಕೊಳ್ಳಿ ಎಂದು ಹೇಳಿದರೆ ಸಾಲದು. ಅವರು ಕೈಪಿಡಿ ಮಾಡಿಕೊಡಬೇಕು. ಅಂದರೆ ಪಠ್ಯಕ್ಕೆ ಬೇಕಾದ ಭಾಷಾಚಟುವಟಿಕೆಗಳ ಕೋಶವನ್ನು ಮುದ್ರಿಸಿಕೊಡಬೇಕು. ಶಿಕ್ಷಕರಿಗೆ ಕೈಪಿಡಿ ಕೊಡುವುದು ನಮ್ಮ ಕರ್ನಾಟಕ ರಾಜ್ಯದಲ್ಲಿ ಹೊಸದೇನಲ್ಲ. ೧೯೫೪-೧೯೫೫ರಲ್ಲಿ ನ.ಭದ್ರಯ್ಯನವರು ಕಮಿಷ್ನರ್ ಆಗಿದ್ದಾಗ ಶಿಕ್ಷಕರಿಗೆ ಕೈಪಿಡಿಯನ್ನು ಮಾಡಿಕೊಟ್ಟಿದ್ದರು. ಜೊತೆಗೆ 'ಜೀವನ ಶಿಕ್ಷಣ' ಎಂಬ ಶೈಕ್ಷಣಿಕ ಮಾಸಪತ್ರಿಕೆ ಇತ್ತು. ಅದು ಈಗಾಲೂ ಬರ್ತಾ ಇದೆ. ಆಯಾ ವರ್ಷಗಳಲ್ಲಿ ಪಠ್ಯಪುಸ್ತಕಗಳಿಗೆ ಅನುಗುಣವಾಗಿ ಚಟುವಟಿಕೆಗಳನ್ನು ರೂಪಿಸಿಕೊಳ್ಳಲು ವಿವಿಧ ಲೇಖನಗಳು ಬರ್ತಾ ಇದ್ದವು. ಶಾಲೆಗೆ ತಪ್ಪದೆ ಪತ್ರಿಕೆ ಹೋಗ್ತಾ ಇತ್ತು. ಶಿಕ್ಷಕರು ಅವುಗಳನ್ನೋದಿ ರೂಪಿಸಿಕೊಳ್ಳುತ್ತಿದ್ದರು. ಈ ವಿಧಾನವನ್ನು ನಾವು ಇಂದು ಮರೆತುಬಿಟ್ಟಿದ್ದೇವೆ. ಇಂದಿನ ಶಿಕ್ಷಕರ ಪಾಠದ ಗುರಿ ಏನೆಂದರೆ ಪಾಠದ ತಿರುಳನ್ನು ಹೇಳುವುದು. ಮಕ್ಕಳ ಭಾಷಾಮಟ್ಟದ ಬಗ್ಗೆ ಎಲ್ಲರೂ ಗೋಳೋ ಅಂತ ಅಳ್ತಾರೆ. ಅಕ್ಷರ ಜ್ಞಾನವಿಲ್ಲ, ಕಾಗುಣಿತದ ಅರಿವೆ ಇಲ್ಲ ಇತ್ಯಾದಿಗಳೆಲ್ಲ ಕಡಿಮೆಯಾಗಬೇಕಾದರೆ ಪಠ್ಯದ ತಿರುಳು ಹೇಳಿಕೊಡುವುದರ ಜೊತೆಗೆ ಪ್ರಾಸ, ಪದರಚನೆ, ವಾಕ್ಯರಚನೆ ಇತ್ಯಾದಿಗಳೆಲ್ಲವನ್ನು ಕಟ್ಟುವ ಬಗೆಯನ್ನು ಶಿಕ್ಷಕರು ಮಾಡಬೇಕು. ನಂತರ ಮಕ್ಕಳಿಗೆ ಬೋಧಿಸಬೇಕು. ಒಂದು ವರ್ಷ ಕಷ್ಟವಾಗಬಹುದು ಎರಡನೆಯ ವರ್ಷ ಸುಲಭವಾಗುತ್ತದೆ. ಇಂದು ಇದು ಆಗಬೇಕಾಗಿದೆ.

**೫. ವ್ಯಾಕರಣ ಕಲಿಸುವಾಗ ಪರಿಭಾಷೆ ಕಲಿಕೆಗೆ ಕಠಿಣವಾಗುತ್ತದೆಯೇ? ಕಠಿಣವಾದರೆ ಯಾವ ಪರಿಭಾಷೆಗಳು ಕಠಿಣವಾಗುತ್ತವೆ.?**

ಪ್ರತಿಯೊಂದು ವಲಯಕ್ಕೂ ತನ್ನದೇಆದ ಪರಿಭಾಷೆ ಇರುತ್ತದೆ. ಅದನ್ನು ಆ ವಲಯದ ಪರಿಭಾಷೆ ಎಂದು ಕರೆಯಲಾಗುತ್ತದೆ. ಅಂತೆಯೇ ವ್ಯಾಕರಣಕ್ಕೂ ತನ್ನದೇಆದ ಪರಿಭಾಷೆ ಇದೆ. ಆದರೆ ಆ ಪರಿಭಾಷೆ ನನ್ನ ಪ್ರಕಾರ ಅನಗತ್ಯ. ಪರಿಭಾಷೆಯನ್ನು ಕಲಿಸುವ ಶಿಕ್ಷಕರು ತಿಳಿದಿರಬೇಕು. ಭಾಷಾ ಬಳಕೆಯಲ್ಲಿ ಪರಿಭಾಷೆಗಳ ತಿಳುವಳಿಕೆ ಶಿಕ್ಷಕರಿಗಿರಬೇಕು. ಕಲಿಕಾರ್ಥಿಗಳಿಗೆ ಅದರ ಬಳಕೆಯ ವಲಯದ ಪರಿಚಯವಿರಬೇಕು. ಪರಿಭಾಷೆಯನ್ನು ಮಕ್ಕಳಿಗೆ ಕಲಿಸುವ ಅಗತ್ಯವಿಲ್ಲ. ಪಠ್ಯಪುಸ್ತಕಗಳಲ್ಲಾಗಲಿ, ತರಗತಿಗಳಲ್ಲಾಗಲಿ ನನ್ನ ಪ್ರಕಾರ ಅವುಗಳನ್ನು ಬಳಸಲೇಬಾರದು. ಸಂಧಿ, ಸಮಾಸ,

ಪ್ರತ್ಯಯ, ಲಿಂಗ, ಕಾಲ, ವಚನ ಇತ್ಯಾದಿ ಪರಿಭಾಷೆಗಳೇ ಬೇಡ. ಭಾಷಾ ಬಳಕೆಯ ಹೊಸ ಹೊಸ ಚಟುವಟಿಕೆಗಳನ್ನು ಮಾಡುವುದರಿಂದ ಮಕ್ಕಳಲ್ಲಿ ಸೃಜನಶೀಲತೆ, ಕ್ರಿಯಾಶೀಲತೆ ತಾನೇ ಬೆಳೆಯುತ್ತದೆ. ಷ್ಟುತ್ವ, ಛತ್ವ, ಶ್ಚುತ್ವ ಇತ್ಯಾದಿಗಳನ್ನು ಕಲಿಸುವುದರಿಂದ ಏನೂ ಪ್ರಯೋಜನವಿಲ್ಲ. ನನ್ನ ಪ್ರಕಾರ ಪರಿಭಾಷೆಗಳೇ ಬೇಡ. ಇವು ಇನ್ನೂ ಕ್ಲಿಷ್ಟತೆಯನ್ನು, ಭಾರವನ್ನುಂಟುಮಾಡುತ್ತವೆ.

**೬. ಇತ್ತೀಚೆಗೆ ವ್ಯಾಕರಣ ಅಧ್ಯಯನದ ಬಗ್ಗೆ ಆಧುನಿಕ ಚಿಂತನೆಗಳು ನಡೆಯುತ್ತಿವೆ ಅದರ ಬಗ್ಗೆ ತಮ್ಮ ಅಭಿಪ್ರಾಯವೇನು?**

ಆಧುನಿಕ ಚಿಂತನೆಯನ್ನು ನಾನು ಸ್ವಾಗತಿಸುತ್ತೇನೆ. ನನ್ನ ಪ್ರಕಾರ ಎಲ್ಲವೂ ಆಧುನಿಕವೆ. ನಮ್ಮ ಕನ್ನಡ ಭಾಷೆಯೊಳಗಡೆ ಎಲ್ಲಿ ತಪ್ಪುಗಳಾಗಿವೆ, ಎಲ್ಲಿ ಕೊರತೆಗಳಿವೆ, ಎಲ್ಲಿ ತಿದ್ದುಪಡಿಗಳನ್ನು ಮಾಡಬೇಕಾಗಿದೆ ಅವುಗಳನ್ನು ಸರಿಪಡಿಸುವ ಕೆಲಸವನ್ನು ನಾವು ಶುರುಮಾಡಿದ್ದೇವೆ. ಪ್ರಾಚೀನ ವ್ಯಾಕರಣ ವಿಷಯವನ್ನು ನಿರಾಕರಿಸದೆ ೨೧ನೆಯ ಶತಮಾನದಲ್ಲಿ ಮಕ್ಕಳು ಕನ್ನಡ ಕಲಿಯುವಾಗ, ಎಲ್ಲರೂ ಕನ್ನಡ ಬಳಸುವಾಗ ಅವರಿಗೆ ಕನ್ನಡ ಅನುಕೂಲವಾಗುವ ನಿಟ್ಟಿನಲ್ಲಿ ಕನ್ನಡ ಭಾಷಿಕ ರಚನೆಯ ನಿಯಮಗಳನ್ನು ತಿಳಿಸಿ ಹೇಳುವ ಭಾಷಾವಿವರಣೆ ಬೇಕಾಗಿದೆ. ಇವತ್ತು ನಾವು ಹೊಸ ತಂತ್ರಜ್ಞಾನ ಬಳಸುತ್ತಾ ಇದ್ದೇವೆ. ಉದಾಹರಣೆಗೆ : ಗಣಕಯಂತ್ರ. ಈ ಗಣಕಯಂತ್ರದಲ್ಲಿ ವ್ಯಾಕರಣದ ನಿಯಮಗಳನ್ನು ಹೇಳಿಕೊಡಬೇಕಾಗುತ್ತದೆ. ಅಲ್ಲಿ ಸರಿಯಾಗಿ ಹೇಳಿಕೊಡದೆ ಹೋದ್ರೆ ಕನ್ನಡ ಭಾಷೆಯನ್ನು ಕಂಪ್ಯೂಟರ್‌ನಲ್ಲಿ ಬಳಸಕಾಗೋದಿಲ್ಲ. ಇಂಗ್ಲಿಷ್ ಬಳಸುತ್ತಾರೆಂದು ಗೋಳಾಡುತ್ತೇವೆಯೇ ಹೊರತು ಸರಿಪಡಿಸುವ ಕೆಲಸಕ್ಕೆ ಮುಂದಾಗುತ್ತಿಲ್ಲ ಡಿ.ಎನ್.ಶಂಕರಭಟ್ ಅವರು ಏನು ಬರೆದಿದ್ದಾರೆ ಎಂಬುದನ್ನು ಸರಿಯಾಗಿ ತಿಳಿದಿಲ್ಲ. ತುಂಬಾ ಜನ ತಪ್ಪಾಗಿ ತಿಳಿದಿದ್ದಾರೆ. ಆಧುನಿಕ ಚಿಂತನೆಯ ನೆಲೆಯಲ್ಲಿ ಎಲ್ಲವನ್ನು ಅಳಿಸಿ ಹಾಕ್ತಾ ಇದ್ದಾರೆಂದು ತಿಳಿದುಕೊಂಡಿದ್ದಾರೆ. ನಾನಿದನ್ನು ಬಹಳ ಪ್ರಾಮಾಣಿಕವಾಗಿ ಹೇಳ್ತಾ ಇದ್ದೇನೆ. ಹೊಸ ಚಿಂತನೆಗಳು ಹಳೆಯದನ್ನು ಅಳಿಸಿ ಹಾಕುವುದಲ್ಲ. ಅದನ್ನು ಹೆಚ್ಚು ಪೂರ್ಣಗೊಳಿಸುವುದು. ಲೋಪಗಳಿದ್ದರೆ, ಕೊರತೆಗಳಿದ್ದರೆ ಅವುಗಳನ್ನು ತುಂಬುವುದು. ಅವುಗಳಲ್ಲಿ ತಪ್ಪಿದ್ದರೆ ಅವುಗಳನ್ನು ಸರಿಪಡಿಸುವುದನ್ನು ಮಾಡ್ತಾ ಇದ್ದೇವೆ. ೨೧ನೆಯ ಶತಮಾನದಲ್ಲಿ ಕನ್ನಡ ಭಾಷೆಯ ಹೊಸ ಆವಿಷ್ಕಾರದಲ್ಲಿ ಹೊಸ ಹೊಸ ಸಿದ್ಧತೆಗಳಿಗೆ ಅಣಿಯಾಗಬೇಕಾಗಿದೆ. ಮಕ್ಕಳಿಗೆ ಕನ್ನಡ ಅನ್ನುವುದು ಉಸಿರಾಗಬೇಕಾದರೆ, ಅವರ ಜೀವನಕ್ರಮ ಆಗಬೇಕಾದರೆ ಅವರಿಗೆ ಕನ್ನಡ ನುಡಿ ಹತ್ತಿರವಿರಬೇಕು. ಅದಕ್ಕೆ ನಾವು

ಮಾಡುತ್ತಿರುವ ಸಿದ್ಧತೆಗಳೇ ಹೊರತು ನಾವೇನು ಎಲ್ಲವನ್ನು ನಿರಾಕರಿಸಿ ಹೊಸ ದಾರಿಯನ್ನು ತುಳಿಯುತ್ತಿದ್ದೇವೆಂಬುದು ತಪ್ಪು ಗ್ರಹಿಕೆ. ಏನು ಹೇಳುತ್ತಿದ್ದೇವೆ ಎಂಬುದನ್ನು ಸರಿಯಾಗಿ ತಿಳಿದುಕೊಳ್ಳದೆ, ಆಲೋಚನೆ ಮಾಡದೆ ಮಾತಾಡ್ತಾರೆ.

ಮಕ್ಕಳಿಗೆ ಈಜುವುದಕ್ಕೆ ಈಜುಕೊಳ ಕಟ್ಟಿಕೊಡಿ, ನೀರಿನ ವ್ಯವಸ್ಥೆ ಮಾಡಿ, ಸಮಯ ಕೊಡಿ, ಎದುರಾಳಿಗಳನ್ನು ಕೊಡಿ ಅವರು ಆಡ್ತಾರೆ. ಅದೇ ರೀತಿ ಮಕ್ಕಳಿಗೆ ಭಾಷೆಯ ನಿಯಮಗಳು ಗೊತ್ತು, ಅವುಗಳನ್ನು ಬಳಸುವುದಕ್ಕೆ ಅಖಾಡಗಳನ್ನು ತೆರೆದುಕೊಡಿ. ನೀವು ನಿಯಮಗಳನ್ನು ಮತ್ತೆ ಮತ್ತೆ ಹೇಳ್ತಾ ಇರುವುದರಿಂದ ಯಾವ ಪ್ರಯೋಜನವಿಲ್ಲ. ನಿರುಪಯುಕ್ತ. ಔಪಚಾರಿಕವಾಗಿ ಮಕ್ಕಳು ಮಾತು ಮತ್ತು ಬರಹ ಇವುಗಳಲ್ಲಿ ಹೆಚ್ಚು ಹೆಚ್ಚು ತೊಡಗುವಂತೆ ಮಾಡಬೇಕು. ಅದಕ್ಕೆ ಬೇಕಾದ ಚಟುವಟಿಕೆಗಳನ್ನು ರೂಪಿಸಬೇಕು. ಮಾತನಾಡುವುದನ್ನು, ಬರೆಯುವುದನ್ನು ನಾವು ಕಲಿಸಿಲ್ಲ, ಅಭ್ಯಾಸ ಮಾಡಿಸಿಲ್ಲ. ಹತ್ತಾರು ಬಗೆಯಲ್ಲಿ ಔಪಚಾರಿಕವಾಗಿ ಮಾತನಾಡುವುದನ್ನು ಕಲಿಸಬೇಕು. ಮಾತಿನ ನೂರಾರು ಬಗೆಗಳನ್ನು ಔಪಚಾರಿಕವಾಗಿ ಕನ್ನಡದಲ್ಲಿ ಹೇಳಿಕೊಡಬೇಕು. ಬರವಣಿಗೆಯನ್ನು ಹೇಳಿಕೊಡಬೇಕು. ಹಂತ ಹಂತವಾಗಿ ಇವುಗಳನ್ನು ಹಿಗ್ಗಿಸಿಕೊಳ್ಳುತ್ತಾ ಹೋಗಬೇಕು. ಆಗ ಕನ್ನಡ ಭಾಷೆಯ ಬಗೆಗಿನ ಗೊಣಗಾಟ ತಾನೇ ಮಾಯವಾಗ್ತ ಇದೆ.

**೭. ಛಂದಸ್ಸು ಮತ್ತು ಅಲಂಕಾರಗಳು ವ್ಯಾಕರಣದ ವ್ಯಾಪ್ತಿಗೆ ಬರುತ್ತವೆಯೋ ಅಥವಾ ಇಲ್ಲವೋ?**

ಛಂದಸ್ಸು ಅಲಂಕಾರ ವ್ಯಾಕರಣದ ಭಾಗ ಹೌದೋ, ಅಲ್ಲವೋ ನನಗೆ ಗೊತ್ತಿಲ್ಲ. ಆದರೆ ಭಾಷೆಯ ರಚನೆಯ ಭಾಗ. ಆದ್ದರಿಂದ ಮಕ್ಕಳಿಗೆ ಅವುಗಳನ್ನು ಹೇಳಿಕೊಡಬೇಕು. ಪರಿಭಾಷೆಯನ್ನಲ್ಲ. ಭಾಷೆಯ ರಚನೆಯನ್ನು ಮಕ್ಕಳ ಕಿವಿಯಲ್ಲಿ ಕೇಳಿಸಿಕೊಳ್ಳಬೇಕು. ಛಂದಸ್ಸು ಅನ್ನುವುದು ಕಿವಿಗೆ ಸಂಬಂಧಪಟ್ಟದ್ದು. ಅಂಶಗಣ, ಅಕ್ಷರಗಣ, ಮಾತ್ರಾಗಣ, ತಾಳ, ಕನ್ನಡದ ಲಯಗಳು ಮಕ್ಕಳ ಕಿವಿಗೆ ಬೀಳುವಂತೆ ಮಾಡಬೇಕು. ಪಠ್ಯಪುಸ್ತಕದಲ್ಲಿ ಮೂರ್‍ನಾಲ್ಕು ಪದ್ಯಗಳಿರಬಹುದು. ಇಂತಹ ಹತ್ತಾರು ಪದ್ಯಗಳನ್ನು ಚಟುವಟಿಕೆಗಳೊಂದಿಗೆ ಕಲಿಸಿಕೊಡಬೇಕು. ಶಿಕ್ಷಕರಿಗೆ ಕೈಪಿಡಿಯಲ್ಲಿ ಮಾದರಿಗಳನ್ನು ಪಠ್ಯಪುಸ್ತಕ ನಿರ್ಮಾತೃಗಳು ನೀಡಬೇಕು. ಭಾಮಿನಿ, ವಾರ್ಧಕ ೩ : ೪, ೫ ಮಾತ್ರೆಯ ಮಾದರಿ ಹೇಳಿ ಮಕ್ಕಳಿಗೆ ಓದಲು ಕಲಿಸಿಕೊಡಬೇಕು. ಅವುಗಳನ್ನು ಕಿವಿಗೆ ಒಗ್ಗಿಸಬೇಕು. ಕನ್ನಡದ ವಿವಿಧ ಲಯಗಳನ್ನು ತಿಳಿಸಿ ಆ ಲಯಗಳನ್ವಯ ಉಚ್ಚರಿಸುವ ರೀತಿಯನ್ನು ಹೇಳಿಕೊಡಬೇಕು.

ನಂತರ ಅವರೇ ಹೇಳುವ ಹಾಗೆ ರೂಪಿಸಬೇಕು. ಪರಿಭಾಷೆಗಳನ್ನು ಕಲಿಸುವುದರಿಂದ ಏನೂ ಪ್ರಯೋಜನವಿಲ್ಲ. ನಾವು ಛಂದಸ್ಸೆಂದರೆ ಲಘು-ಗುರು ಹಾಕುವುದೆಂದು ಹೇಳಿಕೊಡ್ತಾ ಇದ್ದೇವೆ. ಇದು ಸರಿಯಲ್ಲ.

ಉದಾಹರಣೆ

೧. ಯಾವ ಮೋಹನ ಮುರಳಿ ಕರೆಯಿತು ದೂರ ತೀರಕೆ...........

೨. ಮೆರೆಯುತಿದ್ದ ಭಾಗ್ಯವೆಲ್ಲ ಹರೆದು ಹೋಯಿತೆನುತ ತಿರುಕ ಮರಳಿ ನಾಚಿ ಪೋಗುತಿದ್ದ ಮರುಳನಂತೆಯೇ............

ಇಂತಹ ಪದ್ಯಗಳನ್ನು ಹೇಳಿಕೊಡುವುದರ ಮುಖಾಂತರ ಇಂತಹ ರಚನೆಗಳನ್ನು ಓದಲು, ಸ್ವತಹ ರಚಿಸಲು ಮಕ್ಕಳಿಗೆ ಪ್ರೇರೇಪಿಸಬೇಕು. ಆಗ ಮಕ್ಕಳಿಗೆ ಉಚ್ಚರಿಸುವಾಗ ೩ : ೪, ೩ ಮಾತ್ರೆಗಳನ್ನು ಹೇಗೆ ಉಚ್ಚರಿಸಬೇಕು, ಕೇಳಿಸಿಕೊಳ್ಳುವಾಗ ಹೇಗೆ ಕೇಳಿಸಿಕೊಳ್ಳಬೇಕು ಎಂಬುದು ಗೊತ್ತಾಗುತ್ತದೆ. ಇದರಿಂದ ಕನ್ನಡ ಭಾಷೆಯ ಆಂತರಿಕ ಲಯಗಳು ಗೊತ್ತಾಗುತ್ತವೆ. ಪರಿಭಾಷೆಗಳು ಶಿಕ್ಷಕರಿಗೆ ಗೊತ್ತಿರಲಿ ಅವುಗಳನ್ನು ಮಕ್ಕಳಿಗೆ ಹೇಳಬೇಕಾಗಿಲ್ಲ. ಛಂದೋಲಂಕಾರ ಮಾದರಿಗಳು ಕನ್ನಡದಲ್ಲಿ ರಾಶಿರಾಶಿಗಳಿವೆ ಅವುಗಳನ್ನು ಮಕ್ಕಳ ಕಿವಿಗೆ ಬೀಳುವ ಹಾಗೆ ಮಾಡಬೇಕು. ನಂತರ ಮಕ್ಕಳೇ ಅಂತವುಗಳನ್ನು ಕಟ್ಟಲು ಮುಂದಾಗುತ್ತಾರೆ. ಅವರಲ್ಲಿ ಸೃಜನಶೀಲತೆ ತಂತಾನೆ ಬೆಳೆಯುತ್ತದೆ.

## ೩. ಪ್ರೊ. ರಾಮಣ್ಣ ಹವಳೆ

**೧. ಪಠ್ಯಪುಸ್ತಕದ ವ್ಯಾಕರಣಕ್ಕೂ ಪರಾಮರ್ಶನಕ್ಕಾಗಿಯೇ ರಚನೆಯಾಗಿರುವ ವ್ಯಾಕರಣಕ್ಕೂ ಪರಸ್ಪರ ಸಂಬಂಧ ಇದೆಯೇ? ಇದ್ದರೆ ಅದು ಹೇಗೆ?**

ಪಠ್ಯಪುಸ್ತಕದ ವ್ಯಾಕರಣಕ್ಕೂ ಪರಾಮರ್ಶನಕ್ಕಾಗಿಯೇ ರಚನೆಯಾಗಿರುವ ವ್ಯಾಕರಣಕ್ಕೂ ಪರಸ್ಪರ ಸಂಬಂಧ ಇದ್ದೇಇದೆ. ಭಾಷೆಯ ರಚನೆಗೆ ಸಂಬಂಧಿಸಿದ ನಿಯಮಗಳನ್ನು ಕುರಿತು ಅಧ್ಯಯನ ಮಾಡುವಂತಹದ್ದೇ ವ್ಯಾಕರಣ. ಭಾಷೆಯನ್ನು ಕಲಿಸುವ ಉದ್ದೇಶದಿಂದ ಪಠ್ಯಪುಸ್ತಕಗಳನ್ನು ರೂಪಿಸಲಾಗುತ್ತದೆ. ಪಠ್ಯಪುಸ್ತಕಗಳಲ್ಲಿ ಮೊದಲು ಭಾಷೆ ನಂತರ ವ್ಯಾಕರಣ. ಶಾಲೆಯ ವಿವಿಧ ಹಂತಗಳಲ್ಲಿ ಭಾಷೆಯ ಜೊತೆಜೊತೆಯಲ್ಲಿಯೇ ವ್ಯಾಕರಣವನ್ನು ಕ್ರಿಯಾತ್ಮಕವಾಗಿ ಕಲಿಸಿಕೊಡಲಾಗುತ್ತದೆ. ವ್ಯಾಕರಣವು ತನ್ನದೇಆದ ಪರಿಭಾಷೆಯನ್ನು ಹೊಂದಿದೆ. ಈ ಪರಿಭಾಷೆ ಪಠ್ಯಪುಸ್ತಕದಲ್ಲಾಗಲಿ, ಪರಾಮರ್ಶನ ಗ್ರಂಥಗಳಲ್ಲಾಗಲಿ ಬೇರೆಬೇರೆ ಆಗಿರದೆ

ಏಕಮುಖವಾಗಿರುತ್ತದೆ. ಈ ಪರಿಭಾಷೆಗಳನ್ನು ಮಕ್ಕಳ ದೈಹಿಕ ಮತ್ತು ಮಾನಸಿಕ ವಯೋಮಾನಕ್ಕನುಗುಣವಾಗಿ ನಿಗದಿಮಾಡಿದ ಶಾಲಾ ವಿವಿಧ ಹಂತಗಳಿಗನುಗುಣವಾಗಿ ವ್ಯಾಕರಣಾಂಶಗಳನ್ನು ಅಳವಡಿಸಲಾಗುತ್ತದೆ. ಈ ಅಂಶಗಳನ್ನು ಭಾಷಾ ಕಲಿಕೆಗೆ ತೊಡಕಾಗದಂತೆ ಕಲಿಸಿಕೊಡಲಾಗುತ್ತದೆ. ಪ್ರಾಥಮಿಕ ಹಂತದಲ್ಲಿ ವ್ಯಾಕರಣಾಂಶಗಳು ಪ್ರತ್ಯಕ್ಷವಾಗಿರದೆ ಭಾಷೆಯೊಳಗಡೆ ಪರೋಕ್ಷವಾಗಿರುತ್ತವೆ. ಏಕೆಂದರೆ ಈ ಆರಂಭಿಕ ಹಂತದಲ್ಲಿ ಭಾಷಾಕಲಿಕೆ ಪ್ರಧಾನವಾಗಿದ್ದು ವ್ಯಾಕರಣ ಕಲಿಕೆ ಗೌಣವಾಗಿರುತ್ತದೆ.

ಒಂದು ಕಾಲಕ್ಕೆ ಪ್ರತ್ಯೇಕವಾದ ವ್ಯಾಕರಣ ಪುಸ್ತಕಗಳನ್ನಿಟ್ಟು ವ್ಯಾಕರಣವನ್ನು ಬೋಧಿಸಲಾಗುತಿತ್ತು. ಈ ಪರಾಮರ್ಶನ ವ್ಯಾಕರಣ ಗ್ರಂಥಗಳಲ್ಲಿಯ ವ್ಯಾಕರಣಾಂಶಗಳನ್ನು ಇಂದಿನ ಶಾಲಾ ವಿವಿಧ ಹಂತಗಳಲ್ಲಿ ಭಾಷೆಯ ಜೊತೆಜೊತೆಯಲ್ಲಿ ಕಲಿಸಿಕೊಡಲಾಗುತ್ತದೆ. ಅಂದರೆ ಭಾಷೆಯನ್ನು ಬಿಟ್ಟು ವ್ಯಾಕರಣವಿಲ್ಲ, ವ್ಯಾಕರಣವನ್ನು ಬಿಟ್ಟು ಭಾಷೆಯಿಲ್ಲ. ಹೀಗಾಗಿ ಭಾಷೆಯೊಂದಿಗೆ ವ್ಯಾಕರಣ ಕಲಿಕೆ ಸಾಗುತ್ತದೆ. ವ್ಯಾಕರಣಾಂಶಗಳಿಲ್ಲದ ಭಾಷಾಕಲಿಕೆ ಅವೈಜ್ಞಾನಿಕವಾಗಿರುತ್ತದೆ. ಭಾಷೆಯನ್ನು ಒಂದು ಶಿಸ್ತಿನಲ್ಲಿ ಕಲಿಸಬೇಕಾದರೆ ವ್ಯಾಕರಣವು ಅಗತ್ಯವಾಗಿ ಬೇಕು. ಅದು ಪರಾಮರ್ಶನ ವ್ಯಾಕರಣ ಅಥವಾ ಪಠ್ಯಪುಸ್ತಕ ವ್ಯಾಕರಣ ಪ್ರತ್ಯೇಕವೆಂದು ಹೇಳಲು ಬರುವುದಿಲ್ಲ. ಪಾರಂಪರಿಕವಾಗಿ ಬಂದ ವ್ಯಾಕರಣದ ಅಂಶಗಳನ್ನು ಇಂದಿನ ಮಕ್ಕಳ ಭಾಷಾಕಲಿಕೆಗೆ ಪೂರಕವಾಗುವ ನಿಟ್ಟಿನಲ್ಲಿ ವ್ಯಾಕರಣಾಂಶಗಳನ್ನು ಆಯ್ದುಕೊಳ್ಳುವುದು ಪರಾಮರ್ಶನ ಗ್ರಂಥಗಳಿಂದಲೆ. ಹೀಗಾಗಿ ಪಠ್ಯಪುಸ್ತಕದ ವ್ಯಾಕರಣಕ್ಕೂ ಪರಾಮರ್ಶನಕ್ಕಾಗಿಯೇ ರಚನೆಯಾಗಿರುವ ವ್ಯಾಕರಣಕ್ಕೂ ಪರಸ್ಪರ ಸಂಬಂಧ ಇದ್ದೇಇದೆ.

ಒಂದರಿಂದ ಹತ್ತನೆಯ ತರಗತಿವರೆಗೆ ಕನ್ನಡ ಭಾಷೆಯನ್ನು ತರಗತಿವಾರು ಮತ್ತು ಕನ್ನಡೇತರ ಮಕ್ಕಳ ಕಲಿಕೆಗೆ ಕನ್ನಡವನ್ನು ಕಲಿಯಲು ಅನುಕೂಲವಾಗುವ ನಿಟ್ಟಿನಲ್ಲಿ ಕನ್ನಡ ಪ್ರಥಮ, ದ್ವಿತೀಯ ಮತ್ತು ತೃತೀಯ ಭಾಷೆಯನ್ನಾಗಿ ಕಲಿಸಿಕೊಡುವ ಪಠ್ಯಪುಸ್ತಕಗಳಲ್ಲಿ ಮಕ್ಕಳ ಅರಿವಿನ ಮಟ್ಟಕ್ಕನುಗುಣವಾಗಿ ವ್ಯಾಕರಣಾಂಶಗಳನ್ನು ಅಳವಡಿಸಲಾಗಿದೆ. ಭಾಷಾಕಲಿಕೆಗೆ ಪೂರಕವಾಗಿ ವ್ಯಾಕರಣಾಂಶಗಳನ್ನು ಕ್ರಿಯಾತ್ಮಕವಾಗಿ ಬೋಧಿಸಲಾಗುತ್ತಿದೆ.

೨. ಶಾಲಾವ್ಯಾಕರಣ ಕಲಿಕೆ ಬೇಕೆ ಬೇಡವೆ ಎಂಬುದರ ಬಗ್ಗೆ ಚರ್ಚೆ ಇದೆ, ಅದರೆ ಬಗ್ಗೆ ನಿಮ್ಮ ಅಭಿಪ್ರಾಯವೇನು?

ವ್ಯಾಕರಣ ಕಲಿಕೆ ಬೇಕು. ಬೇಡ ಎನ್ನುವುದು ಅಸಂಬದ್ಧ ಮತ್ತು ಅವೈಜ್ಞಾನಿಕ. ವ್ಯಾಕರಣ ಕಲಿಕೆ ಹಿಂದೆಯು ಇತ್ತು. ಇಂದಿಗೂ ಅಗತ್ಯವಾಗಿ ಬೇಕು. ಆದರೆ ಶುಷ್ಕವಾಗಿರುವಂತಹ ಸೂತ್ರಗಳ ವ್ಯಾಕರಣ ಬೇಡ. ಮೊದಲು ಉದಾಹರಣೆಗಳ ಮೂಲಕ ಸೂತ್ರವನ್ನು ಮಕ್ಕಳೇ ಕಂಡುಹಿಡಿಯಬೇಕು. ಕ್ರಿಯಾತ್ಮಕವಾಗಿ ವ್ಯಾಕರಣವನ್ನು ಬೋಧಿಸಬೇಕು. ಸಮಷ್ಟಿ ಪದ್ಧತಿಯಲ್ಲಿ ಅಂದರೆ ಉದಾಹರಣೆಗಳ ಮೂಲಕ ಸೂತ್ರ ಸಾಧಿಸುವುದು. ಪದಗಳ ಮೂಲಕ ವ್ಯಾಕರಣವನ್ನು ಹೇಳಕೂಡದು. ವಾಕ್ಯಗಳ ಮೂಲಕ ಹೇಳಿದರೆ ಮಗುವಿಗೆ ವ್ಯಾಕರಣ ಅರ್ಥವಾಗುತ್ತದೆ. ಹಿಂದಿನ ಪಂಜೆಯವರ ಕನ್ನಡ ಮೂಲವ್ಯಾಕರಣ, ನರಸಿಂಹಯ್ಯನವರ ಕನ್ನಡ ಪ್ರಥಮವ್ಯಾಕರಣ, ತೀ.ನಂ.ಶ್ರೀಯವರ ಕನ್ನಡ ಮಧ್ಯಮವ್ಯಾಕರಣ ಇತ್ಯಾದಿಗಳೆಲ್ಲ ವಿಶ್ಲೇಷಣಾ ಮಾದರಿಯಲ್ಲಿಯೇ ರಚಿತವಾಗಿವೆ. ೧೯೭೦ರ ದಶಕದಲ್ಲಿ ಶಿ.ಚ.ನಂದಿಮಠ ಅವರ ಕನ್ನಡ ವ್ಯಾಕರಣದರ್ಪಣವನ್ನು ಮೈಸೂರು ರಾಜ್ಯದ ವಿದ್ಯಾ ಇಲಾಖೆಯ ವ್ಯಾಪ್ತಿಗೊಳಪಟ್ಟ ಪ್ರೌಢಶಾಲೆಗಳ ೮, ೯, ೧೦ನೆ ತರಗತಿಗಳ ವಿದ್ಯಾರ್ಥಿಗಳ ಉಪಯೋಗಕ್ಕಾಗಿ ನೂತನ ಅಭ್ಯಾಸಕ್ರಮಕ್ಕನುಸರಿಸಿ ರಚಿಸಲಾಗಿದೆ. ಇದರಲ್ಲಿ ಸೂತ್ರಗಳನ್ನು ಹೇಳುವುದಕ್ಕೆ ಪೂರ್ವದಲ್ಲಿ ಸಾಕಷ್ಟು ವಿವರಣೆಯನ್ನು ಕೊಟ್ಟು, ಸುಲಭವಾದ ದೃಷ್ಟಾಂತಗಳನ್ನು ನೀಡಿ, ಆ ವಿವರಣೆಯ ಆಧಾರದ ಮೇಲೆ ಸೂತ್ರ ರಚನೆಯನ್ನು ಮಕ್ಕಳಿಂದಲೇ ಮಾಡಿಸುವ ಬೋಧನಾ ನಿಯಮವನ್ನು ಅನುಸರಿಸಲಾಗಿದೆ. ವ್ಯಾಕರಣವನ್ನು ತಿಳಿಯಲು ಮತ್ತು ಮಕ್ಕಳಿಗೆ ಬೋಧಿಸಲು ನನ್ನ ಪ್ರಕಾರ ಇದು ಉತ್ತಮ ವ್ಯಾಕರಣ ಪುಸ್ತಕವಾಗಿದೆ. ಈ ಪರಾಮರ್ಶನ ಗ್ರಂಥದಲ್ಲಿ ವ್ಯಾಕರಣಾಂಶಗಳನ್ನು ಬಿಡಿ ಬಿಡಿಯಾಗಿ ಹೇಳುವುದರ ಮೂಲಕ ನಮ್ಮ ಸುತ್ತಮುತ್ತ ಗೋಚರಿಸುವ ಹಲವಾರು ಸಂಗತಿಗಳಿಗೆ ಸಂಬಂಧಪಟ್ಟಂತೆ ಹಲವಾರು ಉದಾಹರಣೆಗಳನ್ನು ಕೊಡಲಾಗಿದೆ. ಈ ರೀತಿ ದೃಷ್ಟಾಂತಗಳನ್ನು ನೀಡುವುದರಿಂದ ವ್ಯಾಕರಣ ಕಲಿಕೆ ಶುಷ್ಕ, ಕಠಿಣ, ನೀರಸ ಇತ್ಯಾದಿ ಭಾವನೆಗಳು ಮಕ್ಕಳಲ್ಲಿ ಬರಲು ಸಾಧ್ಯವಿಲ್ಲ. ಒಟ್ಟಿನಲ್ಲಿ ವ್ಯಾಕರಣ ಕಲಿಕೆ ಅಗತ್ಯವಾಗಿ ಬೇಕೆಂಬುದು ನನ್ನ ಅಭಿಪ್ರಾಯವಾಗಿದೆ.

**೩. ನಿಮ್ಮ ಸೇವಾವೃತ್ತಿ ಅನುಭವದ ಆಧಾರದ ಮೇಲೆ ಕಲಿಕೆಯ ಪಠ್ಯಪುಸ್ತಕಗಳು ಹೇಗಿರಬೇಕು? ನಿಮ್ಮ ಅಭಿಪ್ರಾಯವೇನು?**

ಭಾಷೆಯನ್ನು ಕಲಿಸಲೋಸುಗ ಪಠ್ಯಪುಸ್ತಕಗಳನ್ನು ರೂಪಿಸಲಾಗುತ್ತದೆಯೇ ವಿನಹ ವ್ಯಾಕರಣ ಕಲಿಸಲು ಅಲ್ಲ. ಆದರೆ ಭಾಷೆಯೊಳಗಡೆ ವ್ಯಾಕರಣ

ಅಂತರ್ಗತವಾಗಿರುತ್ತದೆಂಬುದನ್ನು ನಾವ್ಯಾರು ಮರೆಯುವಂತಿಲ್ಲ. ಶಿಕ್ಷಣದ ವಿವಿಧ ಮಟ್ಟಗಳನ್ನಾಧರಿಸಿ ಮಕ್ಕಳ ದೈಹಿಕ ಮತ್ತು ಮಾನಸಿಕ ವಯೋಮಾನಕ್ಕನುಗುಣವಾಗಿ ಪಠ್ಯಪುಸ್ತಕಗಳನ್ನು ರೂಪಿಸಲಾಗುತ್ತದೆ. ಈ ಪಠ್ಯಗಳಲ್ಲಿ ಪ್ರಾಥಮಿಕ ವಲಯಕ್ಕೆ ವ್ಯಾಕರಣ ಕಲಿಸುವ ಅಗತ್ಯವಿಲ್ಲ. ನಂತರ ಮಾಧ್ಯಮಿಕ, ಪ್ರೌಢಹಂತಕ್ಕೆ ಹೋದಂತೆಲ್ಲ ಭಾಷೆಯ ಜೊತೆಗೆ ವ್ಯಾಕರಣಾಂಶಗಳನ್ನು ಕ್ರಿಯಾತ್ಮಕವಾಗಿ ಹಿಗ್ಗಿಸಿಕೊಳ್ಳುತ್ತ ಹೋಗಲಾಗುತ್ತದೆ. ಭಾಷಾ ಕಲಿಕೆಯಲ್ಲಿ ಅತ್ಯಂತ ಪ್ರಮುಖ ಗುರಿಗಳಾದ ಆಲಿಸುವುದು, ಮಾತನಾಡುವುದು, ಓದುವುದು ಮತ್ತು ಬರೆಯುವುದು ಈ ಅಂಶಗಳಿಗೆ ಹೆಚ್ಚಿನ ಆದ್ಯತೆಯನ್ನು ಕೊಡಲಾಗುತ್ತದೆ. ಹೀಗಾಗಿ ಕಲಿಕೆಯ ಪಠ್ಯಪುಸ್ತಕಗಳು ನನ್ನ ಪ್ರಕಾರ ಈ ಕೆಳಕಂಡ ಅಂಶಗಳನ್ನು ಒಳಗೊಂಡಿರಬೇಕು.

೧. ಭಾಷಾಕಲಿಕೆಗೆ ಪಠ್ಯಪುಸ್ತಕಗಳು ಸರಳವಾದ, ಪರಿಚಿತವಾದ ಪದಗಳನ್ನು, ಚಿಕ್ಕಚಿಕ್ಕ ಸರಳ ವಾಕ್ಯಗಳಿಂದ ಕೂಡಿರಬೇಕು.

೨. ಶಾಲಾಹಂತದ ಯಾವುದೇ ಪಠ್ಯಪುಸ್ತಕದಲ್ಲಿ ಒಂದು ವಾಕ್ಯ ಐದರಿಂದ ಹನ್ನೊಂದು ಪದಗಳಿಗಿಂತ ಹೆಚ್ಚಿರಕೂಡದು. ಹೆಚ್ಚಿದ್ದರೆ ಕಲಿಕೆ ಕ್ಲಿಷ್ಟವಾಗುತ್ತದೆ.

೩. ಪಠ್ಯಪುಸ್ತಕವು ಭಾಷಾ ಕೌಶಲಗಳ ಸಂವರ್ಧನೆಗೆ ಪೂರಕವಾಗಿರಬೇಕು.

೪. ಪಠ್ಯಪುಸ್ತಕದಲ್ಲಿಯ ಪಠ್ಯವಸ್ತು ವರದಿಯಾಗಿರದೆ ರಸತುಂಬಿರಬೇಕು.

೫. ಪಠ್ಯಗಳು ಘಟನೆಗಳಿಂದ ಕೂಡಿರಬೇಕು.

೬. ಮಕ್ಕಳು ಪಠ್ಯಪುಸ್ತಕದ ಪಾಠಗಳೊಂದಿಗೆ ಒಂದಾಗುವಂತಿರಬೇಕು.

೭. ಪಠ್ಯಗಳು ಶಿಶುಕೇಂದ್ರಿತವಾಗಿರಬೇಕು.

೮. ಭಾಷೆಯನ್ನು ಸ್ವಾಭಾವಿಕವಾಗಿ ಕಲಿಯಬೇಕೆಂಬ ಹಿನ್ನೆಲೆಯಲ್ಲಿ ಭಾಷಾ ಆಟಗಳನ್ನು, ಚಟುವಟಿಕೆಗಳನ್ನು, ಪದರಚನೆಗೆ ಕೌಶಲಗಳನ್ನು ಅಳವಡಿಸಬೇಕು.

೯. ಭಾಷಿಕವಾಗಿ, ಸಾಂಸ್ಕೃತಿಕವಾಗಿ, ನೈತಿಕವಾಗಿ ಕಲಿಯಬೇಕಾದದ್ದನ್ನು ಸ್ವಕಲಿಕೆಯ ಹಿನ್ನೆಲೆಯಲ್ಲಿ ಕಲಿಯಬೇಕು. ಈ ಎಲ್ಲಾ ಪ್ರಯತ್ನಗಳು ಸೃಜನಶೀಲತೆಯನ್ನು, ಬೆಳೆಸುವ ನಿಟ್ಟಿನಲ್ಲಿ ಉದ್ದೇಶ ಪೂರ್ವಕವಾಗಿ ಪರಿಶ್ರಮವಿರಬೇಕು.

೧೦. ಪಾಠಗಳು ಚೇತೋಹಾರಿಯಾಗಿದ್ದು ಮಗುವಿನ ಮನೋವಿಜ್ಞಾನದ ಹಿನ್ನೆಲೆಯಲ್ಲಿ ರೂಪಿಸಬೇಕು.

೧೧. ಬೋಧಿಸುವ ಶಿಕ್ಷಕರಿಗೆ ಬೋಧನೆಗೆ ಅನುಕೂಲವಾಗುವ ಬೋಧನಾ ಪದ್ಧತಿಗಳನ್ನು ಪಠ್ಯಪುಸ್ತಕದಲ್ಲಿ ನೀಡುವುದು ಉತ್ತಮ.

೧೨. ಒಂದು ಪಾಠದ ಉದ್ದೇಶ ಅದು ಭಾಷಾ ಕಲಿಕೆಯಾಗಿರಬಹುದು, ಸಂಸ್ಕೃತಿಯನ್ನು ಪರಿಚಯಿಸುವುದಾಗಿರಬಹುದು, ಮೌಲ್ಯಗಳನ್ನು ಹೇಳುವುದಿರಬಹುದು ಅವೆಲ್ಲ ಬಿಡಿಬಿಡಿ ಆಗಿರದೆ ಜೋಳದ ಕಾಳಿನಂತೆ ಒಟ್ಟುಗೂಡಿರಬೇಕು.

೧೩. ಪಠ್ಯಪುಸ್ತಕದಲ್ಲಿಯ ಗದ್ಯ ಪದ್ಯದಲ್ಲಿ ಬರುವ ಕಠಿಣ ಪದಗಳ ಅರ್ಥಸಹಿತ ಪದಕೋಶವನ್ನು ಕೊಡಬೇಕು.

೧೪. ಮಕ್ಕಳ ದೈಹಿಕ ಮತ್ತು ಮಾನಸಿಕ ವಯೋಮಾನಕ್ಕೆ ತಕ್ಕಂತೆ ಪಠ್ಯವಸ್ತುವಿಗೆ ಪೂರಕವಾದ ಅಭ್ಯಾಸಗಳನ್ನು, ಭಾಷಾಭ್ಯಾಸಗಳನ್ನು ಮತ್ತು ಭಾಷಾ ಚಟುವಟಿಕೆಗಳನ್ನು ರೂಪಿಸಬೇಕು.

೧೫.ಭಾಷಾಭ್ಯಾಸದಲ್ಲಿ ಕ್ರಿಯಾತ್ಮಕ ವ್ಯಾಕರಣವನ್ನು ನಿರೂಪಿಸಿ, ಭಾಷಾ ಚಟುವಟಿಕೆಯಲ್ಲಿ ತೊಡಗುವಂತೆ ಭಾಷಾ ಸೃಜನಶೀಲತೆಗೆ ಅವಕಾಶ ನೀಡಬೇಕು.

೧೬. ಮಕ್ಕಳ ಸರ್ವತೋಮುಖ ವ್ಯಕ್ತಿತ್ವ ವಿಕಾಸಕ್ಕೆ ಪಠ್ಯಗಳು ಪೂರಕವಾಗಿರಬೇಕು.

೧೭. ವ್ಯಾಕರಣವನ್ನು ನಿಯಮಾವಳಿಗಳ ಮೂಲಕ ಪ್ರತ್ಯೇಕ ಮಾಡದೆ ಪ್ರಯೋಗಾತ್ಮಕ ಅಥವಾ ಕ್ರಿಯಾತ್ಮಕ ರೀತಿಯಲ್ಲಿ ಭಾಷಾನಿಯಮಗಳನ್ನು ಪಠ್ಯಗಳು ಪರಿಚಯಿಸುವಂತಿರಬೇಕು.

೧೮. ಶಾಲಾ ಪಠ್ಯಪುಸ್ತಕಗಳು ಅತ್ಯಂತ ಅವಶ್ಯಕವಾದ ಜೀವನ ಮೌಲ್ಯಗಳನ್ನು ಒಳಗೊಂಡಿರಬೇಕು.

೧೯. ಭಾಷಾ ಕೌಶಲಗಳೊಂದಿಗೆ ಸೌಂದರ್ಯ ಪ್ರಜ್ಞೆಯನ್ನು, ಪ್ರಶಂಸಾ ಮನೋಭಾವವನ್ನು ಪಠ್ಯಗಳು ಹೊಂದಿರಬೇಕು.

೨೦. ಮಕ್ಕಳು ತಮ್ಮ ಸ್ನೇಹಿತರೊಂದಿಗೆ ಗುಂಪು ಚರ್ಚೆಯಲ್ಲಿ ಪಾಲ್ಗೊಳ್ಳುವುದರ ಮೂಲಕ ತಮ್ಮ ಅಭಿವ್ಯಕ್ತಿ ಹಾಗೂ ಸಂವಹನ ಕೌಶಲಗಳ ಸಂವರ್ಧನೆಗೆ ಚಟುವಟಿಕೆಗಳನ್ನು ಪಠ್ಯಪುಸ್ತಕಗಳು ಹೊಂದಿರಬೇಕು.

೪. ವ್ಯಾಕರಣವನ್ನು ಸೂತ್ರದ ಮೂಲಕ ಕಲಿಸುವುದು ಸೂಕ್ತವೋ ? ಅಥವಾ ಉದಾಹರಣೆಗಳ ಮೂಲಕ ಕಲಿಸುವುದು ಸೂಕ್ತವೋ ? ಇವೆರಡಕ್ಕಿಂತ ಭಿನ್ನವಾದ ವಿಧಾನದಿಂದ ಸುಲಭವಾಗಿ ಕಲಿಸಲು ಸಾಧ್ಯತೆ ಇದೆಯೇ?

ಶಾಸ್ತ್ರವಿಷಯವಾದ ವ್ಯಾಕರಣವನ್ನು ಬೋಧಿಸಲು ನಾವು ನಿಗಮ ಮತ್ತು ಅನುಗಮನ ಪದ್ಧತಿಗಳೆಂದು ನಮ್ಮ ಅನುಕೂಲಕ್ಕೆ ಮಾಡಿಕೊಂಡಿರುವ ಪದ್ಧತಿಗಳಾಗಿವೆ. ಒಂದು ರೀತಿಯಲ್ಲಿ ಇವೆರಡು ಪದ್ಧತಿಗಳು ಒಂದೇಯಾಗಿರುತ್ತವೆ. ವ್ಯಾಕರಣವನ್ನು ಮಕ್ಕಳಿಗೆ ಸರಳವಾಗಿ ಅರ್ಥವಾಗುವಂತೆ ಹೇಳಬೇಕಾದರೆ ಸಮಷ್ಟಿ (ಅನುಗಮನ) ಪದ್ಧತಿಯೇ ಸೂಕ್ತ. ಅಂದರೆ ಉದಾಹರಣೆಗಳ ಮೂಲಕ ಮಕ್ಕಳೇ ಸೂತ್ರಗಳನ್ನು ಅರಸುವುದು. ಈ ಪದ್ಧತಿಯು ಮಕ್ಕಳ ಕಲಿಕೆಗೆ ಕ್ಲಿಷ್ಟವಾಗುವುದಿಲ್ಲ. ಏಕೆಂದರೆ ಅನೇಕ ಉದಾಹರಣೆಗಳಲ್ಲಿ ಅಡಗಿದಂತಹ ನಿಯಮವನ್ನು ಮಕ್ಕಳು ತಾವೇ ಹೆಕ್ಕಿ ತೆಗೆಯುವುದರಿಂದ ಆ ನಿಯಮ ಮನಸ್ಸಿನಲ್ಲಿ ಆಳವಾಗಿ ಬೇರುಬಿಡುತ್ತದೆಂಬುದು ನನ್ನ ಅಭಿಪ್ರಾಯ.

ನಿಗಮ ಮತ್ತು ಅನುಗಮನ ಪದ್ಧತಿಗಳಿಗಿಂತ ಭಿನ್ನವಾದ ಪದ್ಧತಿಯಂದರೆ ಕ್ರಿಯಾತ್ಮಕ ವ್ಯಾಕರಣ ಅಥವಾ ಪ್ರಾಯೋಗಿಕ ವ್ಯಾಕರಣ. ವ್ಯಾಕರಣಾಂಶಗಳನ್ನು ಪ್ರತ್ಯೇಕವಾಗಿ ಬೋಧಿಸದೆ ಭಾಷೆಯ ಪ್ರಯೋಗದ ಸಂದರ್ಭಗಳಲ್ಲಿ ಪರಿಚಯ ಮಾಡಿಕೊಡುವುದಾಗಿದೆ. ಅಂದರೆ ಮಕ್ಕಳು ಪಾಠ ಓದುತ್ತ ಅದರ ವಿಶೇಷತೆಯನ್ನು ಗಮನಿಸುವಂತೆ ಮಾಡಿಸುವುದು. ಆ ಶಬ್ದರೂಪದ ಮೂಲ ಗಮನಿಸಿ ವಾಕ್ಯದಲ್ಲಿ ಅದರ ಉಪಯೋಗದ ರೀತಿಯನ್ನು ತಿಳಿಯುವಂತೆ ಮಾಡುವುದೇ ಕ್ರಿಯಾತ್ಮಕ ವ್ಯಾಕರಣವಾಗಿದೆ. ಈ ವಿಧಾನದಲ್ಲಿ ಕಲಿಸುವುದರಿಂದ ಕಲಿಕೆ ಸುಲಭವಾಗುತ್ತದೆ. ಈ ವಿಧಾನದಲ್ಲಿ ಕಲಿಸದೆ ಸೂತ್ರಗಳನ್ನು ಕಲಿಸುವುದರಿಂದ ವ್ಯಾಕರಣ ಕಲಿಕೆ ಕ್ಲಿಷ್ಟವಾಗುತ್ತದೆ. ವ್ಯಾಕರಣಾಂಶಗಳನ್ನು ಕಂಠಪಾಠ ಮಾಡಕೂಡದು. ಮಾಡಿದರೆ ಅದು ಯಾಂತ್ರಿಕವಾಗುತ್ತದೆಯೇ ವಿನಹ ಮಕ್ಕಳಲ್ಲಿ ಸೃಜನಶೀಲತೆಯನ್ನು, ಕ್ರಿಯಾಶೀಲತೆಯನ್ನು ಬೆಳೆಸಲಾಗುವುದಿಲ್ಲ. ಇಂದಿನ ವಿವಿಧ ಶಾಲಾಹಂತಗಳ ಪಠ್ಯಪುಸ್ತಕಗಳಲ್ಲಿ ಭಾಷಾಭ್ಯಾಸ, ವಿವಿಧ ಭಾಷಾ ಚಟುವಟಿಕೆಗಳನ್ನು ಅಳವಡಿಸಿರುವುದನ್ನು ಗಮನಿಸಿದರೆ ಪ್ರಯೋಗಾತ್ಮಕ ವ್ಯಾಕರಣ ಕಂಡುಬರುತ್ತದೆ. ಏಕೆಂದರೆ ಭಾಷೆಯಲ್ಲಿ ವ್ಯಾಕರಣಾಂಶಗಳು ಮತ್ತು ನಿಯಮಗಳು ಅಂತರ್ಗತಗೊಂಡಿರುವುದರಿಂದ ಅವುಗಳನ್ನು ಭಾಷೆಯ ರಚನೆ ಮತ್ತು ಪ್ರಯೋಗದ ಮೂಲಕ ಬೋಧಿಸುವುದರಿಂದ ಭಾಷಾ ಕಲಿಕೆಯೊಂದಿಗೆ ವ್ಯಾಕರಣವು ಕಲಿಕೆಗೆ ಸುಲಭವಾಗುತ್ತದೆ.

**೫. ವ್ಯಾಕರಣ ಕಲಿಸುವಾಗ ಪರಿಭಾಷೆ ಕಲಿಕೆಗೆ ಕಠಿಣವಾಗುತ್ತದೆಯೇ? ಕಠಿಣವಾದರೆ ಯಾವ ಪರಿಭಾಷೆಗಳು ಕಠಿಣವಾಗುತ್ತವೆ?**

ಪ್ರತಿಯೊಂದು ವಲಯಕ್ಕೂ ತನ್ನದೇಆದ ಪರಿಭಾಷೆ ಇರುವಂತೆ ವ್ಯಾಕರಣಕ್ಕೂ ತನ್ನದೇಆದ ಪರಿಭಾಷೆಯಿದೆ. ಪರಿಭಾಷೆಯು ಕಲಿಸುವ ಶಿಕ್ಷಕರಿಗೆ ತಿಳಿದಿರಬೇಕು. ಒಂದರಿಂದ ಏಳನೆಯ ತರಗತಿಯವರೆಗೆ ಪರಿಭಾಷೆಗಳು ಬೇಡ. ಎಂಟನೆ ತರಗತಿಯಿಂದ ಪರಿಭಾಷೆಗಳನ್ನು ಕಲಿಸಿಕೊಡುವುದು ಸೂಕ್ತ. ಅವುಗಳನ್ನು ಅನುಗಮನ ಪದ್ಧತಿಯಲ್ಲಿ ಕಲಿಸುವುದರಿಂದ ಸುಲಭವಾಗುತ್ತದೆಂಬುದು ನನ್ನ ಅಭಿಪ್ರಾಯ. ಈ ಹಂತದಲ್ಲಿ ಮಕ್ಕಳು ಮಾನಸಿಕ ಮತ್ತು ದೈಹಿಕ ವಯೋಮಾನಕ್ಕನುಗುಣವಾಗಿ ಅರ್ಥೈಸಿಕೊಳ್ಳಲು ಸಮರ್ಥರಾಗಿರುತ್ತಾರೆ. ಶ್ಚುತ್ವ, ಜಶ್ತ್ವ, ಛತ್ವ ಇತ್ಯಾದಿ ಸಂಸ್ಕೃತ ಸಂಧಿಗಳು ಕಲಿಸಲು ಕ್ಲಿಷ್ಟವಾಗಿವೆ. ಆದ್ದರಿಂದ ಇಂದು ಶಾಲಾ ಹಂತದಲ್ಲಿ ಅವುಗಳನ್ನು ಕಲಿಸುತ್ತಿಲ್ಲ. ಕಾರಣ ಕಲಿಸುವ ಶಿಕ್ಷಕರ ಅಭಿಪ್ರಾಯಗಳನ್ನಾಧರಿಸಿ ಕೈಬಿಡಲಾಗಿದೆ. ಕೆಲವೊಂದು ಪರಿಭಾಷೆಗಳು ಇಂದು ಮಕ್ಕಳಿಗೆ ಕಲಿಸುವ ಅಗತ್ಯವಿಲ್ಲ. ಅವುಗಳನ್ನು ಕಲಿಸುವುದರಿಂದ ಭಾಷಾ ಕಲಿಕೆಗೆ ಹಿನ್ನಡೆಯಾಗುತ್ತದೆ ಎಂಬುದು ನನ್ನ ಅಭಿಪ್ರಾಯವಾಗಿದೆ. ಆದರೆ ಪರಿಭಾಷೆಯ ತಿಳುವಳಿಕೆ ಶಿಕ್ಷಕರಿಗೆ ಇರುವುದು ಸೂಕ್ತ. ಭಾಷೆ ಅಭ್ಯಾಸಮಾಡುವವನಿಗೆ ವ್ಯಾಕರಣದ ಜ್ಞಾನ ಅಗತ್ಯವಾಗಿಬೇಕು.

**೬. ಇತ್ತೀಚೆಗೆ ವ್ಯಾಕರಣ ಅಧ್ಯಯನದ ಬಗ್ಗೆ ಆಧುನಿಕ ಚಿಂತನೆಗಳು ನಡೆಯುತ್ತಿವೆ. ಅದರ ಬಗ್ಗೆ ತಮ್ಮ ಅಭಿಪ್ರಾಯವೇನು?**

ನಾನು ಆಧುನಿಕ ಚಿಂತನೆಯನ್ನು ಸ್ವಾಗತಿಸುತ್ತೇನೆ. ಆದರೆ ಚಿಂತನೆಗಳು ಸಕಾರಾತ್ಮಕವಾಗಿರಬೇಕೆ ವಿನಹ ಸಾಂಪ್ರದಾಯಿಕ ವ್ಯಾಕರಣವನ್ನು ಅಳಿಸಿ ಹಾಕುವಂತಿರಬಾರದು. ಸಾವಿರಾರು ವರ್ಷಗಳಿಂದ ಕಲಿಯುತ್ತಾ ಬಂದಿರುವ ವ್ಯಾಕರಣವನ್ನು ಯಾರೋ ಒಬ್ಬ ಇಬ್ಬರು ಅಳಿಸಿ ಹಾಕಲು ಸಾಧ್ಯವಿಲ್ಲ. ಏಕೆಂದರೆ ಭಾಷೆ ಎನ್ನುವುದು ಸಾರ್ವತ್ರಿಕವಾದುದು. ಆಧುನಿಕ ಚಿಂತನೆಯನ್ನು ಸಾರ್ವಜನಿಕರು ಒಪ್ಪುವತನಕ ಆಧುನಿಕ ಚಿಂತಕರು ಏನೇ ಬದಲಾವಣೆ ಮಾಡಿದರು ಅವು ಪುಸ್ತಕದಲ್ಲಿ ಮಾತ್ರ ಉಳಿಯುತ್ತವೆಯೇ ಹೊರತು ಚಲಾವಣೆಗೆ ಬರುವುದಿಲ್ಲ. ಅಂತಹ ಚಿಂತನೆ ಪುಸ್ತಕ ಸಾಮಾಗ್ರಿಯಾಗಿ ಉಳಿಯುತ್ತದೆಯೇ ಹೊರತು ನಿತ್ಯ ಜೀವನಕ್ಕೆ ಸಾಮಾಗ್ರಿಯಾಗುವುದಿಲ್ಲ. ಜನ ಒಪ್ಪುವವರೆಗೆ ಆ ಚಿಂತನೆಗೆ ಬೆಲೆ ಇಲ್ಲ. ಆ ಚಿಂತನೆ ಚಿಂತನೆಯಾಗಿಯೇ ಉಳಿಯುವುದರಲ್ಲಿ ಅನುಮಾನವಿಲ್ಲ. ಏಕೆಂದರೆ ಭಾಷೆ ಒಬ್ಬರ ಸೊತ್ತಲ್ಲ. ಅದು ಬಳಸುವವರೆಲ್ಲರ ಸೊತ್ತಾಗಿರುವುದರಿಂದ ಅವರೊಪ್ಪುವವರೆಗೆ ಇದು

ಬೆಳಕಿಗೆ ಬರುವುದಿಲ್ಲ. ಆಡುಭಾಷೆಗೂ ಬರಹದ ಭಾಷೆಗೂ ಭಿನ್ನವಿಲ್ಲದಂತೆ ನಡೆಯುವ ಚಿಂತನೆಗಳು ಯಶಸ್ವಿಯಾಗುವುದಿಲ್ಲವೆಂಬುದು ನನ್ನ ಅಭಿಪ್ರಾಯವಾಗಿದೆ.

**೭. ಛಂದಸ್ಸು ಮತ್ತು ಅಲಂಕಾರಗಳು ವ್ಯಾಕರಣದ ವ್ಯಾಪ್ತಿಗೆ ಬರುತ್ತವೆಯೋ ಅಥವಾ ಇಲ್ಲವೋ?**

ಛಂದಸ್ಸು ಅಲಂಕಾರಗಳು ವ್ಯಾಕರಣದ ಒಂದು ಭಾಗವೆ ಹೊರತು ಬೇರೆ ಅಲ್ಲ. ಪದ್ಯದ ಹಾಡುಗಾರಿಕೆಯನ್ನು, ಲಯಬದ್ಧತೆಯನ್ನು, ಲಘು-ಗುರುಗಳಿಂದೊಡಗೊಡಿದ ಪ್ರಸ್ತಾರ, ಲಯ, ಪ್ರಾಸ ಇತ್ಯಾದಿಗಳನ್ನು ಛಂದಸ್ಸು ಒಳಗೊಂಡಿರುತ್ತದೆ. ಶಬ್ದಗಳ ವೈಚಿತ್ರ್ಯವನ್ನು ಶಬ್ದಾಲಂಕಾರವೆಂತಲೂ, ಅರ್ಥಗಳ ವೈಚಿತ್ರ್ಯವನ್ನು ಅರ್ಥಾಲಂಕಾರಗಳೆಂದು ನಾವು ಕರೆಯುತ್ತೇವೆ. ಇವುಗಳು ವ್ಯಾಕರಣಕ್ಕೆ ವಿಶೇಷವಾದ ಅಧ್ಯಯನಗಳು. ಏಕೆಂದರೆ ನಾವು ಮಾತನಾಡುವಾಗ ಸೌಂದರ್ಯಕ್ಕೆ ಛಂದಸ್ಸು, ಅಲಂಕಾರಗಳನ್ನು ಬಳಸುತ್ತೇವೆ. ನಮಗೆ ಕೇಳುವುದಕ್ಕೆ ಇಂಪಾಗಿರಬೇಕು. ವಿಶೇಷವಾದ ಅರ್ಥವನ್ನು ಕೊಡುತ್ತಿರಬೇಕೆಂಬ ಕಾರಣದಿಂದ ಚರಿತ್ರೆಯುದ್ದಕ್ಕೂ ವ್ಯಾಕರಣದ ಜೊತೆಗೆ ಛಂದಸ್ಸು, ಅಲಂಕಾರಗಳನ್ನು ನಾವು ಕಲಿಸುತ್ತ ಬಂದಿದ್ದೇವೆ. ನಾವು ಈಗ ಹೊಸದಾಗೇನು ಕಲಿಸುತ್ತಿಲ್ಲ. ಈ ಶಾಸ್ತ್ರವಿಷಯಗಳನ್ನು ಕಲಿಸುತ್ತಿರಬೇಕಾದರೆ ಕೆಲವೊಂದು ತತ್ವಗಳಿಗನುಗುಣವಾಗಿ ಕಲಿಸಬೇಕಾಗುತ್ತದೆ. ನಾವು ದಿನನಿತ್ಯ ಮಾತನಾಡುವಾಗ ಅನೇಕ ಅಲಂಕಾರಗಳನ್ನು ನಮಗರಿವಿಲ್ಲದಂತೆಯೆ ಬಳಸುತ್ತಿರುತ್ತೇವೆ. ಅದು ಭಾಷಾಸೌಂದರ್ಯವನ್ನು ಹೆಚ್ಚಿಸುವಂತದ್ದಾಗಿರುತ್ತದೆ. ಅದು ತನ್ನದೇಆದ ಪರಿಭಾಷೆಯನ್ನು ಹೊಂದಿರುತ್ತದೆ. ಆ ಪರಿಭಾಷೆಯ ತಿಳುವಳಿಕೆ ಶಿಕ್ಷಕರಿಗೆ ತಿಳಿದಿರಬೇಕು. ತಿಳಿದ ಶಿಕ್ಷಕ ನಮ್ಮ ಸುತ್ತಮುತ್ತ ಸಂಭಾಷಣೆಯಲ್ಲಿ ನಡೆಯುವ ಸಹಜವಾದ ಅಲಂಕಾರಿಕ ಪದಗಳಲ್ಲಿ ಅಲಂಕಾರಗಳನ್ನು ಗುರುತಿಸುವುದನ್ನು ಮಕ್ಕಳಿಗೆ ಕಲಿಸುವುದರಿಂದ ಅವುಗಳು ಕ್ಲಿಷ್ಟವಾಗುವುದಿಲ್ಲ. ಉದಾಹರಣೆಗೆ: 'ಅವನು ಕತ್ತೆ' ಎಂಬ ಸಹಜ ಮಾತಿನಲ್ಲಿ ರೂಪಕ ಅಲಂಕಾರವಿದೆ. ಕತ್ತೆ ಬೇರೆಯಲ್ಲ ಅವನು ಬೇರೆಯಲ್ಲ ಎಂಬುದರಲ್ಲಿ ಉಪಮೇಯ ಮತ್ತು ಉಪಮಾನಗಳಲ್ಲಿ ಅಭೇದವನ್ನು ಕಾಣಬಹುದು. 'ಅವನು ಕತ್ತೆಯಂತೆ ಇದ್ದಾನೆ' ಎಂಬ ವಾಕ್ಯದಲ್ಲಿ ಉಪಮಾಲಂಕಾರವಿಲ್ಲವೆ. ನಾವು ಯಾವುದೇ ಹಳೆಗನ್ನಡ ಕಾವ್ಯದ ಸಾಲುಗಳನ್ನು ಹೆಕ್ಕಿ ತೆಗೆದು ಅಲಂಕಾರಗಳನ್ನು ಕಲಿಸಲು ಮುಂದಾದಾಗ ಕ್ಲಿಷ್ಟವೆನಿಸಬಹುದು. ಸಹಜ ಸಂಭಾಷಣೆಯಲ್ಲಿಯ ಉದಾಹರಣೆಗಳನ್ನು ಆಯ್ದುಕೊಂಡಾಗ ಖಂಡಿತ ಕಷ್ಟವಾಗುವುದಿಲ್ಲ. ನಮ್ಮ ಶಿಕ್ಷಕರು ಆ ರೀತಿಯ

ಬೋಧನೆಯಲ್ಲಿ ಮಕ್ಕಳನ್ನು ತೊಡಗಿಸಿಕೊಳ್ಳದೇ ಇರುವುದರಿಂದ ಕ್ಲಿಷ್ಟವೇ ವಿನಹ ವಿಷಯಗಳು ಕ್ಲಿಷ್ಟವಾಗಿಲ್ಲವೆಂಬುದು ನನ್ನ ಅಭಿಪ್ರಾಯ.

**೪. ಪ್ರೊ. ಎಸ್. ಎಸ್. ತಾರನಾಥ**

**೧. ಪಠ್ಯಪುಸ್ತಕದ ವ್ಯಾಕರಣಕ್ಕೂ ಪರಾಮರ್ಶನಕ್ಕಾಗಿಯೇ ರಚನೆಯಾಗಿರುವ ವ್ಯಾಕರಣಕ್ಕೂ ಪರಸ್ಪರ ಸಂಬಂಧ ಇದೆಯೇ? ಇದ್ದರೆ ಅದು ಹೇಗೆ?**

ಪಠ್ಯಪುಸ್ತಕದ ವ್ಯಾಕರಣಕ್ಕೂ ಪರಾಮರ್ಶನಕ್ಕಾಗಿಯೇ ರಚನೆಯಾಗಿರುವ ವ್ಯಾಕರಣಕ್ಕೂ ಪರಸ್ಪರ ಸಂಬಂಧ ಇದ್ದೇಇದೆ. ಪಠ್ಯಪುಸ್ತಕದ ವ್ಯಾಕರಣ ಬೇರೆ, ಪರಾಮರ್ಶನ ವ್ಯಾಕರಣ ಬೇರೆ ಎಂದು ನಿರ್ಣಯಿಸಲು ಬರುವುದಿಲ್ಲ. ಏಕೆಂದರೆ ವ್ಯಾಕರಣ ಎರಡರಲ್ಲಿಯೂ ಸಮಾನವಾಗಿ ಇದ್ದೇ ಇರುತ್ತದೆ. ವ್ಯಾಕರಣದ ಪರಿಭಾಷೆಗಳು ಪಠ್ಯಪುಸ್ತಕಗಳಲ್ಲೂ ಇವೆ, ಪರಾಮರ್ಶನ ಗ್ರಂಥಗಳಲ್ಲೂ ಇವೆ. ಸೂತ್ರಗಳು ಎರಡರಲ್ಲೂ ಒಂದೇ ಇವೆ. ಆದರೆ ಪರಾಮರ್ಶನ ವ್ಯಾಕರಣದಲ್ಲಿಯ ಪ್ರಯೋಗ ಪಠ್ಯಪುಸ್ತಕಕ್ಕೆ ಸಂಬಂಧಪಟ್ಟಂತೆ ಇರಬೇಕೆಂದಿಲ್ಲ. ಪಠ್ಯಪುಸ್ತಕದ ವ್ಯಾಕರಣ ಪಠ್ಯಪುಸ್ತಕದಿಂದಲೇ ಉದಾಹರಣೆಗಳನ್ನು ಆಯ್ದುಕೊಂಡು ಕಲಿಕಾರ್ಥಿಗಳಿಗೆ ಅರ್ಥೈಸಲಾಗುತ್ತದೆ. ಇಲ್ಲಿ ಕಲಿಕಾರ್ಥಿಗಳ ಅಭ್ಯಾಸಕ್ಕೆ ಅನುಕೂಲವಾಗುವ ನಿಟ್ಟಿನಲ್ಲಿ ವ್ಯಾಕರಣದ ಸ್ವರೂಪವನ್ನು ನಿರ್ಣಯಿಸಲಾಗಿರುತ್ತದೆ. ಪರಾಮರ್ಶನ ವ್ಯಾಕರಣವು ವ್ಯಾಕರಣದ ಆಳವಾದ ಜ್ಞಾನವನ್ನು ತಿಳಿಯಲು ಅನುಕೂಲವಾದರೆ, ಪಠ್ಯಪುಸ್ತಕದ ವ್ಯಾಕರಣ ಪಠ್ಯಪುಸ್ತಕದಲ್ಲಿ ಬಂದಂತಹ ಭಾಷಾ ಮಾದರಿಯ ಸ್ವರೂಪವನ್ನು ಹೊಂದಿರುತ್ತದೆ. ಅದಕ್ಕೆ ಸಂಬಂಧಿಸಿದಂತಹ ಸೂತ್ರಗಳನ್ನು, ತತ್ವಗಳನ್ನು ಹೇಳಿಕೊಡಲಾಗುತ್ತದೆ. ಆದರೆ ಪರಾಮರ್ಶನ ಗ್ರಂಥಗಳಲ್ಲಿಯ ಅನುಕ್ರಮಣಿಕೆಯು ಪಠ್ಯಪುಸ್ತಕದ ವ್ಯಾಕರಣದಲ್ಲಿ ಇರಬೇಕೆಂದಿಲ್ಲ ಮತ್ತು ಇರುವುದಿಲ್ಲ. ಪರಾಮರ್ಶನ ವ್ಯಾಕರಣ ಗ್ರಂಥಗಳಲ್ಲಿ ಅನುಕ್ರಮಣಿಕೆ ಇದ್ದೇ ಇರುತ್ತದೆ. ಆದ್ದರಿಂದ ಇವೆರಡಕ್ಕೂ ಅಲ್ಪ ವ್ಯತ್ಯಾಸ ಇರುವುದು ಕಂಡುಬರುತ್ತದೆ. ಆದರೆ ಪರಾಮರ್ಶನ ವ್ಯಾಕರಣವನ್ನು ಬಿಟ್ಟು ಪಠ್ಯಪುಸ್ತಕವನ್ನು ಕಲಿಸುವುದು ಅಷ್ಟು ಪರಿಣಾಮಕಾರಿಯಾಗಲ್ಲ. ಪ್ರಯೋಜನಕಾರಿಯಾಗಲ್ಲ ಅಂತ ನಾನು ಹೇಳುವುದಿಲ್ಲ. ಪಠ್ಯಪುಸ್ತಕದ ವ್ಯಾಕರಣ ವಿದ್ಯಾರ್ಥಿಗಳಿಗೆ ಸೀಮಿತವಾದರೆ, ಪರಾಮರ್ಶನ ವ್ಯಾಕರಣ ವಿದ್ವಾಂಸರು, ವಿದ್ಯಾರ್ಥಿಗಳು, ಭಾಷಾ ಆಸಕ್ತರು ಮುಂತಾದವರಿಗೆ ಬೇಕಾಗುತ್ತದೆ. ಭಾಷಾ ಕುತೂಹಲಿಗಳಿಗೆ ಅಥವಾ ಕಲಿಕಾರ್ಥಿಗಳಿಗೆ ಭಾಷೆಯ ಸ್ವರೂಪವನ್ನು, ಭಾಷೆಯ ಸರಿತಪ್ಪುಗಳನ್ನು ತಿಳಿಸಲು ಪಠ್ಯಪುಸ್ತಕದ ವ್ಯಾಕರಣ ಅಗತ್ಯ.

ಭಾಷೆಯನ್ನು ಬಿಟ್ಟು ವ್ಯಾಕರಣವಿಲ್ಲ, ವ್ಯಾಕರಣವನ್ನು ಬಿಟ್ಟು ಭಾಷೆಯಿಲ್ಲ. ಮೊದಲು ಭಾಷೆ ನಂತರ ವ್ಯಾಕರಣ. ಭಾಷೆಯೊಳಗೆ ವ್ಯಾಕರಣ ಅಂತರ್ಗತವಾಗಿರುವುದರಿಂದ ಭಾಷೆಯನ್ನು ಪಠ್ಯಪುಸ್ತಕಗಳ ಮುಖಾಂತರ ಶಿಸ್ತುಬದ್ಧವಾಗಿ ಕಲಿಸುವುದರಿಂದ, ಪರಾಮರ್ಶನ ಗ್ರಂಥಗಳ ಸಂಬಂಧದ ಹಿನ್ನೆಲೆಯಲ್ಲಿಯೇ ಪಠ್ಯಪುಸ್ತಕಗಳನ್ನು ರೂಪಿಸಲಾಗಿರುತ್ತದೆ. ಹೀಗಾಗಿ ಇವೆರಡರ ಮಧ್ಯ ಸಂಬಂಧ ಇದ್ದೇಇದೆ ಎಂಬುದು ನನ್ನ ಅಭಿಪ್ರಾಯ.

**೨. ಶಾಲಾವ್ಯಾಕರಣ ಕಲಿಕೆ ಬೇಕೆ ಬೇಡವೆ ಎಂಬುದರ ಬಗ್ಗೆ ಚರ್ಚೆ ಇದೆ. ಅದರ ಬಗ್ಗೆ ನಿಮ್ಮ ಅಭಿಪ್ರಾಯವೇನು?**

ಶಾಲಾವ್ಯಾಕರಣವೆಂದರೆ ಅದರ ಸ್ವರೂಪ ಎಂತಹದು ಎಂಬುದು ಮೊದಲು ನಿರ್ಣಯವಾಗಬೇಕು. ಕೇಶಿರಾಜನ ವ್ಯಾಕರಣದ ಮಾದರಿಯನ್ನು ನಾವು ಇಂದಿಗೂ ಅನುಸರಿಸುತ್ತಾ ಬರ್ತಾ ಇದ್ದೇವೆಂದು ಭಾವಿಸಿದ್ದೇವೆ. ಆದರೆ ಅದು ಹಾಗಲ್ಲ. ಕೇಶಿರಾಜನ ಶಬ್ದಮಣಿದರ್ಪಣ ವ್ಯಾಕರಣವನ್ನು ನಾವು ಇಂದು ಕಲಿಸ್ತಾ ಇಲ್ಲ. ಆದರೆ ಅಲ್ಲಿರುವಂತಹ ಕೆಲವು ತತ್ವಗಳನ್ನು ಇಟ್ಟುಕೊಂಡು ನಾವು ಕಲಿಸ್ತಾ ಇದ್ದೇವೆ. ಆದ್ದರಿಂದ ಶಾಲಾ ವ್ಯಾಕರಣದ ಸ್ವರೂಪವನ್ನು ಪಠ್ಯಪುಸ್ತಕದ ಹಿನ್ನೆಲೆಯಲ್ಲಿ ರೂಪಿಸುವಂತಹದ್ದಾದರೆ ಅದರ ಅಗತ್ಯ ಇದ್ದೇ ಇದೆ.

ಭಾಷೆ ಎನ್ನುವುದು ನಮ್ಮ ಜೀವಮಾನದುದ್ದಕ್ಕೂ ಬಳಸುವಂತಹ ಒಂದು ಸಂವಹನ ಸಾಧನ. ಆ ಸಾಧನದ ಬಗ್ಗೆ ಪ್ರಾಥಮಿಕ ತಿಳುವಳಿಕೆಯನ್ನು ಹೊಂದಬೇಕಾದರೆ ಸ್ವಲ್ಪಮಟ್ಟಿಗಾದರು ವ್ಯಾಕರಣದ ಸ್ವರೂಪವನ್ನು ಕಲಿಸಿಕೊಡಬೇಕಾಗುತ್ತದೆ. ಶಾಲೆಗೆ ಹೋಗದೆ ಇರುವಂತಹ ವ್ಯಕ್ತಿಗೆ ಪ್ರಾಯಶಹ ವ್ಯಾಕರಣದ ಅಗತ್ಯವಿಲ್ಲ. ಆದರೆ ಭಾಷೆಯನ್ನು ಬಳಸುವಾತನಿಗೆ ವ್ಯಾಕರಣದ ಪ್ರಾಥಮಿಕಜ್ಞಾನ ಇದ್ದೇ ಇರುತ್ತದೆಂಬುನ್ನು ನಾವು ಮರೆಯುವಂತಿಲ್ಲ. ಅದನ್ನೇ ನಾವು ಅನೌಪಚಾರಿಕ ವ್ಯಾಕರಣವೆಂದು ಕರೆಯುತ್ತೇವೆ. ಈ ವ್ಯಾಕರಣ ಸಂವಹನದಲ್ಲಿ ಅರಿವಿಲ್ಲದೆ ಅಂತರ್ಗತವಾಗಿರುತ್ತದೆ. ಭಾಷೆಯ ಪ್ರಾಥಮಿಕಜ್ಞಾನ ಬರಬೇಕಾದರೆ ವ್ಯಾಕರಣದ ಪ್ರಾಥಮಿಕಜ್ಞಾನ ಬೇಕು. ಭಾಷಾ ಬಳಕೆಯ ಸರಿತಪ್ಪುಗಳ ಕೌಶಲ ಕಲಿಕಾರ್ಥಿಗಳಿಗೆ ತಿಳಿಯಬೇಕಾದರೆ ಅಂತಹ ಸಂದರ್ಭದಲ್ಲಿ ಅವರಿಗೆ ವ್ಯಾಕರಣದ ಅಗತ್ಯವಿದೆ. ಏಕೆಂದರೆ ಅವರಿಗೆ ಅಲ್ಪಪ್ರಾಣ ಯಾವುದು? ಮಹಾಪ್ರಾಣ ಯಾವುದು?

ಹ್ರಸ್ವ, ದೀರ್ಘ, ವ್ಯಂಜನ, ಗುಣಿತಾಕ್ಷರ, 'ಅ'ಕಾರ, 'ಹ'ಕಾರ ಇತ್ಯಾದಿಗಳ ಅರಿವು ಇಲ್ಲದೆ ಹೋದರೆ ಕಲಿಕೆಯಲ್ಲಿ ತೊಡಕುಂಟಾಗುತ್ತದೆ. ಇಂತಹ ತೊಡಕುಗಳ ನಿವಾರಣೆಗಾದರೂ ಕಲಿಕಾರ್ಥಿಗಳಿಗೆ ವ್ಯಾಕರಣದ ಪ್ರಾಥಮಿಕ ಜ್ಞಾನವಾದರು ಬೇಕಾಗುತ್ತದೆ. ಭಾಷೆಯ ಪ್ರಾಥಮಿಕ ತಿಳುವಳಿಕೆ ಕೊಡಬೇಕಾದಾಗ ವ್ಯಾಕರಣದ ಜ್ಞಾನಬೇಕೆಂಬುದು ನನ್ನ ಅಭಿಪ್ರಾಯ.

**೩. ನಿಮ್ಮ ಸೇವಾವೃತ್ತಿ ಅನುಭವದ ಆಧಾರದ ಮೇಲೆ ಕಲಿಕೆಯ ಪಠ್ಯಪುಸ್ತಕಗಳು ಹೇಗಿರಬೇಕು ? ನಿಮ್ಮ ಅಭಿಪ್ರಾಯವೇನು?**

ವ್ಯಾಕರಣಕಲಿಕೆ ಪುಸ್ತಕಗಳಿಗೂ ಕಲಿಕೆಯ ಪಠ್ಯಪುಸ್ತಕಗಳಿಗೂ ಅಜಗಜಾಂತರ ವ್ಯತ್ಯಾಸವಿದೆ. ಕಲಿಕೆಯ ಪಠ್ಯ ಕಾಲಕ್ಕನುಗುಣವಾಗಿ ಬದಲಾಗುತ್ತಾ ಹೋಗುತ್ತದೆ. ಎಲ್ಲಾ ಕಾಲದಲ್ಲೂ ಕಲಿಕೆಯ ಪಠ್ಯಪುಸ್ತಕಗಳು ಒಂದೇ ರೀತಿಯಾಗಿರುವುದಿಲ್ಲ. ಸಾಮಾಜಿಕ ಹಿನ್ನೆಲೆಯೊಳಗೆ, ಭಾಷಾಬಳಕೆ ಬದಲಾದ ಹಿನ್ನೆಲೆಯೊಳಗೆ ಕಲಿಕಾರ್ಥಿಯ ಬದುಕಿಗೆ ಬೇಕಾದಂತಹ ಪಠ್ಯಗಳು ಬದಲಾವಣೆಯಾಗುತ್ತ ಇರುತ್ತವೆ. ಇಂದಿನ ಶಾಲಾಹಂತದ ಯಾವುದೇ ಪಠ್ಯಪುಸ್ತಕದಲ್ಲಿ ಮಗುವಿನ ವ್ಯಕ್ತಿತ್ವ ವಿಕಾಸವನ್ನುಂಟುಮಾಡುವಂತಹ ಒಂದು ಅಧ್ಯಾಯ ಯಾವುದೇ ಒಂದು ರೂಪದಲ್ಲಿ ಕಾಣಿಸಿಕೊಳ್ಳುತ್ತದೆ. ಏಕೆಂದರೆ ಜನಸಂಖ್ಯೆ ಹೆಚ್ಚಾಗಿ ಆತಂಕ ಸೃಷ್ಟಿಯಾಗಿ ವೇಗದ ಬದುಕಿನಲ್ಲಿ ಬದುಕನ್ನು ಹೇಗೆ ಎದುರಿಸಬೇಕೆಂಬುದನ್ನು ರೂಢಿಸುವ ನಿಟ್ಟಿನಲ್ಲಿ ಆರಂಭ ಕಾಲದಿಂದಲೂ ಕಲಿಕಾ ಪಠ್ಯಗಳು ಕಾಲಾನುಗುಣವಾಗಿ ಬದಲಿಸಬೇಕಾಗುತ್ತದೆ ಮತ್ತು ರೂಪಿಸಬೇಕಾಗುತ್ತದೆ. ಹಿಂದಿನ ಪಠ್ಯಗಳು ಅಧ್ಯಾಪಕ ಕೇಂದ್ರಿತವಾಗಿರುತ್ತಿದ್ದವು. ಇಂದಿನ ಪಠ್ಯಗಳನ್ನು ಅಧ್ಯಾಪಕರೆ ರೂಪಿಸಿದರೂ ಅವುಗಳು ಶಿಶುಕೇಂದ್ರಿತವಾಗಿರಬೇಕು. ಈ ನಿಟ್ಟಿನಲ್ಲಿಯೇ ಕಲಿಕಾ ಪಠ್ಯಪುಸ್ತಕಗಳು ಬರುತ್ತಿರುವುದನ್ನು ನಾವು ಗಮನಿಸಬಹುದು.

ಮಕ್ಕಳ ಕಲಿಕೆಯ ಪಠ್ಯಗಳು ಹೊರೆಯಾಗದೆ, ಸರಳವಾಗಿ, ಸುಲಭವಾಗಿ ಅರ್ಥವಾಗಲು ಚಿತ್ರಗಳಿಂದ ಕೊಡಿರಬೇಕು. ಏಕೆಂದರೆ ಮಕ್ಕಳಿಗೆ ಚಿತ್ರಗಳು ಆಕರ್ಷಣೆಯಾದ್ದರಿಂದ ಚಿತ್ರಗಳೊಂದಿಗೆ ಕಲಿಕಾ ಪ್ರಕ್ರಿಯೆ ಪ್ರಾಥಮಿಕ ಹಂತದಲ್ಲಿ ಇಂದು ಸಾಗುತ್ತಿರುವುದು ಕಂಡುಬರುತ್ತದೆ. ಮಾನವೀಯ ಮೌಲ್ಯಗಳನ್ನು ಒಳಗೊಂಡ ಘಟನೆಗಳನ್ನು ಪಠ್ಯಗಳು ಒಳಗೊಂಡಿರಬೇಕು. ಮಕ್ಕಳ ಸ್ವ-ಕಲಿಕೆ, ಸ್ವ-ಪ್ರತಿಭೆಗೆ ಅನುಕೂಲವಿರಬೇಕು. ಭಾಷೆಯೊಂದಿಗೆ ವ್ಯಾಕರಣ ಅಂತರ್ಗತವಾಗಿರುತ್ತದೆಂಬುದನ್ನು ಶಾಲಾಹಂತಗಳಲ್ಲಿ ಕ್ರಿಯಾತ್ಮಕವಾಗಿ, ಪ್ರಯೋಗಾತ್ಮಕವಾಗಿ ವಿವಿಧ ಭಾಷಾ ಚಟುವಟಿಕೆಗಳ

ಮೂಲಕ ಕಲಿಸಿಕೊಡುವ ನಿಟ್ಟಿನಲ್ಲಿ ಪಠ್ಯಪುಸ್ತಕಗಳನ್ನು ರೂಪಿಸಬೇಕು. ಈ ಸ್ವರೂಪದ ಪಠ್ಯಗಳು ಇತ್ತೀಚೆಗೆ ಬರುತ್ತಿರುವುದು ನಮಗೆ ಕಂಡುಬರುತ್ತದೆ.

**೪. ವ್ಯಾಕರಣವನ್ನು ಸೂತ್ರದ ಮೂಲಕ ಕಲಿಸುವುದು ಸೂಕ್ತವೋ? ಅಥವಾ ಉದಾಹರಣೆಗಳ ಮೂಲಕ ಕಲಿಸುವುದು ಸೂಕ್ತವೋ? ಇವೆರಡಕ್ಕಿಂತ ಭಿನ್ನವಾದ ವಿಧಾನದಿಂದ ಸುಲಭವಾಗಿ ಕಲಿಸಲು ಸಾಧ್ಯತೆ ಇದೆಯೇ?**

ವ್ಯಾಕರಣ ಬೋಧನೆ ಶೈಕ್ಷಣಿಕ ವಿವಿಧ ಹಂತಗಳನ್ನು ಅವಲಂಬಿಸಿ ನಿರ್ಮಾಣವಾಗುವಂತಹದ್ದು. ಸೂತ್ರದಿಂದ ಉದಾಹರಣೆಗಳ ಕಡೆಗೆ ಸಾಗುವಂತಹ ನಿಗಮ ಪದ್ಧತಿಯು ತುಂಬಾ ಪ್ರಾಚೀನವಾದುದು. ಉದಾಹರಣೆಗಳಿಂದ ಸೂತ್ರದ ಕಡೆಗೆ ಸಾಗುವಂತಹ ಅನುಗಮನ ಪದ್ಧತಿಯನ್ನು ಆಧುನಿಕ ಪದ್ಧತಿಯಂತಲೂ ಕರೆಯಬಹುದು. ಉದಾಹರಣೆಗಳನ್ನು ಕೊಟ್ಟು ಅವುಗಳಲ್ಲಿ ಅಡಗಿರುವ ನಿಯಮವನ್ನು ಹೇಳುವಂತಹ ಅನುಗಮನ ಪದ್ಧತಿಯನ್ನು ಇಂದು ಶಾಲಾ ಹಂತಗಳಲ್ಲಿ ಕಲಿಸುವುದು ಸೂಕ್ತವೆನಿಸುತ್ತದೆ. ನಾವು ಬೋಧಿಸಲೋಸುಗ ಆಯ್ಕೆ ಮಾಡುವಂತಹ ಶೈಕ್ಷಣಿಕ ಹಂತ ಯಾವುದು ಎನ್ನುವುದರ ಹಿನ್ನೆಲೆಯಲ್ಲಿ ಕಲಿಸುವ ವಿಧಾನ ನಿರ್ಣಯವಾಗಬೇಕು. ಕಾಲೇಜು ಹಂತಗಳಲ್ಲಿ ನಿಗಮ ಪದ್ಧತಿಯಲ್ಲಿ, ಶಾಲಾಹಂತಗಳಲ್ಲಿ ಅನುಗಮನ ಪದ್ಧತಿಯಲ್ಲಿ ಕಲಿಸುವುದು ಸೂಕ್ತ. ಏಕೆಂದರೆ ಅಲ್ಪಸ್ವಲ್ಪ ವ್ಯಾಕರಣದ ತಿಳುವಳಿಕೆ ಇತ್ತು ಎಂದಾಗ ಅವರಿಗೆ ನಿಗಮ ಪದ್ಧತಿಯಲ್ಲಿಯೂ, ಇಲ್ಲದಾಗ ವ್ಯಾಕರಣದ ತಿಳುವಳಿಕೆಯನ್ನು ಕೊಡಬೇಕಾದರೆ ಅನುಗಮನ ಪದ್ಧತಿಯಲ್ಲಿ ಕಲಿಸುವುದು ಸೂಕ್ತ. ನಿಗಮ ಮತ್ತು ಅನುಗಮನ ಪದ್ಧತಿಗಳೆರಡೂ ಒಂದು ಕಡೆ ಮಿಶ್ರಣವಾಗಿಯೇ ಬರುತ್ತವೆ ಎನಿಸುತ್ತದೆ. ಹೇಳುವಂತಹ ಶಿಕ್ಷಕ ಅಥವಾ ಬೋಧಿಸುವಂತಹ ವಿಧಾನದ ಮೇಲೆ ನಿರ್ಧಾರವಾಗುತ್ತದೆ. ಎರಡೂ ವಿಧಾನಗಳನ್ನು ಎಷ್ಟರ ಮಟ್ಟಿಗೆ ಸಾಧ್ಯವೋ ಅಷ್ಟರಮಟ್ಟಿಗೆ ಬಳಸಿ, ಆಗ ಅದರ ಸಮಸ್ಯೆ ಬಗೆಹರಿಯುತ್ತದೆ. ಯಾವುದೇ ಶಾಸ್ತ್ರವಿಷಯವನ್ನು ಕಲಿಸಬೇಕಾದಾಗ ಇರುವ ಎರಡು ವಿಧಾನಕ್ಕಿಂತ ಭಿನ್ನವಾದ ವಿಧಾನ ಇದೆ ಅಂಥ ನನಗನ್ನಿಸುವುದಿಲ್ಲ. ಹೊಸ ವಿಧಾನವನ್ನು ಕಂಡುಹಿಡಿಯುವ ಸಾಧ್ಯತೆಗಳು ತುಂಬಾ ಕಡಿಮೆಯೆನಿಸುತ್ತದೆ. ಆದರೆ ಶಾಸ್ತ್ರ ಹೇಳಿದೆ ಎಂದ ಮಾತ್ರಕ್ಕೆ ಅದೇ ಅಂತಿಮವೆಂದು ಇಟ್ಟುಕೊಳ್ಳುವ ಆಗಿಲ್ಲ. ಅದನ್ನು ಪರೀಕ್ಷಿಸಬಹುದು, ಶೋಧಿಸಬಹುದು. ವ್ಯಾಕರಣದ ಬಗ್ಗೆ ಅಧ್ಯಯನಗಳು ನಡೆದಾಗ ಅಥವಾ ಆಧುನಿಕ ಚಿಂತನೆಗಳು ನಡೆದಾಗ ನಿಗಮ

ಮತ್ತು ಅನುಗಮನ ಪದ್ಧತಿಗಳಿಗಿಂತ ಭಿನ್ನವಾದ ವಿಧಾನವನ್ನು ಕಂಡುಕೊಳ್ಳಲು ಸಾಧ್ಯತೆಯಿದೆ.

**೫. ವ್ಯಾಕರಣ ಕಲಿಸುವಾಗ ಪರಿಭಾಷೆ ಕಲಿಕೆಗೆ ಕಠಿಣವಾಗುತ್ತದೆಯೇ? ಕಠಿಣವಾದರೆ ಯಾವ ಪರಿಭಾಷೆಗಳು ಕಠಿಣವಾಗುತ್ತವೆ?**

ಪರಿಭಾಷೆಯನ್ನು ಕಲಿಸುವುದು ಬಹಳ ಸುಲಭ. ಪರಿಭಾಷೆಯನ್ನು ಸರಿಯಾಗಿ ಅರ್ಥಮಾಡಿಕೊಳ್ಳದೆ ಶಿಕ್ಷಕರು ಕಲಿಸುವುದಕ್ಕೆ ಮುಂದಾಗುತ್ತ ಇರುವುದರಿಂದ ಸಮಸ್ಯೆ ಉಂಟಾಗಿದೆ. ಉದಾಹರಣೆಗೆ: ಅವ್ಯಯ ಪರಿಭಾಷೆಯನ್ನು ಪ್ರೌಢಶಾಲಾ ಹಂತದಲ್ಲಿ ಸರಿಯಾಗಿ ತಿಳಿಸಿರುವುದಿಲ್ಲ. ವ್ಯಯ ಅಂದರೆ ನಾಶವಾಗುವುದು. ಅವ್ಯಯ ಅಂದರೆ ನಾಶವಾಗದೇ ಇರುವಂತಹದ್ದು. ಯಾವುದೇ ಶಬ್ದದ ಜೊತೆ ತನ್ನ ಪದದ ಅರ್ಥವನ್ನು, ಆಕೃತಿಯನ್ನು ನಾಶಮಾಡಿಕೊಳ್ಳದೆ ಬಳಕೆಯಾಗುತ್ತದೆಯೋ ಅದನ್ನು ಅವ್ಯಯ ಎಂದು ಕರೆಯುವರು. ಇದನ್ನು ಅ + ವ್ಯಯ = ಅವ್ಯಯ ಎಂದು ಹೇಳಿ ಅದಕ್ಕೆ ಕೆಲವು ನಿದರ್ಶನಗಳನ್ನು ಕೊಡುವುದರ ಮುಖಾಂತರ ಬೋಧನೆ ಮಾಡಿದರೆ ಪರಿಭಾಷೆ ಖಂಡಿತ ಕಷ್ಟವೆನಿಸುವುದಿಲ್ಲ. ಆದರೆ ನಮ್ಮಲ್ಲಿ ಶಿಕ್ಷಕರು ಅವ್ಯಯದ ಸೂತ್ರವನ್ನು ಹೇಳಿದರೆ ಸಾಲದು ಅದಕ್ಕೆ ಕೊಡುವ ಉದಾಹರಣೆಗಳನ್ನು ನಮ್ಮ ಸುತ್ತಣ ಪರಿಸರದಲ್ಲಿ ಬಳಸುವ ಭಾಷೆಯಿಂದಲೇ ಆಯ್ದುಕೊಂಡು ಬೋಧಿಸಿದರೆ ಪರಿಭಾಷೆ ಕ್ಲಿಷ್ಟವಾಗಲಾರದು. ಪರಿಭಾಷೆಯನ್ನು ಸರಿಯಾಗಿ ಅರ್ಥಮಾಡಿಕೊಳ್ಳದೇ ಇರುವುದರಿಂದ ಕ್ಲಿಷ್ಟವಾಗ್ತಾ ಇದೆ. ವ್ಯಾಕರಣದ ಪರಿಭಾಷೆಗಳನ್ನು ಸರಿಯಾಗಿ ಅರ್ಥಮಾಡಿಕೊಳ್ಳಬೇಕೆಂಬ ಕಿರು ಉತ್ಸಾಹವು ಇದ್ದಂತೆ ಶಿಕ್ಷಕರಲ್ಲಿ ಕಾಣ್ತಾ ಇಲ್ಲ.

ನಾಮಪದ ಪರಿಭಾಷೆಯನ್ನು ಬೋಧಿಸುವಾಗ ಹೆಸರು, ನಾಮಧೇಯ, ನಾಮಕರಣ, ನಾಮಾಂಕಿತ ಇತ್ಯಾದಿ ರೂಪಗಳು ಹೆಸರನ್ನು ಸೂಚಿಸುವಂತಹ ಪದಗಳಿಗೆ ಪರ್ಯಾಯವಾಗಿ ಬರುವಂತಹ ಪದಗಳನ್ನು, ಇವುಗಳಿಗೆ ಬರುವಂತಹ ಪ್ರಕಾರಗಳನ್ನು ಕಲಿಕಾರ್ಥಿಗಳಿಗೆ ತಿಳಿಸಿದರೆ, ಅವರು ನಾಮಪದ ಪರಿಭಾಷೆಯನ್ನು ಕೊನೆವರೆಗೂ ಮರೆಯಲು ಸಾಧ್ಯವಿಲ್ಲ. ಆದರೆ ನಾಮಪದ ಪರಿಭಾಷೆಯನ್ನು ಸರಿಯಾಗಿ ಅರ್ಥಮಾಡಿಕೊಳ್ಳದೆ ಕಲಿಸುವುದರಿಂದ ಕಷ್ಟವೆಂದು ಬಿಂಬಿಸಲಾಗುತ್ತದೆ. ಕಲಿಸುವಂತಹ ಶಿಕ್ಷಕರು ಕುತೂಹಲದಿಂದ ಪರಿಭಾಷೆಗಳನ್ನು ಅರ್ಥೈಸಿಕೊಳ್ಳುವ ವ್ಯವಧಾನ ಅವರಲ್ಲಿ ಇಲ್ಲದಿರುವುದರಿಂದ ಸಮಸ್ಯೆ ಉಂಟಾಗಿದೆ. ನನ್ನ ಪ್ರಕಾರ ಸಮಸ್ಯೆ ಇರುವುದು ಪರಿಭಾಷೆಯಲ್ಲಲ್ಲ, ಕಲಿಸುವ ಶಿಕ್ಷಕರಲ್ಲಿ. ಎಲ್ಲಿಯತನಕ ಶಿಕ್ಷಕರು ಪರಿಭಾಷೆಗಳ

ಸ್ವರೂಪವನ್ನು ಸರಿಯಾಗಿ ಅರ್ಥಮಾಡಿಕೊಂಡು ಬೋಧಿಸಲು ಮುಂದಾಗುವುದಿಲ್ಲವೋ ಅಲ್ಲಿಯತನಕ ಈ ರೀತಿಯ ಕಠಿಣ, ಕ್ಲಿಷ್ಟ ಇತ್ಯಾದಿ ಪ್ರಶ್ನೆಗಳು ನಮ್ಮ ಮುಂದೆ ಬರುತ್ತವೆ.

**೬. ಇತ್ತೀಚೆಗೆ ವ್ಯಾಕರಣ ಅಧ್ಯಯನದ ಬಗ್ಗೆ ಆಧುನಿಕ ಚಿಂತನೆಗಳು ನಡೆಯುತ್ತಿವೆ ಅದರ ಬಗ್ಗೆ ತಮ್ಮ ಅಭಿಪ್ರಾಯವೇನು?**

ಭಾಷೆಯನ್ನುವುದು ಯುನಿವರ್ಸಲ್, ಭಾಷಾವಿಜ್ಞಾನ ಎನ್ನವುದು ಯುನಿವರ್ಸಲ್ ಹಾಗೆ ವ್ಯಾಕರಣವು ಕೂಡ ಯುನಿವರ್ಸಲ್. ಯುನಿವರ್ಸಲ್ ಆಗಿರುವ ಒಂದು ಶಾಸ್ತ್ರ ವಿಷಯವೇನಿದೆ, ಆ ಶಾಸ್ತ್ರವಿಷಯಕ್ಕೆ ಸಂಬಂಧಿಸಿದ ಹಾಗೆ ನಾವು ಆ ಹಂತದಲ್ಲಿ ಕುರಿತು ಆಲೋಚನೆ ಮಾಡಬೇಕೆ ವಿನಹ ಕನ್ನಡದ್ದೆ ವ್ಯಾಕರಣ ಬೇರೆ, ಸಂಸ್ಕೃತದ್ದೆ ವ್ಯಾಕರಣ ಬೇರೆ ಎಂದು ಹೇಳಲಿಕ್ಕಾಗುವುದಿಲ್ಲ. ಭಾಷೆಯ ರಚನೆಯನ್ನು ತಿಳಿಸುವಂತಹ ಶಾಸ್ತ್ರ ಒಂದೇ. ಆದರೆ ಆ ತಂತ್ರಕ್ಕೆ ಸಂಬಂಧಿಸಿದಂತೆ ಬಳಸುವ ಉಪಕರಣಗಳಿದೆಯಲ್ಲ ಅದು ಕನ್ನಡದ ವ್ಯಾಕರಣ, ಸಂಸ್ಕೃತದ ವ್ಯಾಕರಣ ಆಗುತ್ತೆ. ಇಂದು ಜನರೆಲ್ಲ ಒಂದು ಭಾಷಾಸ್ವರೂಪಕ್ಕೆ ಬಂದು ನಿಂತಿದ್ದಾರೆ. ಅಂದರೆ ಸ್ವರ, ವ್ಯಂಜನ, ಹ್ರಸ್ವ, ದೀರ್ಘ, ಲಿಂಗ, ವಚನ ಇತ್ಯಾದಿಗಳನ್ನು ತಿಳಿದುಕೊಂಡಿದ್ದಾರೆ. ಸ್ವರಕ್ಕೆ ತೆರೆಯುಲಿಯಂತಲೂ, ವ್ಯಂಜನಕ್ಕೆ ಮುಚ್ಚುಲಿಯಂತಲೂ ಬಳಸಿ ಒಂದು ಪರಿಭಾಷೆಯನ್ನು ಸೃಷ್ಟಿಸಿದರೇ ವಿನಹ ಆ ಪರಿಭಾಷೆಯ ಮೂಲಕ ಹೆಚ್ಚಿನದನ್ನು ಸಾಧಿಸುತ್ತೇವೆಂದಿನಿಸುವುದಿಲ್ಲ. ಆದ್ದರಿಂದ ಸ್ವರ, ವ್ಯಂಜನ ಇತ್ಯಾದಿ ಬಳಸುವಂತಹದ್ದರಲ್ಲಿ ತಪ್ಪೇನಿಲ್ಲ. ಅಷ್ಟೊಂದು ರಿಜಿಡ್, ಮಡಿವಂತಿಕೆ ಇರಬೇಕೆನಿಸುವುದಿಲ್ಲ.

ಸ್ವರವನ್ನು ತೆರೆಯುಲಿಯಂತಲೂ ವ್ಯಂಜನವನ್ನು ಮುಚ್ಚುಲಿಯಂತಲೂ ಬಳಸುವ ಪರಿಕಲ್ಪನೆ ಏನು ತುಂಬಾ ಭಿನ್ನ ಅಲ್ಲ. ಬಳಸುತ್ತಿರುವ ಪರಿಭಾಷೆ ಒಂದು ಕಡೆ ಕಠಿಣವೆಂದು ಹೇಳುವುದಾದರೆ, ಇನ್ನೊಂದು ಕಡೆ ಪರಿಭಾಷೆಗಳನ್ನು ಸುಲಭ ಮಾಡಲು ಹೋಗಿ ಕಠಿಣ/ಗೊಂದಲ ಮಾಡಲು ಮುಂದಾದಂತಾಗುತ್ತದೆ. ಇದು ಎಷ್ಟರಮಟ್ಟಿಗೆ ಸಾಧಕವಾಗಿರುತ್ತದೆ. ಹಾಗಂತ ಹೇಳಿ ನಾನು ಪರಿಭಾಷೆಗಳನ್ನು ಸೃಷ್ಟಿಸಬೇಡಿ ಅಂತ ಹೇಳ್ತಾ ಇಲ್ಲ. ಪರಿಭಾಷೆಗಳನ್ನು ಪ್ರಯೋಗಿಸಿ ಜನರ ಮನಸ್ಸಿನಲ್ಲಿ ಇನ್ನಷ್ಟು ವ್ಯಾಕರಣ ಭೀತಿಯನ್ನು ಹುಟ್ಟಿಸುವುದೇನಿದೆಯಲ್ಲ ಅದು ವ್ಯಾಕರಣದ ಬಗ್ಗೆ ಒಂದು ಸಣ್ಣ ಅಸಡ್ಡೆ, ಅಲಕ್ಷ್ಯತನ ಮೂಡಿತೆಂದರೆ ಆಗ ಕಷ್ಟ ಆಗಲಿಕ್ಕೆ ಶುರುವಾಗುತ್ತದೆ. ಪರಿಭಾಷೆಗಳು ಬದಲಾಗಲ್ಲ, ಅವುಗಳನ್ನು ನಿಮ್ಮ ಸ್ವಂತ ಪರಿಭಾಷೆಗಳಲ್ಲಿ ವಿವರಿಸಲಿಕ್ಕೆ ಪ್ರಯತ್ನಿಸುತ್ತೀರಿ. ಅಷ್ಟು ಬಿಟ್ಟು ಬೇರೆ ವಿವರಿಸುತ್ತೀರಿ ಎಂದೆನಿಸುವುದಿಲ್ಲ. ಬಹಳ ಹಿಂದೆ ಆಂಡಯ್ಯ ಎಂಬ

ಕವಿ ಕನ್ನಡದ್ದನ್ನೇ ಬಳಸುತ್ತೇನೆಂದುಕೊಂಡು ಆತ ಎಷ್ಟರಮಟ್ಟಿಗೆ ಯಶಸ್ವಿಯಾದ ಎಂಬುದನ್ನು ನಾವು ಚರಿತ್ರೆಯಲ್ಲಿ ಗಮನಿಸಬಹುದು. ಈ ಒಂದು ಗ್ಲೋಬಲೈಜೇಶನ್ ವಲಯದೊಳಗೆ ಇಷ್ಟೊಂದು ಮಡಿವಂತಿಕೆಯನ್ನು ತೋರಿಸಬೇಕಾದ ಅಗತ್ಯ ಇದೆಯೇ ಎಂಬುದನ್ನು ನಾವು ಆಲೋಚನೆ ಮಾಡಬೇಕಾಗಿದೆ. ಒಂದು ಮಾತಿನಲ್ಲಿ ಹೇಳುವುದಾದರೆ ಭಾಷೆ ಎನ್ನುವುದು ಕೆರೆಯ ನೀರಿದ್ದಂತೆ ಅದನ್ನು ಯಾರು ಬೇಕಾದರು ಬಳಸಬಹುದು. ಆದರೆ ಅದನ್ನು ಅಶುದ್ಧ ಮಾಡುವ ಕೆಲಸವನ್ನು ಮಾಡಬಾರದು ಎಂಬುದು ನನ್ನ ಅಭಿಪ್ರಾಯವಾಗಿದೆ.

**೭. ಛಂದಸ್ಸು ಮತ್ತು ಅಲಂಕಾರಗಳು ವ್ಯಾಕರಣದ ವ್ಯಾಪ್ತಿಗೆ ಬರುತ್ತವೆಯೇ ಅಥವಾ ಇಲ್ಲವೋ?**

ಛಂದಸ್ಸು ಮತ್ತು ಅಲಂಕಾರಗಳೆರಡೂ ವ್ಯಾಕರಣದ ವ್ಯಾಪ್ತಿಗೆ ಬರುವುದಿಲ್ಲ. ಏಕೆಂದರೆ ಛಂದಸ್ಸು ಒಂದು ಪದ್ಯ ರಚನೆಯ ತತ್ವಗಳನ್ನು ಕುರಿತು ಹೇಳುತ್ತದೆ. ಆದರೆ ಭಾಷೆಯ ಸರಿತಪ್ಪುಗಳನ್ನು ಕುರಿತು ಅದು ಪ್ರಸ್ತಾಪಮಾಡುವುದಿಲ್ಲ. ಎಲ್ಲೋ ಒಂದು ಕಡೆ ಛಂದಸ್ಸಿನ ಒಂದು ಅಂಶ ವ್ಯಾಕರಣದ ಭಾಗವಾಗಿ ಬರಬಹುದು. ಹ್ರಸ್ವಸ್ವರವನ್ನು ಲಘುವೆಂತಲೂ, ದೀರ್ಘಸ್ವರವನ್ನು ಗುರುವೆಂತಲೂ, ಪ್ಲುತ ಸ್ವರವನ್ನು ಮೂರು ಮಾತ್ರೆಗಳೆಂತಲೂ ಈ ತರಹದ ಪ್ರಾಥಮಿಕ ಅಂಶಗಳು ಭಾಷೆಯ ನೆಲೆಯಲ್ಲಷ್ಟೇ ಬರುತ್ತದೆಂದು ಹೇಳಬಹುದು. ಛಂದಸ್ಸು ಪದ್ಯದ ಅಭಿವ್ಯಕ್ತಿ. ಅದರ ವಿನ್ಯಾಸ, ಲಯಾದಿಗಳನ್ನು ಕುರಿತಾಗಿ ಬರುವಂತಹದ್ದೇ ವಿನಹ ಅದು ವ್ಯಾಕರಣಕ್ಕೆ ಬರುತ್ತದೆಂದು ಒಪ್ಪುವುದು ಕಷ್ಟ. ಹಾಗೆಯೇ ಅಲಂಕಾರವು ಕೂಡ ಅಷ್ಟೆ. ಯಾವುದೋ ಒಂದು ಹೋಲಿಕೆಯನ್ನು ಕೊಡುವುದು, ಒಂದು ಸಂಗತಿ ಶ್ಲೇಷದಲ್ಲಿ ಬಂದಿದೆ ಎಂದು ಹೇಳುವುದು, ಅಥವಾ ಬೇರೆ ರೀತಿಯ ಯಮಕದಲ್ಲಿ ಬಂದಿದೆ ಎಂದು ಹೇಳುತ್ತಾ ಹೋಗುವ ಕ್ರಮ ಬರುತ್ತದೆಯೇ ವಿನಹ ಅಲಂಕಾರದ ಎಲ್ಲಾ ರೂಪಗಳು ವ್ಯಾಕರಣ ಭಾಗವಾಗಿ ಬರುವುದಿಲ್ಲ.

ಕಾವ್ಯ ರಚನೆಯ ತತ್ವಗಳನ್ನು ಅರಿಯಬೇಕಾದಾಗ ಛಂದಸ್ಸು, ಅಲಂಕಾರಗಳ ಅರಿವು ಕವಿಗೆ ಗೊತ್ತಿರಬೇಕೆಂದು ಕವಿರಾಜಮಾರ್ಗಕಾರ ಮುಂತಾದವರು ಹೇಳುತ್ತಾ ಬಂದಿದ್ದಾರೆ. ಆ ಹಿನ್ನೆಲೆಯಲ್ಲಿ ವ್ಯಾಕರಣ, ಛಂದಸ್ಸು ಅಲಂಕಾರಗಳನ್ನು ಕಲಿಸುತ್ತಾ ಬಂದಿದ್ದಾರೆ. ಹೀಗಾಗಿ ವ್ಯಾಕರಣಶಾಸ್ತ್ರವೇ ಬೇರೆ, ಛಂದಶಾಸ್ತ್ರವೇ ಬೇರೆ, ಅಲಂಕಾರಶಾಸ್ತ್ರವೇ ಬೇರೆ. ಪದ್ಯಕ್ಕೆ ಪ್ರಸ್ತಾರ ಹಾಕುವುದು ಛಂದಸ್ಸಾದರೆ, ಪದ್ಯದಲ್ಲಿ

ಬಂದಿರುವ ಹೋಲಿಕೆಯನ್ನು ಗುರುತಿಸುವುದು ಅಲಂಕಾರವಾಗುತ್ತದೆ. ಪದ್ಯದಲ್ಲಿ ಬಂದಿರುವ ಶಬ್ದಗಳ ಸ್ವರೂಪವನ್ನು ವಿವರಿಸುವುದು ವ್ಯಾಕರಣವಾಗುತ್ತದೆ. ವ್ಯಾಕರಣದ ಜೊತೆಗೆ ಛಂದಸ್ಸು ಅಲಂಕಾರಗಳ ಜ್ಞಾನವನ್ನು ಹೊಂದಿದ್ದರೆ ಅವನು ತಿಳಿದವನು, ಬುದ್ಧಿವಂತ ಎಂದು ಒಂದು ಕಾಲಕ್ಕೆ ಭಾವಿಸಿದ್ದರು. ಹಾಗಾಗಿ ಅವುಗಳನ್ನು ವ್ಯಾಕರಣದ ಜೊತೆಗೆ ಸೇರಿಸಿದ್ದಾರೆಯೇ ವಿನಹ ಛಂದಸ್ಸು ಅಲಂಕಾರಗಳು ವ್ಯಾಕರಣದ ಭಾಗವಾಗಿರಲಿಲ್ಲ. ಬಹು ಹಿಂದಿನಿಂದ ವ್ಯಾಕರಣ, ಛಂದಸ್ಸು, ಅಲಂಕಾರ, ನಿರುಕ್ತ ಇವುಗಳನ್ನು ಬೇರೆ ಬೇರೆ ಅಂಗಗಳಾಗಿಯೇ ಕಲಿಸಿಕೊಡುವ ಪರಿಪಾಠವಿತ್ತೆಂಬುದನ್ನು ಗಮನಿಸಬಹುದು.

**೫. ಡಾ. ಸಿ. ಎಸ್. ರಾಮಚಂದ್ರ**

**೧. ಪಠ್ಯಪುಸ್ತಕದ ವ್ಯಾಕರಣಕ್ಕೂ ಪರಾಮರ್ಶನಕ್ಕಾಗಿಯೇ ರಚನೆಯಾಗಿರುವ ವ್ಯಾಕರಣಕ್ಕೂ ಪರಸ್ಪರ ಸಂಬಂಧ ಇದೆಯೇ? ಇದ್ದರೆ ಅದು ಹೇಗೆ?**

ಪಠ್ಯಪುಸ್ತಕದ ವ್ಯಾಕರಣಕ್ಕೂ ಪರಾಮರ್ಶನ ವ್ಯಾಕರಣಕ್ಕೂ ಸಂಬಂಧ ಇದ್ದೇಇದೆ. ವ್ಯಾಕರಣಕ್ಕೆ ತನ್ನದೇಆದ ಪರಿಭಾಷೆ ಇರುವುದರಿಂದ ಆ ಪರಿಭಾಷೆಗಳನ್ನು ಮಕ್ಕಳ ಭಾಷಾ ಬಳಕೆ ಮತ್ತು ರಚನೆಯ ಹಿನ್ನೆಲೆಯಲ್ಲಿ ಪಠ್ಯಪುಸ್ತಕಗಳಲ್ಲಿ ಶಾಲಾ ಹಂತಗಳಿಗನುಗುಣವಾಗಿ ಪಠ್ಯದ ಜೊತೆಜೊತೆಯಲ್ಲಿ ಭಾಷೆಯ ಆಂತರ್ಯದೊಳಗೆ, ವಿವಿಧ ಭಾಷಾ ಚಟುವಟಿಕೆಗಳ ಮೂಲಕ ಕಲಿಸುತ್ತಿರುವುದನ್ನು ಗಮನಿಸಿದಾಗ ಸಂಬಂಧ ಇದ್ದೇಇದೆ. ಯಾವ ವ್ಯಾಕರಣಾಂಶಗಳು ಯಾವ ಭಾಷಾಮಟ್ಟದ ಮಕ್ಕಳಿಗೆ ಅಗತ್ಯವಿದೆಯೋ ಆ ಹಂತದ ಮಕ್ಕಳಿಗೆ ಕ್ರಿಯಾತ್ಮಕವಾಗಿ ಅಥವಾ ಪ್ರಾಯೋಗಿಕವಾಗಿ ಕಲಿಸಲಾಗುತ್ತದೆ. ಪಠ್ಯಪುಸ್ತಕದ ವ್ಯಾಕರಣ ಪರಿಭಾಷೆ ಮತ್ತು ಪರಾಮರ್ಶನ ವ್ಯಾಕರಣ ಪರಿಭಾಷೆ ಬೇರೆಬೇರೆಯಾಗಿರುವುದಿಲ್ಲ. ಆದರೆ ಮಕ್ಕಳ ಕಲಿಕೆಗೆ, ಅಭ್ಯಾಸದ ಅನುಕೂಲಕ್ಕಾಗಿ ಕೆಲವೊಂದು ಭಾಷಾವಿಜ್ಞಾನದ ಹಿನ್ನೆಲೆಯ ರೂಪಗಳನ್ನು ಇತ್ತೀಚೆಗೆ ಪಠ್ಯಗಳಲ್ಲಿ ಬಳಕೆಮಾಡಿರುವುದು ಕಂಡುಬರುತ್ತದೆ. ಕಾರಣ ಮಕ್ಕಳಿಗೆ ಭಾಷೆ ಕಲಿಕೆ ಪ್ರಧಾನವೇ ಹೊರತು, ವ್ಯಾಕರಣ ಕಲಿಕೆಯಲ್ಲ. ವ್ಯಾಕರಣ ಕಲಿಸಲೋಸುಗ ಪಠ್ಯಗಳಿರುವುದಿಲ್ಲ. ಭಾಷೆ ಕಲಿಸಲೋಸುಗ ಪಠ್ಯಗಳನ್ನು ರೂಪಿಸಲಾಗುತ್ತದೆ. ಭಾಷೆಯೊಳಗಡೆ ವ್ಯಾಕರಣಾಂಶಗಳು ಅಧ್ಯಾಹಾರವಾಗಿರುತ್ತವೆ. ಅವುಗಳನ್ನು ಅನೌಪಚಾರಿಕವಾಗಿ ಭಾಷೆಯ ಪ್ರಯೋಗಕ್ಕೆ ತಂದುಕೊಳ್ಳುವಾಗ ವ್ಯಾಕರಣದ ಪ್ರಾಥಮಿಕ ತಿಳುವಳಿಕೆ ಅಗತ್ಯ.

ಪರಾಮರ್ಶನ ಗ್ರಂಥಗಳು ಅಧ್ಯಾಪಕರಿಗೆ ಪ್ರಯೋಜನಕಾರಿಯಾದರೆ, ಪಠ್ಯಪುಸ್ತಕಗಳ ವ್ಯಾಕರಣ ವಿದ್ಯಾರ್ಥಿಗಳಿಗೆ ಪ್ರಯೋಜನಕಾರಿ. ಎರಡೂ ಕೂಡ ಭಾಷಿಕ ರಚನೆಯ ಸ್ವರೂಪವನ್ನು ಕಟ್ಟಿಕೊಡುತ್ತವೆ. ಪರಾಮರ್ಶನ ಗ್ರಂಥಗಳು ವ್ಯಾಕರಣವನ್ನು ಇಡಿಯಾಗಿ ವಿವರಿಸಿದರೆ, ಪಠ್ಯಪುಸ್ತಕಗಳು ವ್ಯಾಕರಣಾಂಶಗಳನ್ನು ಬಿಡಿಬಿಡಿಯಾಗಿ ವಿವರಿಸುತ್ತವೆ. ಭಾಷೆ ಮೊದಲು ನಂತರ ವ್ಯಾಕರಣ. ಭಾಷೆಯನ್ನು ಕಲಿಯಲು ವ್ಯಾಕರಣದ ಅಗತ್ಯವಿಲ್ಲ. ವ್ಯಾಕರಣವನ್ನು ತಿಳಿದು ಭಾಷೆಯನ್ನು ಯಾರು ಬಳಸುವುದಿಲ್ಲ. ಭಾಷಿಕ ರಚನೆಯ ಸ್ವರೂಪವನ್ನು ತಿಳಿಯಲು ವ್ಯಾಕರಣಬೇಕು. ನಾವು ಶಾಲಾಪಠ್ಯಗಳಲ್ಲಿ ವ್ಯಾಕರಣವನ್ನು ಕಲಿಸುತ್ತಿಲ್ಲ. ವ್ಯಾಕರಣಾಂಶಗಳನ್ನು ಕಲಿಸಿಕೊಡುತ್ತಿದ್ದೇವೆ. ವ್ಯಾಕರಣಾಂಶಗಳನ್ನು ವಿವಿಧ ಭಾಷಾ ಚಟುವಟಿಕೆಗಳ, ಅಭ್ಯಾಸಗಳ ಮೂಲಕ ಕಲಿಸಿಕೊಡಲಾಗುತ್ತಿದೆ. ಈ ಚಟುವಟಿಕೆಗಳಲ್ಲಿ ಪರೋಕ್ಷವಾಗಿ ವ್ಯಾಕರಣಾಂಶಗಳನ್ನು ಅಳವಡಿಸಲಾಗಿರುತ್ತದೆ. ವ್ಯಾಕರಣಾಂಶಗಳನ್ನು ತಿಳಿಸಲು ಬಳಸಿದ ಪರಿಭಾಷೆಗೂ ಮತ್ತು ಪರಾಮರ್ಶನ ಗ್ರಂಥಗಳಲ್ಲಿ ಬಳಸಿದಂತಹ ಪರಿಭಾಷೆಗೂ ಭಿನ್ನತೆ ಇರದೆ ಸಾಮ್ಯತೆ ಇರುವುದರಿಂದ ಸಂಬಂಧ ಇದ್ದೇ ಇದೆಯಂಬುದು ನನ್ನ ಅಭಿಪ್ರಾಯವಾಗಿದೆ.

**೨. ಶಾಲಾವ್ಯಾಕರಣ ಕಲಿಕೆ ಬೇಕೆ ಬೇಡವೆ ಎಂಬುದರ ಬಗ್ಗೆ ಚರ್ಚೆ ಇದೆ. ಅದರ ಬಗ್ಗೆ ತಮ್ಮ ಅಭಿಪ್ರಾಯವೇನು?**

ಶಾಲಾ ವಿವಿಧ ಹಂತಗಳಲ್ಲಿ ವ್ಯಾಕರಣ ಕಲಿಕೆ ಬೇಕು. ಆದರೆ ಬೋಧನೆಯಲ್ಲಿ ಪ್ರತ್ಯೇಕವಾಗಿ ಬೇಡ. ಅಂದರೆ ಭಾಷೆಯನ್ನು ಕಲಿಸುವಾಗ ಅದರ ಒಡಲೊಳಗಿರುವ ನಿಯಮಗಳನ್ನು ಪ್ರತ್ಯೇಕಗೊಳಿಸುವುದು ಬೇಡ. ವಿದ್ಯಾರ್ಥಿಗಳಿಗೆ ನಿಯಮಾದಿಗಳನ್ನು ಗಮನಿಸುವ ಹಾಗೆ ತಿಳಿಸಬೇಕು. ವಿವರಣೆಯ ಮೂಲಕವಾಗಿ, ಮಗುವಿನ ಪ್ರಜ್ಞೆಗೆ ಅನುಗುಣವಾಗಿ ವ್ಯಾಕರಣಾಂಶಗಳನ್ನು ಭಾಷೆಯ ಜೊತೆಗೆ ತಿಳಿಸಿಕೊಡಬೇಕು. ಏಕೆಂದರೆ ಮೊದಲು ಭಾಷೆ ನಂತರ ವ್ಯಾಕರಣ. ಭಾಷೆಯು ಸಂಕೀರ್ಣವಾದದ್ದು. ಮಗು ತಾಯಿಯ ಗರ್ಭದಿಂದ ಹೊರಜಗತ್ತಿಗೆ ಬಂದಾಗ ಅದರ ಅಳುವೆ ಭಾಷೆಯ ಮೂಲವಾಗಿರುತ್ತದೆ. ನಂತರ ಭಾಷೆಯ ತಾರ್ಕಿಕತೆಯನ್ನು ಪಡೆಯುತ್ತ ಭಾಷೆಯನ್ನು ಕಲಿಯುವುದಕ್ಕೆ, ಅರ್ಥೈಸುವುದಕ್ಕೆ ವ್ಯಾಕರಣಬೇಕಿಲ್ಲ. ಭಾಷೆಯನ್ನು ಪ್ರಯೋಗಿಸುವುದಕ್ಕೆ ಅಥವಾ ಭಾಷೆಯ ರಚನೆಗೆ ವ್ಯಾಕರಣ ಬೇಕು ಕಲಿಕೆಗೆ ಬೇಡ. ಪಠ್ಯಪುಸ್ತಕಗಳಲ್ಲಿ ವ್ಯಾಕರಣವು ಅಧ್ಯಾಹಾರವಾಗಿರುತ್ತದೆ. ಭಾಷಾ ಚಟುವಟಿಕೆಗಳ, ಅಭ್ಯಾಸಗಳ ಮೂಲಕ ಕಲಿಸಿಕೊಡಲಾಗುತ್ತದೆ. ಶಿಕ್ಷಕ ಭಾಷೆಯ ಸೂಕ್ಷ್ಮತೆಗಳನ್ನು ತಿಳಿದಿರಬೇಕು. ಹಾಗಾದಾಗ

ಮಗುವಿಗೆ ಚೆನ್ನಾಗಿ ತಿಳಿಸಲು ಸಾಧ್ಯವಾಗುತ್ತದೆ. ಭಾಷೆಯ ಕಲಿಕೆಗೆ ವ್ಯಾಕರಣ ಅಗತ್ಯವಿಲ್ಲ. ಭಾಷೆಯ ಪ್ರಾಯೋಗಿಕತೆಗೆ ಅಥವಾ ರಚನೆಗೆ ವ್ಯಾಕರಣ ಅಗತ್ಯವಾಗಿ ಬೇಕು.

ವ್ಯಾಕರಣವು ನಮ್ಮ ಶಾಲಾ ಪಠ್ಯಪುಸ್ತಕಗಳಲ್ಲಿ ಏಕಮುಖವಾಗಿರುತ್ತದೆ. ಭಾಷೆಯಲ್ಲಿ ಅಂತರ್ಗತವಾಗಿರುತ್ತದೆ. ಭಾಷಾ ಕಲಿಕೆಗೋಸ್ಕರವಾಗಿ ಪಠ್ಯಗಳಿವೆಯೇ ಹೊರತು ವ್ಯಾಕರಣ ಕಲಿಕೆಗಲ್ಲ. ಭಾಷೆ ಅಂತರ್ಗತವಲ್ಲ. ಹೀಗಾಗಿ ನಾವು ಶಾಲಾ ವಿವಿಧ ಹಂತಗಳಲ್ಲಿ ಭಾಷೆಯ ಜೊತೆಜೊತೆಯಲ್ಲಿ ವ್ಯಾಕರಣಾಂಶಗಳನ್ನು ಕ್ರಿಯಾತ್ಮಕವಾಗಿ, ಪ್ರಾಯೋಗಿಕವಾಗಿ ವಿವಿಧ ಚಟುವಟಿಕೆಗಳ ಮೂಲಕ ಕಲಿಸಿಕೊಡುತ್ತಿದ್ದೇವೆ. ಮಕ್ಕಳ ವಯೋಮಾನಕ್ಕನುಗುಣವಾಗಿ ಪಠ್ಯಗಳನ್ನು ರೂಪಿಸಲಾಗುತ್ತಿದೆ. ಪ್ರಾಥಮಿಕ ಹಂತದಲ್ಲಿಯ ಪಠ್ಯಗಳಲ್ಲಿ ವ್ಯಾಕರಣಕ್ಕೆ ನಾವು ಯಾವತ್ತು ಪ್ರಾಧಾನ್ಯತೆ ನೀಡಿಲ್ಲ. ಈ ಹಂತದ ಪಠ್ಯಗಳು ಕಂಟೆಂಟ್ ಓರಿಯಂಟೆಡ್ ಆಗಿರುತ್ತವೆ. ಇಲ್ಲಿ ಮಕ್ಕಳ ವಯೋಮಾನಕ್ಕೆ ತಕ್ಕಂತಹ ಪದಗಳನ್ನು, ತನ್ನ ಪರಿಸರದಲ್ಲಿಯ ಪದಗಳನ್ನು, ಸಂಗತಿಗಳನ್ನು ಕೊಡಲಾಗಿರುತ್ತದೆ. ಮೂಲಭೂತವಾದ ವ್ಯಾಕರಣಾಂಶಗಳು ಕಂಟೆಂಟ್ ಒಳಗಡೆ ಅಡಕವಾಗಿರುತ್ತವೆ. ನಂತರದ ಶಿಕ್ಷಣ ಹಂತಗಳಲ್ಲಿ ವ್ಯಾಕರಣಾಂಶಗಳನ್ನು ಪ್ರಾಯೋಗಿಕವಾಗಿ ಕಲಿಸಿಕೊಡುವ ಪದ್ಧತಿ ಪಠ್ಯಗಳಲ್ಲಿ ಕಂಡುಬರುತ್ತದೆ. ಇಂದು ಭಾಷಾವಿಜ್ಞಾನದ ಹಿನ್ನೆಲೆಯಲ್ಲಿ ವ್ಯಾಕರಣದ ಅಗತ್ಯವಿಲ್ಲ.

**೩. ನಿಮ್ಮ ಸೇವಾವೃತ್ತಿ ಅನುಭವದ ಆಧಾರದ ಮೇಲೆ ಕಲಿಕೆಯ ಪಠ್ಯಪುಸ್ತಕಗಳು ಹೇಗಿರಬೇಕು? ನಿಮ್ಮ ಅಭಿಪ್ರಾಯವೇನು?**

ಮಕ್ಕಳ ಶಿಕ್ಷಣದಲ್ಲಿ ಇತರೆ ವಿಷಯಗಳ ಬೋಧನೆಗಿಂತ ಭಾಷಾ ಬೋಧನೆಯು ಪ್ರಮುಖವಾಗಿದೆ. ಶಿಕ್ಷಣದ ಗುರಿಗಳು ಮತ್ತು ಉದ್ದೇಶಗಳಿಗನುಗುಣವಾಗಿ ಒಂದು ನಿರ್ಧಿಷ್ಟ ತರಗತಿಗೆ ನಿರ್ಧಿಷ್ಟ ವಿಷಯವನ್ನು ಪರಿಣಿತರು, ಭಾಷಾವಿಜ್ಞಾನಿಗಳು ಮುಂತಾದವರು ವ್ಯವಸ್ಥಿತವಾಗಿ, ಕ್ರಮಬದ್ಧವಾಗಿ ಸಂಗ್ರಹಿಸಿ ಸಿದ್ಧಪಡಿಸಿರುವ ಹೊತ್ತಿಗೆಯನ್ನು ನಾವು ಪಠ್ಯಪುಸ್ತಕವೆಂದು ಕರೆಯುತ್ತೇವೆ. ಪಠ್ಯಪುಸ್ತಕಗಳು ಶಿಕ್ಷಣದ ಕೇಂದ್ರಬಿಂದುವಾಗಿರುತ್ತವೆ. ಮಕ್ಕಳಿಗಾಗಿಯೇ ಪಠ್ಯಪುಸ್ತಕಗಳನ್ನು ರೂಪಿಸಲಾಗುತ್ತದೆ. ಮಕ್ಕಳ ಕಲಿಕೆಗೆ ಹಿಂಸೆಯಾಗದೆ, ಆಹ್ಲಾದವನ್ನುಂಟುಮಾಡುವ ನಿಟ್ಟಿನಲ್ಲಿ ಪಠ್ಯಗಳು ಸರಳವಾಗಿ, ಅಗತ್ಯವಿದ್ದಲ್ಲಿ ಚಿತ್ರಗಳೊಂದಿಗೆ ಕೂಡಿರಬೇಕು. ಪಠ್ಯಪುಸ್ತಕ ಉತ್ತಮ

ಗುಣಮಟ್ಟದ್ದಾಗಿದ್ದರೆ ಮಕ್ಕಳ ಕಲಿಕೆ ಉತ್ತಮವಾಗುತ್ತದೆ. ಪಠ್ಯಪುಸ್ತಕವು ಉತ್ತಮ ಗುಣಲಕ್ಷಣಗಳಿಂದ ಕೂಡಿದ್ದರು ಸಹ, ಅದನ್ನು ಶಿಕ್ಷಕರು ಪರಿಣಾಮಕಾರಿಯಾಗಿ ಉಪಯೋಗಿಸದಿದ್ದರೆ ಪ್ರಯೋಜನವಾಗುವುದಿಲ್ಲ.

ಶಿಕ್ಷಣದಲ್ಲಿ ಪಠ್ಯಪುಸ್ತಕವು ಒಂದು ಸಾಧನವೇ ಹೊರತು ಅದೇ ಸರ್ವಸ್ವವಲ್ಲ. ಶಿಕ್ಷಕರು ಸೃಜನಶೀಲತೆಯಿಂದ ಪಠ್ಯಪುಸ್ತಕದಾಚೆ ತಮ್ಮ ದೃಷ್ಟಿಯನ್ನರಿಸಿ ವಿವಿಧ ಭಾಷಾ ಚಟುವಟಿಕೆಗಳ ಮುಖಾಂತರ ಕಲಿಸಲು ಮುಂದಾಗಬೇಕು. ಪಠ್ಯಪುಸ್ತಕವು ಶಿಶುಕೇಂದ್ರಿತವಾಗಿರಬೇಕು. ಮಕ್ಕಳಿಗಾಗಿ ಪಠ್ಯಪುಸ್ತಕವೇ ವಿನಹ ಪಠ್ಯಪುಸ್ತಕಕ್ಕಾಗಿ ಮಕ್ಕಳಲ್ಲವೆಂಬುದನ್ನು ಮನಗಾಣಬೇಕು. ವಿವಿಧ ಚಟುವಟಿಕೆಗಳ ಮೂಲಕ ಕಲಿಯುವುದು ಒಂದು ವೈಜ್ಞಾನಿಕ ಕ್ರಮವಾದ್ದರಿಂದ ಈ ಕ್ರಮದ ಹಿನ್ನೆಲೆಯಲ್ಲಿ ವಿವಿಧ ಭಾಷಾಚಟುವಟಿಕೆಗಳನ್ನು, ಭಾಷಾಭ್ಯಾಸಗಳನ್ನು, ಸಾಂಸ್ಕೃತಿಕ ಚಟುವಟಿಕೆಗಳನ್ನು ಒಳಗೊಂಡಿರಬೇಕು. ಮಕ್ಕಳ ಭಾಷಾಪ್ರಯೋಗಕ್ಕೆ ವ್ಯಾಕರಣಜ್ಞಾನ ಅಗತ್ಯವಾಗಿರಬೇಕು. ಪಠ್ಯಗಳ ಜೊತೆಯಲ್ಲಿ ಕ್ರಿಯಾತ್ಮಕ ವ್ಯಾಕರಣವನ್ನು ಪಠ್ಯಪುಸ್ತಕಗಳು ಒಳಗೊಂಡಿರಬೇಕು. ಮಕ್ಕಳಲ್ಲಿ ಸುಪ್ತವಾಗಿರುವ ಪ್ರತಿಭೆಯನ್ನು ಹೊರಹೊಮ್ಮಿಸಲು ಅವಕಾಶವಿರಬೇಕು. ಅದು ಚಿತ್ರ, ಕಥೆ, ಕವನ ಇತ್ಯಾದಿಯಾಗಿರಬಹುದು. ನಮ್ಮ ಸಂಸ್ಕೃತಿಯನ್ನು ಬಿಂಬಿಸುವ ಅಂಶಗಳನ್ನು ಪಠ್ಯಪುಸ್ತಕಗಳು ಜಾತ್ಯಾತೀತ, ಧರ್ಮಾತೀತ, ದೇಶಪ್ರೇಮ, ರಾಷ್ಟ್ರಪ್ರೇಮದ ಬಗ್ಗೆ ಮಕ್ಕಳಲ್ಲಿ ರಾಷ್ಟ್ರೀಯ ಭಾವೈಕ್ಯತೆ ಬೆಳೆಯಲು ಸಹಾಯಕವಾಗಿರಬೇಕು.

**೪. ವ್ಯಾಕರಣವನ್ನು ಸೂತ್ರದ ಮೂಲಕ ಕಲಿಸುವುದು ಸೂಕ್ತವೋ? ಅಥವಾ ಉದಾಹರಣೆಗಳ ಮೂಲಕ ಕಲಿಸುವುದು ಸೂಕ್ತವೋ? ಇವೆರಡಕ್ಕಿಂತ ಭಿನ್ನವಾದ ವಿಧಾನದಿಂದ ಸುಲಭವಾಗಿ ಕಲಿಸಲು ಸಾಧ್ಯತೆ ಇದೆಯೇ?**

ವ್ಯಾಕರಣವೆಂಬುದು ಹತ್ತಾರು ಭಾಷಿಕ ಅಂಶಗಳ ಒಂದು ಕಂತೆಯಾಗಿದೆ. ವ್ಯಾಕರಣಕಾರ ತಾನು ತನ್ನ ಪರಂಪರೆಯಿಂದ ಬಂದಿರುವ ವ್ಯಾಕರಣಜ್ಞಾನದ ನೆಲೆಯಲ್ಲಿ ತಾನೇ ಆವಿರ್ಭವಿಸಿಕೊಂಡಂತಹ ನಿಯಮಗಳಿಗೆ ಕೆಲವು ಪ್ರಯೋಗಗಳನ್ನು, ನಿದರ್ಶನಗಳನ್ನು ಹುಡುಕುತ್ತಾನೆ. ಆದರೆ ಭಾಷಾವಿಜ್ಞಾನಿ ಭಾಷೆಗೆ ನಿಯಮವನ್ನು ಹಾಕುತ್ತಾನೆ. ಭಾಷಿಕ ರಚನೆಯ ನಿಯಮಗಳನ್ನು ಕುರಿತು ಅಧ್ಯಯನ ಮಾಡುವಂತಹದ್ದು ವ್ಯಾಕರಣ. ಇದನ್ನು ನಿಗಮ ಮತ್ತು ಅನುಗಮನ ಪದ್ಧತಿಯಲ್ಲಿ ಕಲಿಸುತ್ತಾ ಬಂದಿದ್ದೇವೆ. ಈ ಪದ್ಧತಿಗಳನ್ನು ನಮ್ಮ ಕಲಿಕೆಯ ಅನುಕೂಲಕ್ಕೆ ಮಾಡಿಕೊಳ್ಳಲಾಗಿದೆ. ಇಂದು ಕ್ರಿಯಾತ್ಮಕ, ಪ್ರಾಯೋಗಿಕ ಮತ್ತು ಸಾಂದರ್ಭಿಕವಾಗಿ ವ್ಯಾಕರಣಾಂಶಗಳನ್ನು

ಪಠ್ಯಪುಸ್ತಕದಲ್ಲಿ ಅಳವಡಿಸಿರುವುದು ಕಂಡುಬರುತ್ತದೆ. ಪ್ರಾಯೋಗಿಕವಾಗಿ ವ್ಯಾಕರಣಾಂಶಗಳನ್ನು ಕಲಿಸಿಕೊಡುವುದು ಸೂಕ್ತ. ಹೀಗೆ ಕಲಿಸುವುದರಿಂದ ವ್ಯಾಕರಣಾಂಶಗಳು ಕ್ಲಿಷ್ಟವಾಗಲಾರವು ಎಂಬುದು ನನ್ನ ಅಭಿಪ್ರಾಯವಾಗಿದೆ.

**೫. ವ್ಯಾಕರಣ ಕಲಿಸುವಾಗ ಪರಿಭಾಷೆ ಕಲಿಕೆಗೆ ಕಠಿಣವಾಗುತ್ತದೆಯೇ? ಕಠಿಣವಾದರೆ ಯಾವ ಪರಿಭಾಷೆಗಳು ಕಠಿಣವಾಗುತ್ತವೆ?**

ವ್ಯಾಕರಣಶಾಸ್ತ್ರವು ತನ್ನದೇಆದ ಪರಿಭಾಷೆಯನ್ನು ಹೊಂದಿದೆ. ಪರಿಭಾಷೆಗಳನ್ನು ಕಲಿಸುವ ಅಗತ್ಯವಿಲ್ಲ. ಆದರೆ ಶಿಕ್ಷಕರಿಗೆ ಪರಿಭಾಷೆಗಳ ತಿಳುವಳಿಕೆ ಅಗತ್ಯವಾಗಿರಬೇಕು. ಭಾಷೆಯನ್ನು ಪ್ರಯೋಗಿಸುವುದಕ್ಕೆ ವ್ಯಾಕರಣಬೇಕು. ಭಾಷಾಕಲಿಕೆಗೆ ವ್ಯಾಕರಣದ ಅಗತ್ಯವಿಲ್ಲ. ಪರಿಭಾಷೆಗಳನ್ನು ಪ್ರತ್ಯೇಕವಾಗಿ ಕಲಿಸಕೂಡದು. ಶಾಲಾಪಠ್ಯಪುಸ್ತಕಗಳಲ್ಲಿ ವ್ಯಾಕರಣವು ಅಂತರ್ಗತವಾಗಿರುವುದರಿಂದ ಶಿಕ್ಷಕನು ಭಾಷೆಯ ನಿಯಮಗಳನ್ನು ಅರಿತುಕೊಂಡಿದ್ದರೆ, ವಿವಿಧ ಭಾಷಾಚಟುವಟಿಕೆಗಳ ಮೂಲಕ ಭಾಷಾ ಬೋಧನೆ ಸರಳವಾಗುತ್ತದೆ. ವ್ಯಾಕರಣಾಂಶಗಳನ್ನು ಬೋಧನೆಯಲ್ಲಿ ಪ್ರತ್ಯೇಕವಾಗಿ ಕಲಿಸಿಕೊಡುವುದರಿಂದ ಕ್ಲಿಷ್ಟವಾಗುವ ಸಾಧ್ಯತೆ ಇದೆ. ಈ ಕಾರಣದಿಂದ ವ್ಯಾಕರಣಾಂಶಗಳನ್ನು ಪ್ರಾಯೋಗಿಕವಾಗಿ ಬೋಧಿಸುವುದರಿಂದ ಕಠಿಣವಾಗುವುದಿಲ್ಲ. ಶಾಲಾ ವಿವಿಧ ಹಂತಗಳಲ್ಲಿ ವ್ಯಾಕರಣಾಂಶಗಳನ್ನು ನಾವಿಂದು ಪ್ರಾಯೋಗಿಕವಾಗಿ ಕಲಿಸುತ್ತಿದ್ದೇವೆ.

**೬. ಇತ್ತೀಚೆಗೆ ವ್ಯಾಕರಣ ಅಧ್ಯಯನದ ಬಗ್ಗೆ ಆಧುನಿಕ ಚಿಂತನೆಗಳು ನಡೆಯುತ್ತಿವೆ. ಅದರ ಬಗ್ಗೆ ತಮ್ಮ ಅಭಿಪ್ರಾಯವೇನು?**

ಆಧುನಿಕ ಚಿಂತನೆಯನ್ನುವುದು ಅಗತ್ಯವಾಗಿಬೇಕು. ಏಕೆಂದರೆ ಭಾಷೆ ನಿಂತ ನೀರಲ್ಲ ಅದು ಪರಿವರ್ತನಶೀಲವಾದುದು. ಇಂದಿನ ಕಾಲಕ್ಕೆ ತಕ್ಕಂತಹ ಒಂದು ಭಾಷೆಯ ಅಂಶಗಳನ್ನು ಒಳಗೊಂಡಿರುವಂತಹ ಅನುಕ್ರಮಣಿಕೆಯನ್ನು ಬೋಧನಾ ವ್ಯಾಕರಣವೆಂದು ಕರೆಯುತ್ತೇವೆ. ಈ ಬೋಧನೆಯ ವಿವಿಧ ಹಂತಗಳಲ್ಲಿ ಮಕ್ಕಳ ಭಾಷಾ ಕಲಿಕೆಗೆ ಬೇಕಾದಂತ ಪ್ರಾಚೀನ ವ್ಯಾಕರಣಾಂಶಗಳನ್ನು ಕಲಿಸುವುದಕ್ಕಿಂತ ಭಾಷಾವಿಜ್ಞಾನದ ಹಿನ್ನೆಲೆಯಲ್ಲಿ ಕಸಿಗೊಂಡಂತಹ ರೂಪಗಳನ್ನು ಅಳವಡಿಸಲಾಗಿದೆ. ಮಕ್ಕಳಿಗೆ ಕ್ಲಿಷ್ಟವಾಗುವಂತಹ ವ್ಯಾಕರಣಾಂಶಗಳನ್ನು ಪಠ್ಯದಲ್ಲಿ ಅಳವಡಿಸುವಂತಿಲ್ಲ. ಭಾಷಾಕಲಿಕೆ ಸರಳವಾಗಿರಬೇಕೆಂಬ ಉದ್ದೇಶದಿಂದ ಭಾಷಾಕಲಿಕೆಗೆ ಮೊದಲ ಆದ್ಯತೆಯಾಗಿದೆ. ಭಾಷೆಯ ಆಂತರ್ಯದಲ್ಲಿ ವ್ಯಾಕರಣಾಂಶಗಳು ಅಧ್ಯಾಹಾರವಾಗಿರುತ್ತವೆ. ಅವುಗಳನ್ನು

ಶಾಲೆಯ ಹಂತದಿಂದ ಹಂತಕ್ಕೆ ಬಂದಂತೆಲ್ಲ ಹಿಗ್ಗಿಸಿಕೊಂಡು ಹೋಗಲಾಗುತ್ತದೆ. ಹತ್ತನೆಯ ತರಗತಿಗೆ ಬಂದಾಗ ಮಗುವು ತಾನು ಹಿಂದೆ ಕಲಿತಂತಹ ವ್ಯಾಕರಣಾಂಶಗಳನ್ನು ಪುನರಾವರ್ತನೆಯೊಂದಿಗೆ ಕಲಿಯುತ್ತಾನೆ. ಭಾಷಾ ಕಲಿಕೆಯನ್ನು ಸರಳಗೊಳಿಸುವ ನಿಟ್ಟಿನಲ್ಲಿ ಆಧುನಿಕ ಚಿಂತನೆಗಳು ಅಗತ್ಯ.

**೭. ಛಂದಸ್ಸು ಮತ್ತು ಅಲಂಕಾರಗಳು ವ್ಯಾಕರಣದ ವ್ಯಾಪ್ತಿಗೆ ಬರುತ್ತವೆಯೇ? ಅಥವಾ ಇಲ್ಲವೋ?**

ಬರಹ ಸಾಹಿತ್ಯವನ್ನು ನಾವು ಭೌತಿಕವಾಗಿಟ್ಟುಕೊಂಡಾಗ ಪದ್ಯಗುಂಪು ಮತ್ತು ಗದ್ಯಗುಂಪು ಎಂದು ಎರಡು ಗುಂಪುಗಳನ್ನಾಗಿ ಮಾಡಿಕೊಂಡಿದ್ದೇವೆ. ಪದ್ಯದಲ್ಲಿ ಪದಪುಂಜಗಳನ್ನು, ವಾಕ್ಯಗಳಲ್ಲಿ ಭಾವವನ್ನು ಹೇಗೆ ತರಬೇಕು ಆ ಭಾವನೆಗೆ ತಕ್ಕಹಾಗೆ ಅಕ್ಷರಗಳ ಲೆಕ್ಕಚಾರ ಹೇಗಿರಬೇಕು. ಯಾವ ಸಾಲುಗಳು ಹೇಗಿರಬೇಕು ಇತ್ಯಾದಿಗಳನ್ನು ಛಂದಸ್ಸಿನಲ್ಲಿ ರೂಪಿಸುತ್ತೇವೆ. ಛಂದಸ್ಸು ಒಂದು ಹಂತದಲ್ಲಿ ಶೈಲಿಶಾಸ್ತ್ರದಲ್ಲಿ ಪರಂಪರೆಯಿಂದ ಬಂದಿದೆ. ಇದು ವ್ಯಾಕರಣದ ಒಳಗಡೆ ಬರುತ್ತದೆ. ಅಲಂಕಾರಗಳು ಭಾಷಾ ಸೌಂದರ್ಯವನ್ನುಂಟು ಮಾಡುತ್ತವೆ. ಪದ್ಯದಲ್ಲಿ ಬಳಸಿಕೊಂಡಿರುವ ಪದಗಳಲ್ಲಿ, ಪಂದಪುಂಜಗಳಲ್ಲಿ ಅರ್ಥ, ಭಾವವನ್ನು ತುಂಬಿಕೊಂಡು ಲಯಬದ್ಧವಾಗಿ ಹಾಡಲು ಮತ್ತು ಕಿವಿಗೆ ಇಂಪಾಗಿ ಕೇಳಲು ಮುದ ನೀಡುತ್ತವೆ. ಛಂದಸ್ಸು, ಅಲಂಕಾರಗಳು ವ್ಯಾಕರಣದ ವ್ಯಾಪ್ತಿಯೊಳಗಡೆಯೆ ಬರುತ್ತವೆ.

## ೬. ಪ್ರೊ. ಮಹೇಶ್ವರಯ್ಯ

**೧. ಪಠ್ಯಪುಸ್ತಕದ ವ್ಯಾಕರಣಕ್ಕೂ ಪರಾಮರ್ಶನಕ್ಕಾಗಿಯೇ ರಚನೆಯಾಗಿರುವ ವ್ಯಾಕರಣಕ್ಕೂ ಪರಸ್ಪರ ಸಂಬಂಧ ಇದೆಯೇ? ಇದ್ದರೆ ಅದು ಹೇಗೆ?**

ಪಠ್ಯಪುಸ್ತಕದ ವ್ಯಾಕರಣಕ್ಕೂ ಪರಾಮರ್ಶನ ವ್ಯಾಕರಣಕ್ಕೂ ಪರಸ್ಪರ ಸಂಬಂಧ ಇದ್ದೇಇದೆ. ವ್ಯಾಕರಣಕ್ಕೆ ತನ್ನದೇಆದ ಪರಿಭಾಷೆ ಇರುವುದರಿಂದ ಪಠ್ಯಪುಸ್ತಕ ಮತ್ತು ಪರಾಮರ್ಶನ ಗ್ರಂಥಗಳಲ್ಲಿಯ ಪರಿಭಾಷೆಗಳು ಸಾಮ್ಯವಾಗಿರುತ್ತವೆಯೇ ಹೊರತು ಭಿನ್ನವಾಗಿರುವುದಿಲ್ಲ. ಮಕ್ಕಳ ಭಾಷಾ ಕಲಿಕೆಗೆ ಅನುಕೂಲವಾಗುವ ನಿಟ್ಟಿನಲ್ಲಿ ವ್ಯಾಕರಣಾಂಶಗಳನ್ನು ಶಾಲಾ ಹಂತದಿಂದ ಹಂತಕ್ಕೆ ಹೆಚ್ಚುವರಿಯಾಗಿ ಅಳವಡಿಸಲಾಗುತ್ತದೆ. ವ್ಯಾಕರಣವನ್ನು ಭಾಷೆಯ ಜೊತೆಜೊತೆಯಲ್ಲಿ ಕಲಿಸಿಕೊಡಲಾಗುತ್ತದೆ. ಪ್ರತ್ಯೇಕವಾಗಿ ಕಲಿಸುವುದರಿಂದ ಕ್ಲಿಷ್ಟವಾಗಬಹುದೆಂದು ಕ್ರಿಯಾತ್ಮಕವಾಗಿ ವ್ಯಾಕರಣಾಂಶಗಳನ್ನು ಕಲಿಸಿಕೊಡಲಾಗುತ್ತದೆ.

ಪಠ್ಯಪುಸ್ತಕದ ವ್ಯಾಕರಣ ವಿದ್ಯಾರ್ಥಿಗಳಿಗೆ ಮೀಸಲಾದರೆ, ಪರಾಮರ್ಶನ ವ್ಯಾಕರಣಗಳು ಶಿಕ್ಷಕರಿಗೆ, ಸಂಪನ್ಮೂಲ ವ್ಯಕ್ತಿಗಳಿಗೆ ಹೆಚ್ಚಿನ ಅಧ್ಯಯನಕ್ಕೆ ಅನುಕೂಲವಾಗುತ್ತವೆ. ಒಂದು ಕಾಲಕ್ಕೆ ಪರಾಮರ್ಶನ ಗ್ರಂಥಗಳೇ ಪಠ್ಯಗಳಾಗಿದ್ದವು. ನಂತರ ಕಾಲಘಟ್ಟಕ್ಕನುಗುಣವಾಗಿ ಪಠ್ಯದ ಒಂದು ಭಾಗವನ್ನಾಗಿ ಕಲಿಸಲಾಗುತ್ತಿತ್ತು. ತದನಂತರ ಪಠ್ಯದ ಜೊತೆಯಲ್ಲಿಯೇ ವ್ಯಾಕರಣಾಂಶಗಳನ್ನು ಪ್ರಯೋಗಾತ್ಮಕವಾಗಿ ಕಲಿಸಿಕೊಡಲಾಗುತ್ತಿದೆ. ಕಲಿಕೆ ಸರಳವಾಗಲೆಂಬ ಉದ್ದೇಶದಿಂದ ಪಠ್ಯದೊಳಗಡೆಯೇ ವ್ಯಾಕರಣಾಂಶಗಳನ್ನು ಅಳವಡಿಸುತ್ತಿರುವುದು ಇಂದಿನ ಶಾಲಾಪಠ್ಯಗಳಲ್ಲಿ ಕಂಡುಬರುತ್ತದೆ. ಹೀಗಾಗಿ ಪಠ್ಯಪುಸ್ತಕದ ವ್ಯಾಕರಣಕ್ಕೂ ಮತ್ತು ಪರಾಮರ್ಶನ ವ್ಯಾಕರಣಕ್ಕೂ ಪರಸ್ಪರ ಸಂಬಂಧ ಇರುವುದು ಕಂಡುಬರುತ್ತದೆ.

**೨. ಶಾಲಾವ್ಯಾಕರಣ ಕಲಿಕೆ ಬೇಕೆ ಬೇಡವೆ ಎಂಬುದರ ಬಗ್ಗೆ ಚರ್ಚೆ ಇದೆ. ಅದರ ಬಗ್ಗೆ ನಿಮ್ಮ ಅಭಿಪ್ರಾಯವೇನು?**

ವ್ಯಾಕರಣವಿಲ್ಲದ ಭಾಷೆಯನ್ನು ಕಲಿಸಲಾಗುವುದಿಲ್ಲ. ವ್ಯಾಕರಣಕಲಿಕೆ ಅಗತ್ಯವಾಗಿ ಬೇಕು ಆದರೆ ವಿವಿಧ ಶಾಲಾಹಂತಗಳಲ್ಲಿ ಯಾವ ಸ್ವರೂಪದ ವ್ಯಾಕರಣವನ್ನು ಕಲಿಸಬೇಕು ಎಂಬುದನ್ನು ಕುರಿತು ಚಿಂತನೆ ಆಗಬೇಕಾಗಿದೆ. ಯಾರು ಕೂಡ ವ್ಯಾಕರಣ ಬೇಡವೆಂದು ಹೇಳುವುದಿಲ್ಲ. ಮಕ್ಕಳಲ್ಲಿ ವ್ಯಾಕರಣವೆನ್ನುವುದು ಮಾನಸಿಕವಾಗಿ ಸಿದ್ಧವಾಗಿರುತ್ತದೆ. ಅದನ್ನೆ ನಾವು ಅನೌಪಚಾರಿಕ ವ್ಯಾಕರಣವೆಂದು ಕರೆಯುತ್ತೇವೆ. ಈ ತೆರನಾದ ವ್ಯಾಕರಣವು ಶ್ರೀಸಾಮಾನ್ಯನಿಗೂ ಇರುತ್ತದೆ. ಮಗುವಿಗೆ ಮೆದುಳಿನಲ್ಲಿ ತನ್ನದೇಆದಂತಹ ವ್ಯಾಕರಣವು ಸೃಷ್ಟಿಯಾಗಿರುತ್ತದೆ. ನಾವು ಬೋಧನೆ ಮಾಡುವ ವ್ಯಾಕರಣಗಳು ಅದಕ್ಕೆ ಪೂರಕವಾಗಿರಬೇಕು. ಚರಿತ್ರೆಯುದ್ದಕ್ಕೂ ಬಂದಿರುವ ಸಾಂಪ್ರದಾಯಿಕ ವ್ಯಾಕರಣಕ್ಕೆ ಪೂರಕವಾದ ಅಂಶಗಳನ್ನು ಸೇರಿಸಿಕೊಂಡು ಪಠ್ಯಗಳನ್ನು ರೂಪಿಸಬೇಕು. ಹಿಂದೆ ಪ್ರತ್ಯೇಕ ವ್ಯಾಕರಣ ಪಠ್ಯಗಳನ್ನಿಟ್ಟು ಕಲಿಸಲಾಗುತ್ತಿತ್ತು. ಪ್ರಾಯೋಗಿಕವಾಗಿ ವ್ಯಾಕರಣಾಂಶಗಳನ್ನು ಕಲಿಸುವುದು ಸೂಕ್ತ. ಹೀಗೆ ಮಾಡುವುದರಿಂದ ಮಕ್ಕಳಲ್ಲಿ ಭಾಷಾ ಪ್ರಭುತ್ವ ಬೆಳೆಯಲು ಸಾಧ್ಯವಾಗುತ್ತದೆ. ನಾವು ಪರಿಭಾಷೆಯನ್ನು ಅರಿತು ಹೇಳಿಕೊಡುವುದರ ವಿಧಾನದ ಮೇಲೆ ನಾವು ವ್ಯಾಕರಣವನ್ನು ಕಠಿಣವೆನಿಸದೆ ಸುಲಭವಾಗಿ ಕಲಿಸಬಹುದೆಂಬುದು ನನ್ನ ಅಭಿಪ್ರಾಯ.

**೩. ನಿಮ್ಮ ಸೇವಾವೃತ್ತಿ ಅನುಭವದ ಆಧಾರದ ಮೇಲೆ ಕಲಿಕೆಯ ಪಠ್ಯಪುಸ್ತಕಗಳು ಹೇಗಿರಬೇಕು. ನಿಮ್ಮ ಅಭಿಪ್ರಾಯವೇನು?**

ಕಲಿಕೆಯ ಪಠ್ಯಪುಸ್ತಕಗಳು ಸರಳತೆಯಿಂದ ಸಂಕೀರ್ಣತೆಯ ಕಡೆಗೆ ಸಾಗಬೇಕು. ಮಕ್ಕಳ ವರ್ತಮಾನಕಾಲ ಮತ್ತು ಭವಿಷ್ಯತ್ತಿನ ಜೀವನದ ಅವಶ್ಯಕತೆಗೆ ಹೊಂದುವಂತೆ ರೂಪಿಸಬೇಕು. ಪಠ್ಯಪುಸ್ತಕವನ್ನು ಸರಕಾರವು ಅನುಭವಿಕರ ಸಮಿತಿಯನ್ನು ನಿರ್ಮಿಸಿ ಅವರ ಮುಖಾಂತರ ತಯಾರು ಮಾಡುವುದರಿಂದ ಪಠ್ಯಪುಸ್ತಕಗಳು ಚನ್ನಾಗಿಯೆ ಇವೆ. ಮಕ್ಕಳಿಗೆ ಹೆಚ್ಚು ಪಠ್ಯವನ್ನು ಕೊಟ್ಟು ಮಾನಸಿಕವಾದ ಹೊರೆಯನ್ನು ಮಾಡುವುದಕ್ಕಿಂತ ಕಡಿಮೆ ಪಠ್ಯವನ್ನು ಕೊಟ್ಟು ಅದರಲ್ಲೇ ಭಾಷಾ ಕೌಶಲಗಳನ್ನು ಅಭಿವೃದ್ಧಿಪಡಿಸಲು ಬೇಕಾಗುವಂತಹ ವ್ಯಾಕರಣಾಂಶಗಳನ್ನು ಕ್ರಿಯಾತ್ಮಕವಾಗಿ ಕಲಿಸಿಕೊಡಬೇಕು. ವಿವಿಧ ಭಾಷಾಚಟುವಟಿಕೆಗಳನ್ನು ಶಿಕ್ಷಕರು ಮಕ್ಕಳಿಗೆ ಮಾಡಿಸಬೇಕು. ಪಾಠಗಳು ನಮ್ಮ ಸುತ್ತಮುತ್ತಲಿನ ಘಟನೆಗಳನ್ನು ತಿಳಿಸುವಂತವುಗಳಾಗಿದ್ದು, ಸರಳವಾದ ಚಿಕ್ಕಚಿಕ್ಕ ವಾಕ್ಯಗಳಿಂದ ಕೂಡಿರಬೇಕು. ಯಾವ ಕಲಿಕೆಯು ಕಂಠಪಾಠದಿಂದ ಕೂಡಿರದೆ, ಸಹಜವಾಗಿ, ಸ್ವಾಭಾವಿಕವಾಗಿ ಕಲಿಯಲು ಪ್ರೇರೇಪಿಸುವಂತಿರಬೇಕು.

ಪಠ್ಯಗಳು ಮಗುಕೇಂದ್ರಿತವಾಗಿರಬೇಕು. ಪಠ್ಯಗಳಲ್ಲಿ ಜೀವನ ಮೌಲ್ಯಗಳನ್ನು ದೃಷ್ಟಾಂತಗಳೊಂದಿಗೆ ಪರಿಚಯಿಸಬೇಕು. ಅಗತ್ಯವಿದ್ದಲ್ಲಿ ಚಿತ್ರಗಳನ್ನು ಕೊಡುವುದರಿಂದ ಕಲಿಕೆಯು ಪರಿಣಾಮಕಾರಿಯಾಗುತ್ತದೆ. ಮಗುವಿನ ವ್ಯಕ್ತಿತ್ವ ವಿಕಸನಕ್ಕೆ ಪಠ್ಯಗಳು ಪೂರಕವಾಗಿರಬೇಕು. ಪಠ್ಯಗಳನ್ನು ಕುರಿತಂತೆ ಶಿಕ್ಷಕರಿಗೆ ಸೂಚನೆಗಳಿರಬೇಕು. ಈ ಸೂಚನೆಗಳಿಂದ ಬೋಧಕರಿಗೆ ಬೋಧನೆಗೆ ಅನುಕೂಲವಾಗುತ್ತದೆ. ಪಠ್ಯಪುಸ್ತಕಗಳು ಭಾಷಾದೋಷಗಳಿಂದ ಮುಕ್ತವಾಗಿರಬೇಕು. ಪಠ್ಯಪುಸ್ತಕದಲ್ಲಿ ಯಾವುದೇ ಒಂದು ಜಾತಿ, ಪಕ್ಷ, ಧರ್ಮ ಇತ್ಯಾದಿಗಳ ಧೋರಣೆಗಳನ್ನು ಪ್ರತಿಬಿಂಬಿಸದೆ ಜಾತ್ಯಾತೀತ ಮೌಲ್ಯಗಳನ್ನು ಒಳಗೊಂಡಿರಬೇಕು. ನಮ್ಮ ನಾಡಿನ ಸಂಸ್ಕೃತಿಯನ್ನು ಬೆಳಸುವಂತಿರಬೇಕು. ವಿಷಯವಾರು ಪಠ್ಯಪುಸ್ತಕ ರೂಪಿಸುವುದರಿಂದ ವಿದ್ಯಾರ್ಥಿಗಳಿಗೆ ಮತ್ತು ಬೋಧಕರಿಗೆ ಹೆಚ್ಚಿನ ಅಧ್ಯಯನಕ್ಕಾಗಿ ಆಧಾರಗ್ರಂಥಗಳನ್ನು ಸೂಚಿಸಿರಬೇಕು. ಕನ್ನಡ ವಿಷಯಕ್ಕೆ ಬಂದಾಗ ಕನ್ನಡ ಸಾಹಿತ್ಯದ ಎಲ್ಲ ಪ್ರಕಾರಗಳನ್ನು ಒಳಗೊಂಡಿರಬೇಕು. ಗದ್ಯ ಪದ್ಯಗಳು ಕೇವಲ ವಿಷಯಾಧಾರಿತವಾಗಿರದೆ ಭಾಷಾ ಬೆಳವಣಿಗೆಗೆ ಹೆಚ್ಚಿನ ಆದ್ಯತೆ ನೀಡುವುದು ಸೂಕ್ತ. ಮಕ್ಕಳ ವೈಯಕ್ತಿಕ ಪ್ರತಿಭೆಗಳು ಮತ್ತು ಅವಶ್ಯಕತೆಗಳನ್ನು ಈಡೇರಿಸುವಂತಿರಬೇಕು. ಹಾಗಾದಾಗ ಮಕ್ಕಳಲ್ಲಿ ಸೃಜನಶೀಲತೆ, ಕ್ರಿಯಾಶೀಲತೆ ಬೆಳೆಯಲು ಸಾಧ್ಯವಾಗುತ್ತದೆಂಬುದು ನನ್ನ ಅಭಿಪ್ರಾಯವಾಗಿದೆ.

೪. ವ್ಯಾಕರಣವನ್ನು ಸೂತ್ರದ ಮೂಲಕ ಕಲಿಸುವುದು ಸೂಕ್ತವೋ? ಅಥವಾ ಉದಾಹರಣೆಗಳ ಮೂಲಕ ಕಲಿಸುವುದು ಸೂಕ್ತವೋ? ಇವೆರಡಕ್ಕಿಂತ ಭಿನ್ನವಾದ ವಿಧಾನದಿಂದ ಸುಲಭವಾಗಿ ಕಲಿಸಲು ಸಾಧ್ಯತೆ ಇದೆಯೇ?

ಶಾಸ್ತ್ರವಿಷಯವಾದ ವ್ಯಾಕರಣವನ್ನು ಉದಾಹರಣೆಗಳ ಮೂಲಕ ತಿಳಿಸುವುದು ಸೂಕ್ತ. ಏಕೆಂದರೆ ಪ್ರಾಥಮಿಕ, ಮಾಧ್ಯಮಿಕ ಶಾಲಾಹಂತಗಳಲ್ಲಿ ಮಕ್ಕಳು ಚಿಕ್ಕವರಾದ್ದರಿಂದ ಅವರಿಗೆ ಸೂತ್ರ ಅಥವಾ ನಿಯಮಗಳ ಮೂಲಕ ಕಲಿಸಲು ಮುಂದಾದರೆ ಭಾಷಾ ಕಲಿಕೆಗೆ ತೊಡಕಾಗಿ ಕಲಿಕೆಯಲ್ಲಿ ಹಿಂದೆ ಬೀಳುವ ಸಾಧ್ಯತೆ ಹೆಚ್ಚು. ಹೀಗಾಗಿ ಭಾಷೆಯೊಂದಿಗೆ ವ್ಯಾಕರಣ ಬೆಸೆದಿರುವುದರಿಂದ ಅದನ್ನು ಪ್ರೌಢಹಂತಕ್ಕೆ ಬಂದಾಗ ಪರಿಭಾಷೆಗಳಡಿಯಲ್ಲಿ ತಿಳಿಸುವುದರಿಂದ ಅವರಿಗೆ ಕ್ಲಿಷ್ಟವೆನಿಸಲಾರದು. ಇವೆರಡಕ್ಕಿಂತ ಭಿನ್ನವಾದ ವಿಧಾನವನ್ನು ನಾವು ಕಂಡುಕೊಂಡಿಲ್ಲ. ಇದರ ಬಗ್ಗೆ ಅಧ್ಯಯನಗಳು ನಡೆಯಬೇಕು. ನಂತರ ಬೇರೊಂದು ವಿಧಾನವನ್ನು ಕಂಡುಕೊಳ್ಳುವ ಸಾಧ್ಯತೆ ಇದೆ. ಕ್ರಿಯಾತ್ಮಕ ವ್ಯಾಕರಣವನ್ನು ಕಲಿಸುವುದು ಸೂಕ್ತ.

೫. ವ್ಯಾಕರಣ ಕಲಿಸುವಾಗ ಪರಿಭಾಷೆ ಕಲಿಕೆಗೆ ಕಠಿಣವಾಗುತ್ತದೆಯೇ? ಕಠಿಣವಾದರೆ ಯಾವ ಪರಿಭಾಷೆಗಳು ಕಠಿಣವಾಗುತ್ತವೆ?

ವ್ಯಾಕರಣದ ಪರಿಭಾಷೆ ಬೋಧಿಸುವ ಶಿಕ್ಷಕರಿಗೆ ತಿಳಿದಿರಬೇಕು. ಹಿಂದೆ ಸಂಸ್ಕೃತ ಸಂಧಿಗಳಂತಹ ಕೆಲವು ಪರಿಭಾಷೆಗಳು ಕಠಿಣವೆಂಬ ಒಂದು ಭಾವನೆ ಇತ್ತು. ಆ ಕಾರಣದಿಂದ ಇತ್ತೀಚಿನ ಪಠ್ಯಗಳಲ್ಲಿ ಅವುಗಳನ್ನು ಅಳವಡಿಸುತ್ತಿಲ್ಲ. ಸಾಮಾನ್ಯವಾಗಿ ಹೇಳುವುದಾದರೆ ಮಾಧ್ಯಮಿಕ, ಪ್ರೌಢಹಂತದಿಂದ ನಾವು ವ್ಯಾಕರಣಾಂಶಗಳನ್ನು ಕಲಿಸಲು ಮುಂದಾಗುವುದರಿಂದ ಪರಿಭಾಷೆಗಳೇನು ಅಂಥ ಕಷ್ಟವೆನಿಸುವುದಿಲ್ಲ. ಮುಖ್ಯವಾಗಿ ಅವುಗಳನ್ನು ಹೇಳಿಕೊಡುವ ವಿಧಾನದ ಮೇಲೆ ಕಠಿಣ ಅಥವಾ ಸುಲಭವೆಂಬ ತೀರ್ಮಾನಕ್ಕೆ ಬರಲಾಗುತ್ತಿದೆಯೆ ಹೊರತು ಪರಿಭಾಷೆಗಳು ಕ್ಲಿಷ್ಟವೆನಿಸುವುದಿಲ್ಲ. ಶಿಕ್ಷಣದ ಹಂತದಿಂದ ಹಂತಕ್ಕೆ ಪರಿಭಾಷೆಗಳನ್ನು ಪರಿಚಯಿಸಿದಂತೆಲ್ಲ ಅವು ಕ್ಲಿಷ್ಟವಾಗಲಾರವೆಂಬುದು ನನ್ನ ಅಭಿಪ್ರಾಯ.

೬. ಇತ್ತೀಚೆಗೆ ವ್ಯಾಕರಣ ಅಧ್ಯಯನದ ಬಗ್ಗೆ ಆಧುನಿಕ ಚಿಂತನೆಗಳು ನಡೆಯುತ್ತಿವೆ. ಅದರ ಬಗ್ಗೆ ತಮ್ಮ ಅಭಿಪ್ರಾಯವೇನು?

ಆಧುನಿಕ ಚಿಂತನೆ ಒಳ್ಳೆಯದೆ. ಆ ಆಧುನಿಕ ಚಿಂತನೆಯನ್ನು ನಮ್ಮ ಶಾಲಾವ್ಯಾಕರಣದಲ್ಲಿ ಹೇಗೆ ಅಳವಡಿಸಬೇಕು ಅಥವಾ ಯಾವ ಸ್ವರೂಪದ

ವ್ಯಾಕರಣವನ್ನು ತರಬೇಕು ಎಂಬುದರ ಬಗ್ಗೆ ಪ್ರತ್ಯೇಕವಾದ ಚಿಂತನೆಗಳು ನಡೆಯಬೇಕಾಗಿದೆ. ಈಗ ನಾವು ಮಕ್ಕಳಿಗೆ ಶಾಲೆಯಲ್ಲಿ ಪ್ರಯೋಗಾತ್ಮಕ ಅಥವಾ ಕ್ರಿಯಾತ್ಮಕ ವ್ಯಾಕರಣವನ್ನು ಕಲಿಸ್ತಾ ಇದ್ದೇವೆ. ಅಂದರೆ ಪಠ್ಯದ ಒಳಗಡೆನೆ ವ್ಯಾಕರಣಾಂಶಗಳನ್ನು ತಿಳಿಸಿಕೊಡುವ ಪದ್ಧತಿಯು ಇಂದಿನ ಶಾಲಾ ಪಠ್ಯಪುಸ್ತಕಗಳಲ್ಲಿ ಕಂಡುಬರುತ್ತದೆ. ಈ ವಿಧಾನ ಮಕ್ಕಳಿಗೆ ಸುಲಭವಾಗಿ ಅರ್ಥಮಾಡಿಕೊಳ್ಳಲು ಸಾಧ್ಯವಾಗುತ್ತದೆಂಬ ಅಭಿಪ್ರಾಯವು ಕೂಡ ಇದೆ. ಶಿಕ್ಷಣದ ಹಂತಕ್ಕನುಗುಣವಾಗಿ ಎಷ್ಟು ಬೇಕೋ ಅಷ್ಟನ್ನು ಕಲಿಸುವುದರಿಂದ ಮಕ್ಕಳು ಕ್ರಿಯಾಶೀಲತೆಯನ್ನು ಬೆಳೆಸಿಕೊಳ್ಳುತ್ತಾರೆಂದು ಹೇಳಬಹುದು.

**೭. ಛಂದಸ್ಸು ಮತ್ತು ಅಲಂಕಾರಗಳು ವ್ಯಾಕರಣದ ವ್ಯಾಪ್ತಿಗೆ ಬರುತ್ತವೆಯೇ? ಅಥವಾ ಇಲ್ಲವೋ?**

ಛಂದಸ್ಸು ಮತ್ತು ಅಲಂಕಾರಗಳು ಕಾವ್ಯಮೀಮಾಂಸೆಯಲ್ಲಿ ಬರುವಂತಹ ಶಾಸ್ತ್ರವಿಷಯಗಳು. ಇವೆರಡೂ ವ್ಯಾಕರಣಕ್ಕೆ ಸೇರದೆ ಇದ್ದರೂ ವ್ಯಾಕರಣದ ಭಾಗವಾಗಿ ಲಘು-ಗುರು, ಗಣವಿಂಗಡಣೆ, ಅಂಶಗಣ, ಮಾತ್ರಾಗಣ, ಅಕ್ಷರಗಣ, ಶಬ್ದಾರ್ಥಗಳ ವೈಚಿತ್ರ್ಯ ಇತ್ಯಾದಿಗಳನ್ನು ಕಲಿಸಿಕೊಡುವುದರಿಂದ ಶಿಕ್ಷಣದ ಮುಂದಿನ ಹಂತಗಳಲ್ಲಿ ಶಾಸ್ತ್ರವಿಷಯಗಳನ್ನು ಕಲಿಯಲು ಅನುಕೂಲವಾಗುತ್ತದೆಂಬ ಉದ್ದೇಶದಿಂದ ವ್ಯಾಕರಣದ ಜೊತೆಯಲ್ಲಿ ಕಲಿಸಿಕೊಡಲಾಗುತ್ತದೆ. ಛಂದಸ್ಸು, ಅಲಂಕಾರ ಮತ್ತು ವ್ಯಾಕರಣ ಇವು ಮೂರು ಶಾಸ್ತ್ರವಿಷಯಗಳು ತಮ್ಮದೇಆದ ಪರಿಭಾಷೆಯನ್ನು, ಸುದೀರ್ಘವಾದ ಚರಿತ್ರೆಯನ್ನು ಹೊಂದಿವೆ. ಮಕ್ಕಳಿಗೆ ವ್ಯಾಕರಣದ ಪರಿಚಯದೊಂದಿಗೆ ಅವುಗಳ ಸಂಕ್ಷಿಪ್ತವಾದ ಪರಿಚಯವಿದ್ದರೆ ಗದ್ಯದ ಜೊತೆಗೆ ಪದ್ಯದ ಸ್ವರೂಪ ತಿಳಿಯಲು ಅನುಕೂಲವೆಂಬ ಕಾರಣದಿಂದ ವ್ಯಾಕರಣದ ಜೊತೆಯಲ್ಲಿ ಇವುಗಳನ್ನು ಕಲಿಸಲಾಗುತ್ತದೆಂಬುದು ನನ್ನ ಅಭಿಪ್ರಾಯ. ಒಂದನ್ನು ನಾವು ಗಮನಿಸಬೇಕು ಈ ಮೂರು ಶಾಸ್ತ್ರವಿಷಯಗಳಲ್ಲಿ ಬರುವಂತಹ ಎಲ್ಲಾ ಪರಿಭಾಷೆಗಳನ್ನು ನಾವು ಕಲಿಸ್ತಾ ಇಲ್ಲ. ಅಭ್ಯಾಸದ ದೃಷ್ಟಿಯಿಂದ ಯಾವುದು ಅಗತ್ಯವೋ ಅದನ್ನು ಮಾತ್ರ ಭಾಷೆಯ ಜೊತೆಗೆ ಕಲಿಸುತ್ತೇವೆ. ಆದರೆ ನಾವು ಭಾಷೆಯನ್ನು ಬಿಟ್ಟು ಕಲಿಸುತ್ತಿಲ್ಲ. ಏಕೆಂದರೆ ನಮಗೆ ಭಾಷೆ ಮೊದಲು ನಂತರ ಉಳಿದವುಗಳು.

## ೭. ಪ್ರೊ. ಬಾಬು ಭಂಡಾರಿಗಲ್

೧. ಪಠ್ಯಪುಸ್ತಕದ ವ್ಯಾಕರಣಕ್ಕೂ ಪರಾಮರ್ಶನಕ್ಕಾಗಿಯೇ ರಚನೆಯಾಗಿರುವ ವ್ಯಾಕರಣಕ್ಕೂ ಪರಸ್ಪರ ಸಂಬಂಧ ಇದೆಯೇ? ಇದ್ದರೆ ಅದು ಹೇಗೆ?

ಪಠ್ಯಪುಸ್ತಕದ ವ್ಯಾಕರಣಕ್ಕೂ ಪರಾಮರ್ಶನಕ್ಕಾಗಿಯೇ ರಚನೆಯಾಗಿರುವ ವ್ಯಾಕರಣಕ್ಕೂ ಪರಸ್ಪರ ಸಂಬಂಧ ಇದೆ. ಪಠ್ಯಪುಸ್ತಕಗಳನ್ನು ಮಕ್ಕಳ ಭಾಷಾ ಕಲಿಕೆಗೆ ಅನುಕೂಲವಾಗುವಂತೆ ರೂಪಿಸಲಾಗುತ್ತದೆ. ಪಠ್ಯಪುಸ್ತಕ ನಿರ್ಮಾತೃಗಳಿಗೆ, ಭಾಷಾಬೋಧಕರಿಗೆ, ವಿದ್ವಾಂಸರಿಗೆ ಪರಾಮರ್ಶನ ಗ್ರಂಥಗಳು ಅಗತ್ಯವಾಗಿಬೇಕು. ಮಕ್ಕಳ ಭಾಷಾಕಲಿಕೆಯ ಮಟ್ಟವನ್ನಾಧರಿಸಿ ವ್ಯಾಕರಣಾಂಶಗಳನ್ನು ಪರಾಮರ್ಶನ ಗ್ರಂಥಗಳಿಂದ ಆಯ್ದುಕೊಂಡು ಪಠ್ಯಕ್ರಮದಲ್ಲಿ ಅಳವಡಿಸುತ್ತೇವೆ. ಏಕೆಂದರೆ ಭಾಷೆಯನ್ನು ಬಿಟ್ಟು ವ್ಯಾಕರಣವಿಲ್ಲ, ವ್ಯಾಕರಣವನ್ನು ಬಿಟ್ಟು ಭಾಷೆಯಿಲ್ಲ. ಭಾಷೆ ಕಲಿಸುತ್ತೇವೆಂದರೆ ಭಾಷೆಯೊಳಗಡೆ ವ್ಯಾಕರಣ ಅಂತರ್ಗತವಾಗಿರುತ್ತದೆ. ಅಂತರ್ಗತವಾಗಿರುವ ವ್ಯಾಕರಣವನ್ನು ಮಕ್ಕಳ ಭಾಷಾಕಲಿಕೆಗೆ ತೊಡಕಾಗದಂತೆ ಪಠ್ಯಕ್ರಮದಲ್ಲಿ ಅಳವಡಿಸಲಾಗಿರುತ್ತದೆ.

ಪರಾಮರ್ಶನ ಗ್ರಂಥಗಳು ಅಕ್ಷರಮಾಲೆಯಿಂದ ಆರಂಭಗೊಳ್ಳುತ್ತವೆ. ಪಠ್ಯಕ್ರಮದಲ್ಲಿ ಹಿಂದೆ ಅಕ್ಷರಮಾಲೆಯಿಂದಲೇ ಬೋಧನೆ ಮಾಡುತ್ತಿದ್ದರು. ಆದರೆ ೨೦೦೦ ದಶಕದಿಂದ ಇತ್ತೀಚಿನ ಪಠ್ಯಗಳನ್ನು ಗಮನಿಸಿದರೆ ಹೆಚ್ಚಿನ ಸಚಿತ್ರ ಬರಹದ ಮೂಲಕ ಕಲಿಕೆ ಸಾಗುತ್ತಿದೆ. ಮಗುವಿಗೆ ಮನೆಯ ಪರಿಸರದಲ್ಲಿ ಕಾಣುವಂತಹ ವಿಷಯ, ಚಿತ್ರಗಳನ್ನು ನೋಡುವುದರ ಮುಖಾಂತರ ಕನ್ನಡ ಭಾಷೆಯನ್ನು ಕಲಿಸುವ ಪರಿಪಾಠ ಇತ್ತೀಚೆಗೆ ಬಂದಿದೆ. ಚಿತ್ರದಿಂದ ಶಬ್ದ, ಶಬ್ದದಿಂದ ವಾಕ್ಯರಚನೆಮಾಡಿ ಬೋಧನೆ ಮಾಡುವುದು ರೂಢಿಗತವಾಗಿದೆ. ಏಕೆಂದರೆ ಅಕ್ಷರದಿಂದ ಕಲಿಯುವುದಕ್ಕಿಂತ ಚಿತ್ರದಿಂದ ಕಲಿಯುವುದು ಮಕ್ಕಳಿಗೆ ಬಹಳ ಸುಲಭ. ಕಲಿಕೆ ಆಹ್ಲಾದಕರವಾಗಿರಬೇಕು ಅದು ಹಿಂಸೆಯಾಗಬಾರದೆಂಬ ಕಾರಣದಿಂದ ಪಠ್ಯಪುಸ್ತಕಗಳು ಸರಳತೆಯಿಂದ ಸಂಕೀರ್ಣತೆಯ ಕಡೆಗೆ ಸಾಗುತ್ತಿವೆ.

ನಾವು ಓದುವ ಕಾಲಕ್ಕೆ ಆರಂಭದಲ್ಲಿ ವರ್ಣಮಾಲೆ, ಅವುಗಳ ವರ್ಗೀಕರಣ, ಧ್ವನಿ ಉತ್ಪತ್ತಿ ಇತ್ಯಾದಿ ಕಲಿಸಿಕೊಡಲಾಗುತ್ತಿತ್ತು. ಆದರೆ ಇಂದು ಚಿತ್ರದ ಮುಖಾಂತರ ಹಾಡು, ಸಂಭಾಷಣೆ ಕಲಿಸುವುದನ್ನು ನೋಡಿದರೆ ತುಂಬಾ ವ್ಯತ್ಯಾಸವಿರುವುದು ಕಂಡುಬರುತ್ತದೆ. ನಾವು ಏನೇ ಬದಲಾವಣೆಮಾಡಿ, ಪಠ್ಯಕ್ರಮ ಪರಿಷ್ಕರಿಸಿ ಪಠ್ಯಕ್ರಮ

ರೂಪಿಸಿದರೂ ಕೂಡ ಹಿಂದಿನ ಪರಾಮರ್ಶನ ಗ್ರಂಥಗಳಲ್ಲಿಯ ವ್ಯಾಕರಣಾಂಶಗಳನ್ನು ಕಲಿಕೆಗೆ ತೊಡಕಾಗದಂತೆ ಅಳವಡಿಸುತ್ತಲೇ ಬಂದಿದ್ದೇವೆ. ಇಂದಿಗೂ ಅಳವಡಿಸುತ್ತಲಿದ್ದೇವೆ. ಏಕೆಂದರೆ ಭಾಷೆಯಲ್ಲಿ ಒಂದು ಶಿಸ್ತನ್ನು ಕಾಣಬೇಕಾದರೆ ವ್ಯಾಕರಣಜ್ಞಾನ ಅಗತ್ಯವಾಗಿರಬೇಕು. ಅದು ಕಲಿಕೆಗೆ ತೊಡಕಾಗದೆ ಪಠ್ಯಕ್ಕೆ ಪೂರಕವಾಗಿರುವುದರಿಂದ ಪರಾಮರ್ಶನ ಗ್ರಂಥಗಳಿಗೂ ಮತ್ತು ಪಠ್ಯಪುಸ್ತಕದ ವ್ಯಾಕರಣಕ್ಕೂ ಸಂಬಂಧ ಇದ್ದೇಇದೆ. ಅದು ಇರಲೂಬೇಕು. ಇವೆರಡರಲ್ಲಿ ವ್ಯಾಕರಣಾಂಶಗಳು ಬೇರೆಬೇರೆ ಆಗಿರುವುದಿಲ್ಲವೆಂಬುದನ್ನು ಗಮನಿಸಿದಾಗ ಸಂಬಂಧವಿಲ್ಲವೆಂದು ಹೇಳಲಾಗುವುದಿಲ್ಲ.

**೨. ಶಾಲಾವ್ಯಾಕರಣ ಕಲಿಕೆ ಬೇಕೆ ಬೇಡವೆ ಎಂಬುದರ ಬಗ್ಗೆ ಚರ್ಚೆ ಇದೆ. ಅದರ ಬಗ್ಗೆ ನಿಮ್ಮ ಅಭಿಪ್ರಾಯವೇನು?**

ಶ್ರೀಸಾಮಾನ್ಯನಿಗೆ ವ್ಯಾಕರಣದ ಜ್ಞಾನ ಅನಗತ್ಯ. ಶಾಲಾಹಂತಗಳಲ್ಲಿ ಕಲಿಕಾರ್ಥಿಗಳು ಭಾಷೆಯನ್ನು ಕಲಿಯುವಾಗ ವ್ಯಾಕರಣ ಬೇಕೆ ಬೇಕು. ಏಕೆಂದರೆ ಶುದ್ಧವಾದ ಭಾಷಾ ಬಳಕೆ ಮತ್ತು ರಚನೆಗೆ ವ್ಯಾಕರಣಜ್ಞಾನಬೇಕು. ವ್ಯಾಕರಣಜ್ಞಾನವಿಲ್ಲದ ಭಾಷಾ ಕಲಿಕೆ ಅವೈಜ್ಞಾನಿಕ. ವ್ಯಾಕರಣವನ್ನು ನಮ್ಮ ಕನ್ನಡ ಸಾಹಿತ್ಯ ಚರಿತ್ರೆಯುದ್ದಕ್ಕೂ ಕಲಿಸುತ್ತಾ ಬಂದಿದ್ದೇವೆ. ಈಗ ಬೇಡವೆನ್ನುವುದು ಎಷ್ಟು ಸೂಕ್ತ. ಚರಿತ್ರೆಯಲ್ಲಿ ಕದಂಬರು, ಗಂಗರು, ಸಾಮ್ರಾಜ್ಯ ಇತ್ಯಾದಿಯನ್ನು ಕಲಿಸುತ್ತೇವೆ. ಸಮಾಜದಲ್ಲಿ ಕುಟುಂಬ, ಸಮಾಜ ಇತ್ಯಾದಿಯನ್ನು ಕಲಿಸುತ್ತೇವೆ. ಭಾಷಾ ವಿಷಯಕ್ಕೆ ಬಂದಾಗ ಶಾಲಾಹಂತಗಳಲ್ಲಿ ವ್ಯಾಕರಣ ಕಲಿಕೆಯ ಬಗ್ಗೆ ತಕರಾರು ಏಕೆ? ಅದರಲ್ಲೂ ಪ್ರಾಥಮಿಕ ಹಂತದಲ್ಲಿಯೇ ನಾವು ವ್ಯಾಕರಣಾಂಶಗಳನ್ನು ಕಲಿಸ್ತಾ ಇಲ್ಲ. ಮಾಧ್ಯಮಿಕ, ಪ್ರೌಢಶಾಲಾಹಂತಗಳಲ್ಲಿ ಭಾಷೆಯ ಜೊತೆಜೊತೆಯಲ್ಲಿ ವ್ಯಾಕರಣವನ್ನು ಕಲಿಸುವುದರಿಂದ ಮಕ್ಕಳು ಭಾಷಾಸ್ವರೂಪವನ್ನು ಅರಿತು ಅದರ ರಚನೆಯ ನಿಯಮಗಳನ್ನು ತಿಳಿಯುವುದರ ಮುಖಾಂತರ ಭಾಷಾಪ್ರಭುತ್ವವನ್ನು ಪಡೆಯುತ್ತಾರೆ. ಹೀಗೆ ಶಾಲೆಯ ಆರಂಭಿಕ ಹಂತದಿಂದ ಮುಂದಿನ ಹಂತಗಳಿಗೆ ಬಂದಂತೆ ವ್ಯಾಕರಣಾಂಶಗಳನ್ನು ಹೆಚ್ಚುವರಿ ಮಾಡುತ್ತಾ ಹೋಗುತ್ತೇವೆ. ಮಕ್ಕಳು ಪ್ರೌಢಶಾಲಾಹಂತವನ್ನು ಮುಗಿಸುವುದರೊಳಗೆ ಭಾಷೆಯೊಂದಿಗೆ ವ್ಯಾಕರಣಾಂಶಗಳನ್ನು ಪ್ರಯೋಗಾತ್ಮಕವಾಗಿ ಕಲಿಸಿಕೊಡಬೇಕು. ಈ ಹಿನ್ನೆಲೆಯಲ್ಲಿ ಶಾಲಾಪಠ್ಯಪುಸ್ತಕಗಳನ್ನು ರೂಪಿಸಲಾಗುತ್ತಿದೆ. ವ್ಯಾಕರಣದ ಎಲ್ಲಾ ಅಂಶಗಳನ್ನು ಕಲಿಸುವ ಅಗತ್ಯವಿಲ್ಲ. ಉದಾಹರಣೆಗೆ: ಸಂಸ್ಕೃತ ಸಂಧಿಗಳು ನಮಗೆ

ಬೇಕಿಲ್ಲ. ಭಾಷೆಯ ಸರಿ ತಪ್ಪುಗಳನ್ನು ಗುರುತಿಸಲು, ಶುದ್ಧ ಬರವಣಿಗೆಗೆ, ಭಾಷಾ ಪ್ರಭುತ್ವಕ್ಕೆ ವ್ಯಾಕರಣ ಬೇಕು ಎಂಬುದು ನನ್ನ ಅಭಿಪ್ರಾಯ.

**೩. ನಿಮ್ಮ ಸೇವಾವೃತ್ತಿ ಅನುಭವದ ಆಧಾರದ ಮೇಲೆ ಕಲಿಕೆಯ ಪಠ್ಯಪುಸ್ತಕಗಳು ಹೇಗಿರಬೇಕು? ನಿಮ್ಮ ಅಭಿಪ್ರಾಯವೇನು?**

ಪಠ್ಯಪುಸ್ತಕಗಳು ಮಕ್ಕಳ ಕಲಿಕೆಗೆ ಹಿಂಸೆಯಾಗದೆ ಆಹ್ಲಾದಕರವಾಗಿರಬೇಕು. ಕಲಿಕೆಗೆ ಹೊರೆಯಾಗಬಾರದು. ಪಠ್ಯವಸ್ತು ಐತಿಹಾಸಿಕ, ಸಾಂಸ್ಕೃತಿಕ, ಜೀವನ ಮೌಲ್ಯಗಳನ್ನು ಒಳಗೊಂಡಿರಬೇಕು. ಮಗು ತನ್ನ ವ್ಯಕ್ತಿತ್ವವನ್ನು ರೂಪಿಸಿಕೊಳ್ಳುವಂತೆ ವಿಷಯಗಳನ್ನು ದೃಷ್ಟಾಂತಗಳ ಮೂಲಕ ಸರಳ ವಾಕ್ಯಗಳಿಂದ ವಿಶ್ಲೇಷಣೆ ಮಾಡಬೇಕು. ದೇಶಾಭಿಮಾನ, ಭಾಷಾಭಿಮಾನವನ್ನು ಮೂಡಿಸುವಂತೆ ಪಠ್ಯವಸ್ತುಗಳಿರಬೇಕು. ಭಾಷೆಯೊಳಗಡೆ ಆಂತರಿಕವಾಗಿರುವ ವ್ಯಾಕರಣಾಂಶಗಳನ್ನು ಅನೇಕ ಭಾಷಾ ಚಟುವಟಿಕೆಗಳ ಮುಖಾಂತರ ಕಲಿಸಲು ಅನುವುಮಾಡಿಕೊಡಬೇಕು. ಭಾಷಾ ಕೌಶಲಗಳಾದ ಗ್ರಹಿಕೆ, ಮಾತನಾಡುವಿಕೆ, ಓದುವಿಕೆ ಮತ್ತು ಬರೆಯುವಿಕೆಗೆ ಹೆಚ್ಚಿನ ಆದ್ಯತೆ ಕೊಡಬೇಕು. ಪಠ್ಯಪುಸ್ತಕದಲ್ಲಿರುವ ಪದ್ಯ, ಪಾಠಗಳೊಂದಿಗೆ ಮಕ್ಕಳು ಬೆರೆಯುವಂತಿರಬೇಕು. ಪಠ್ಯಗಳು ಮಗುಕೇಂದ್ರಿತವಾಗಿರಬೇಕು. ಸಹಜವಾಗಿ ಭಾಷೆಯನ್ನು ಕಲಿಯಲು ಭಾಷಾ ಆಟಗಳನ್ನು, ಪದಸಂಪತ್ತನ್ನು ಹೊಂದಲು ಪದಬಂಧವನ್ನು, ವಿವಿಧ ಕಲಿಕಾ ಚಟುವಟಿಕೆಗಳನ್ನು ಒಳಗೊಂಡಿರಬೇಕು.

ಭಾಷೆ ಮೊದಲು ನಂತರ ವ್ಯಾಕರಣ. ಹೀಗಾಗಿ ಭಾಷೆಯ ಜೊತೆಯಲ್ಲಿಯೇ ವ್ಯಾಕರಣಾಂಶಗಳನ್ನು ಕ್ರಿಯಾತ್ಮಕವಾಗಿ ಪರಿಚಯಿಸಬೇಕು. ಶಿಕ್ಷಕರಿಗೆ ಪಠ್ಯವನ್ನು ಬೋಧಿಸುವ ಬೋಧನಾ ಪದ್ಧತಿಯನ್ನು ಪಠ್ಯಪುಸ್ತಕದಲ್ಲಿಯೇ ಕೊಡಬೇಕು. ಪಠ್ಯದಲ್ಲಿಯ ಕಠಿಣವಾದ ಪದಗಳ ಅರ್ಥಸಹಿತ ಪದಕೋಶಿಯನ್ನು ಪಠ್ಯದ ಅಂತ್ಯದಲ್ಲಿ ಕೊಡಬೇಕು. ಮಕ್ಕಳ ದೈಹಿಕ ಮತ್ತು ಮಾನಸಿಕ ವಯೋಮಾನಕ್ಕೆ ಅನುಗುಣವಾಗಿ ಪಠ್ಯಪುಸ್ತಕಗಳನ್ನು ರೂಪಿಸಬೇಕು. ಜ್ವಲಂತ ಸಮಸ್ಯೆಗಳನ್ನೊಳಗೊಂಡಂತಹ ವಸ್ತುಗಳನ್ನು ಪಠ್ಯದಲ್ಲಿ ಅಳವಡಿಸುವುದರಿಂದ ಸಮಸ್ಯೆಗೆ ಪರಿಹಾರ ಕಂಡುಕೊಳ್ಳಲು ಎಡೆಮಾಡಿಕೊಟ್ಟಂತಾಗುತ್ತದೆ. ಉದಾಹರಣೆಗೆ : ಜನಸಂಖ್ಯಾ ಸಮಸ್ಯೆ, ಪರಿಸರ ಮಾಲಿನ್ಯ, ಕಾಡು ಸಂರಕ್ಷಣೆ, ಮಾರಣಾಂತಿಕ ರೋಗಗಳು, ಅನಕ್ಷರತೆ, ಮೂಢನಂಬಿಕೆ ಇತ್ಯಾದಿ ಸಾಮಾಜಿಕ ಪಿಡುಗುಗಳನ್ನೊಳಗೊಂಡ ವಿಷಯಗಳು ಪಠ್ಯಗಳಲ್ಲಿರಬೇಕು.

ಒಟ್ಟಿನಲ್ಲಿ ಪಠ್ಯಪುಸ್ತಕಗಳು ಮಗುವಿನ ಸರ್ವಾಂಗೀಣ ವ್ಯಕ್ತಿತ್ವ ವಿಕಾಸಕ್ಕೆ ಪೂರಕವಾಗಿರಬೇಕು ಮತ್ತು ಮಕ್ಕಳನ್ನು ಸೃಜನಶೀಲರನ್ನಾಗಿ ಮಾಡುವಂತಿರಬೇಕು.

**೪. ವ್ಯಾಕರಣವನ್ನು ಸೂತ್ರದ ಮೂಲಕ ಕಲಿಸುವುದು ಸೂಕ್ತವೋ? ಅಥವಾ ಉದಾಹರಣೆಗಳ ಮೂಲಕ ಕಲಿಸುವುದು ಸೂಕ್ತವೋ? ಇವೆರಡಕ್ಕಿಂತ ಭಿನ್ನವಾದ ವಿಧಾನದಿಂದ ಸುಲಭವಾಗಿ ಕಲಿಸಲು ಸಾಧ್ಯತೆ ಇದೆಯೇ?**

ವ್ಯಾಕರಣವನ್ನು ಕಲಿಸಲು ನಿಗಮ ಮತ್ತು ಅನುಗಮನ ಪದ್ಧತಿಗಳಿಗಿಂತ ಶಿಕ್ಷಕನ ಆಸಕ್ತಿ ಮತ್ತು ಅವನ ಬೋಧನಾ ಸಾಮರ್ಥ್ಯ ಪ್ರಮುಖ ಪಾತ್ರ ವಹಿಸುತ್ತವೆ. ವ್ಯಾಕರಣವೆಂಬುದು ಒಂದು ರೀತಿ ಮ್ಯಾಥಮಿಟಿಕ್ಸ್ ಇದ್ದಂತೆ. ಅದನ್ನು ನಾವು ಎಷ್ಟರ ಮಟ್ಟಿಗೆ ಅರ್ಥೈಸಿಕೊಂಡಿರುತ್ತೇವೆಯೋ ಎಂಬುದರ ಮೇಲೆ ನಿರ್ಧರಿತವಾಗುತ್ತದೆ. ಏಕೆಂದರೆ ವ್ಯಾಕರಣದಲ್ಲಿ ಬರುವ ವ್ಯಾಕರಣಾಂಶಗಳು (ಪರಿಭಾಷೆ) ಬದಲಾಗುವುದಿಲ್ಲ. ಉದಾಹರಣೆಗಳು ಬದಲಾಗಬಹುದು. ಹೇಳುವ ವಿಧಾನ ಬದಲಾಗಬಹುದು. ಏಕೆಂದರೆ ಸಾಂಪ್ರದಾಯಿಕವಾಗಿ ಬಂದಂತಹ ವ್ಯಾಕರಣಾಂಶಗಳನ್ನು ಶಾಲೆಯ ವಿವಿಧ ಹಂತಗಳಲ್ಲಿ ನಾವಿಂದು ಕಲಿಸ್ತಾ ಇದ್ದೇವೆ.

ನಿಯಮವನ್ನು ಹೇಳಿ ಉದಾಹರಣೆಗಳನ್ನು ಕೊಡುವುದು ಒಂದು ವಿಧಾನವಾದರೆ, ಉದಾಹರಣೆಗಳನ್ನು ಕೊಟ್ಟು ನಿಯಮವನ್ನು ಪರಿಶೀಲನೆ ಮಾಡುವುದು ಇನ್ನೊಂದು ವಿಧಾನ. ಒಂದರ್ಥದಲ್ಲಿ ಇವೆರಡೂ ಒಂದೆ. ನನ್ನ ಪ್ರಕಾರ ನಿಗಮ ಪದ್ಧತಿಯಲ್ಲಿ ಕಲಿಸುವುದು ಸೂಕ್ತ. ಏಕೆಂದರೆ ಒಂದು ಬಾರಿ ಸರಿಯಾಗಿ ಸೂತ್ರಗಳನ್ನು ಅರ್ಥೈಸಿಕೊಳ್ಳುವುದರ ಮೂಲಕ ತಿಳಿದುಕೊಳ್ಳುವುದರಿಂದ ಅವು ನಮ್ಮ ಉಸಿರಿರುವವರೆಗೂ ನಮ್ಮ ಜೊತೆ ಇರುತ್ತವೆ. ಆರಂಭದಲ್ಲಿ ಕಷ್ಟವಾಗಬಹುದು ನಂತರ ಕಲಿಯುತ್ತ ಹೋದಂತೆ ತಾನೇ ಸರಳವಾಗುತ್ತವೆ. ಏಕೆಂದರೆ ಒಂದು ಬಾರಿ ಕಲಿತರೆ ಅದು ಎಂದಿಗೂ ಮರೆಯುವುದಿಲ್ಲ. ಹಾಗೆಯೇ ವ್ಯಾಕರಣದ ಸೂತ್ರ/ನಿಯಮಗಳನ್ನು ಸರಿಯಾಗಿ ತಿಳಿದರೆ ಅವುಗಳನ್ನು ಮರೆಯಲು ಸಾಧ್ಯವಿಲ್ಲ. ವ್ಯಾಕರಣ ಶಾಸ್ತ್ರವಿಷಯವಾದ್ದರಿಂದ ನಿಗಮ ಮತ್ತು ಅನುಗಮನಕ್ಕಿಂತ ಭಿನ್ನವಾದ ಪದ್ಧತಿಯಿಂದ ಕಲಿಸಲು ಬರುವುದಿಲ್ಲವೆನಿಸುತ್ತದೆ. ಕಲಿಸಲು ಶಿಕ್ಷಕನ ಸಾಮರ್ಥ್ಯ ಮತ್ತು ಅವನ ಕ್ರಿಯಾಶೀಲತೆಯ ಮೇಲೆ ಭಿನ್ನ ಪದ್ಧತಿಯನ್ನು ಕಂಡುಕೊಳ್ಳಲು ಸಾಧ್ಯವಾದೀತು ಎಂಬುದು ನನ್ನ ಅಭಿಪ್ರಾಯವಾಗಿದೆ.

೫. ವ್ಯಾಕರಣ ಕಲಿಸುವಾಗ ಪರಿಭಾಷೆ ಕಲಿಕೆಗೆ ಕಠಿಣವಾಗುತ್ತದೆಯೇ? ಕಠಿಣವಾದರೆ ಯಾವ ಪರಿಭಾಷೆಗಳು ಕಠಿಣವಾಗುತ್ತವೆ?

ವ್ಯಾಕರಣದ ಪರಿಭಾಷೆಗಳು ಮಕ್ಕಳಿಗಿಂತ ಬೋಧಿಸುವ ಶಿಕ್ಷಕರಿಗೆ ಕಷ್ಟವಾಗ್ತಾ ಇವೆ. ಕಳೆದ ಒಂದು ದಶಕದಿಂದ ಶಿಕ್ಷಕರನ್ನು ಆಯ್ಕೆಮಾಡಲು ವಸ್ತುನಿಷ್ಠ ಮಾದರಿಯ (ಸಿಇಟಿ) ಪರೀಕ್ಷೆಯೇ ಮಾನದಂಡವಾಗಿದೆ. ಪರೀಕ್ಷೆಗೆ ಎಷ್ಟು ಬೇಕೋ ಅಷ್ಟನ್ನು ಉರುಹೊಡೆದು ಬರುವುದರಿಂದ ಪರಿಭಾಷೆಗಳು ಕ್ಲಿಷ್ಟವಾಗ್ತಾ ಇವೆ. ಅಷ್ಟೇ ಅಲ್ಲ ಇಂದಿನ ಪ್ರೌಢಶಾಲಾಹಂತದ ಪರೀಕ್ಷೆಗಳಲ್ಲಿ ಹೆಚ್ಚು ವಸ್ತುನಿಷ್ಠ ಪ್ರಶ್ನೆಗಳಿಗೆ ಉತ್ತರಿಸುವ ಪರಿಪಾಟವನ್ನು ಶಿಕ್ಷಣ ಇಲಾಖೆ ತಂದಿರುವುದರಿಂದ ವಿವರಣಾತ್ಮಕ ಉತ್ತರಗಳನ್ನು ಬರೆಯುವಲ್ಲಿ ಮಕ್ಕಳು ಹಿಂದೆ ಬೀಳುತ್ತಾರೆ. ಕೌಶಲಗಳನ್ನು ಸಮರ್ಪಕವಾಗಿ ಬಳಸಲು ಅಸಮರ್ಥರಾಗುತ್ತಾರೆ. ಬರವಣಿಗೆಯಲ್ಲಿ ಅವರು ಅಸಮರ್ಥರೆಂದರೆ ವ್ಯಾಕರಣಾಂಶಗಳ ಕಲಿಕೆಯಲ್ಲಿ ಅವರು ಅಸಮರ್ಥರೆಂಬುದು ನನ್ನ ಅಭಿಪ್ರಾಯ. ಬರವಣಿಗೆಯ ಕೌಶಲ ಪ್ರೌಢಶಾಲಾಹಂತದಲ್ಲೆ ಕುಗ್ಗಿ ಹೋಯಿತೆಂದರೆ ವ್ಯಾಕರಣದ ತಿಳುವಳಿಕೆ ಇಲ್ಲವೆಂದರ್ಥ.

ಶಿಕ್ಷಕರಿಗೆ ಮಕ್ಕಳೊಂದಿಗೆ ಬೆರೆಯುವುದಕ್ಕೆ ಬಿಡಬೇಕು. ಅದು ಬಿಟ್ಟು ನಮ್ಮ ಶಿಕ್ಷಣ ಇಲಾಖೆ ಜನಗಣತಿ, ಮನೆಗಣತಿ ಇತ್ಯಾದಿ ಹತ್ತು ಹಲವಾರು ಕಾರ್ಯಕ್ರಮಗಳ ಭಾರದ ಹೊರೆಯನ್ನು ಶಾಲಾಹಂತದ ಶಿಕ್ಷಕರ ಮೇಲೆ ಹೇರುವುದರಿಂದ ಶಿಕ್ಷಕರು ತಮ್ಮ ಬೋಧನೆಯಲ್ಲಿ ನಿರಾಸಕ್ತಿಯನ್ನು ಹೊಂದುವ ಸಾಧ್ಯತೆ ಇದೆ. ಯಾವುದಕ್ಕೆ ಹೆಚ್ಚು ಮಹತ್ವ ಕೊಡಬೇಕೋ ಅದಕ್ಕೆ ಮಹತ್ವ ಕೊಡುತ್ತಾ ಇಲ್ಲ. ಯಾವುದು ಅನಗತ್ಯವೋ ಅದಕ್ಕೆ ಹೆಚ್ಚಿನ ಮಹತ್ವ ಕೊಡುವ ವ್ಯವಸ್ಥೆ ನಿರ್ಮಾಣವಾಗಿರುವುದರಿಂದ ಬೋಧನೆ ನೀರಸವಾಗುವುದರಲ್ಲಿ ಸಂಶಯವಿಲ್ಲ. ಸೌಲಭ್ಯಗಳಿಲ್ಲದ ಹಿಂದಿನ ಕಾಲದಲ್ಲಿ ಓದುಗರ ಸಂಖ್ಯೆ ಕಡಿಮೆ ಇರಬಹುದು. ಕಲಿಸುವುದರಲ್ಲಾಗಲಿ, ಕಲಿಯುವುದರಲ್ಲಾಗಲಿ ಒಂದು ಶಿಸ್ತು ಅನ್ನುವುದು ಇತ್ತು. ಆ ಶಿಸ್ತು ಗುಣಾತ್ಮಕ ಶಿಕ್ಷಣವಾಗಿತ್ತು. ಆದರೆ ಇಂದು ಸಕಲ ಸೌಲಭ್ಯಗಳಿದ್ದರೂ ಗುಣಾತ್ಮಕ ಶಿಕ್ಷಣದ ಬಗ್ಗೆ ನಾವು ಗೊಣಗಾಡುತ್ತೇವೆ. ಅದರಲ್ಲೂ ಶಾಸ್ತ್ರವಿಷಯವಾದ ವ್ಯಾಕರಣ, ಛಂದಸ್ಸು, ಅಲಂಕಾರ ವಿಷಯಗಳು ಕಠಿಣವಾಗಿ ಉಳಿಯಲು ಸಂಸ್ಕೃತದ ಪರಿಭಾಷೆಗಳು ಎಂದರೆ ತಪ್ಪಾಗಲಾರದು. ಮಕ್ಕಳಿಗೆ ಭಾಷಾಸ್ವರೂಪ ಅರಿಯಲು ವ್ಯಾಕರಣದ ಪ್ರಾಥಮಿಕಜ್ಞಾನ ಬೇಕು. ಆ ಜ್ಞಾನಕ್ಕೆ ಎಷ್ಟು ಬೇಕೋ ಅಷ್ಟನ್ನು ಶಾಲಾಹಂತಗಳಲ್ಲಿ ವ್ಯಾಕರಣ ಕಲಿಸುವುದು ಸೂಕ್ತ. ಹೆಚ್ಚುವರಿಯಾದ ಸಂಸ್ಕೃತ ಪರಿಭಾಷೆಗಳು ಕಠಿಣವಾಗುತ್ತವೆನ್ನುವುದು ನನ್ನ ಅಭಿಪ್ರಾಯ.

**೬. ಇತ್ತೀಚೆಗೆ ವ್ಯಾಕರಣ ಅಧ್ಯಯನದ ಬಗ್ಗೆ ಆಧುನಿಕ ಚಿಂತನೆಗಳು ನಡೆಯುತ್ತಿವೆ. ಅದರ ಬಗ್ಗೆ ತಮ್ಮ ಅಭಿಪ್ರಾಯವೇನು?**

ಆಧುನಿಕ ಚಿಂತನೆ ಮಾಡುವುದು ಸರಿಯಾದ ಕ್ರಮವಾಗಿದೆ. ಆದರೆ ಅದನ್ನು ಪಠ್ಯಪುಸ್ತಕದಲ್ಲಿ ತರಬೇಕು. ಕಲಿಕೆಯಲ್ಲಿ ಅದನ್ನು ತೊಡಗಿಸಿದರೆ ಅದಕ್ಕೆ ಬೆಲೆ ಇರುತ್ತದೆ. ಇಲ್ಲದೆ ಚಿಂತನೆ ಚಿಂತನೆಯಾಗಿಯೇ ಉಳಿಯುತ್ತದೆ. ಆಧುನಿಕ ಚಿಂತನೆ ಮಕ್ಕಳ ಕಲಿಕೆಗೆ ಪೂರಕವಾಗಿರಬೇಕೆ ವಿನಹ ಮಾರಕವಾಗಿರಬಾರದು. ಉದಾಹರಣೆಗೆ : ಡಿ.ಎನ್.ಶಂಕರಭಟ್‌ರವರು ಬಹುದೊಡ್ಡ ವಿದ್ವಾಂಸರು. ಅವರ ಚಿಂತನೆಗಳಲ್ಲಿ ಆಡುನುಡಿಗೂ ಬರಹದ ನುಡಿಗೂ ಭಿನ್ನತೆಯನ್ನು ಕಾಣುವುದಿಲ್ಲ. ಮಹಾಪ್ರಾಣಗಳು ಬೇಕಿಲ್ಲವೆಂಬ ಇತ್ಯಾದಿ ಅವರ ಅಭಿಪ್ರಾಯಗಳನ್ನು ಗಮನಿಸಿದಾಗ, ಅವರ ಬರವಣಿಗೆ ಒಂದು ರೀತಿಯಲ್ಲಿ ಭಿನ್ನತೆ ಕಂಡುಬರುತ್ತದೆ. ಆದರೆ ಭಾಷೆ ಎನ್ನುವುದು ಸಾರ್ವತ್ರಿಕವಾದುದು. ಒಬ್ಬರಿಂದ ಬದಲಾವಣೆ ಮಾಡಲು ಸಾಧ್ಯವಿಲ್ಲ. ಭಾಷೆಯನ್ನುವುದು ನಿಂತ ನೀರಲ್ಲ ಅದು ಪರಿವರ್ತನಶೀಲವಾದುದು. ಆ ಪರಿವರ್ತನೆ ನಮಗೆ ಗೊತ್ತಾಗದಂತೆ ತನ್ನಷ್ಟಕ್ಕೆ ತಾನೇ ಬದಲಾಗುತ್ತದೆ. ಈ ಬದಲಾವಣೆಯನ್ನು ಎಲ್ಲರೂ ಒಪ್ಪಿಕೊಳ್ಳುತ್ತೇವೆ. ಹಾಗೆಯೇ ಭಟ್‌ರ ಬದಲಾವಣೆಯನ್ನು ಸಾರ್ವತ್ರಿಕವಾಗಿ ಒಪ್ಪುವತನಕ ಅದಕ್ಕೆ ಬೆಲೆ ಇರುವುದಿಲ್ಲವೆನಿಸುತ್ತದೆ.

ನಾವು ಸಾವಿರಾರು ವರ್ಷಗಳಿಂದ ಸಾಂಪ್ರದಾಯಿಕವಾದ ವ್ಯಾಕರಣವನ್ನು ಒಪ್ಪಿಕೊಂಡು ಕಲಿಯುತ್ತ ಬಂದಿದ್ದೇವೆ. ಎಲ್ಲರೂ ವ್ಯಾಕರಣ ಪರಿಭಾಷೆಯನ್ನು ಒಪ್ಪಿದ್ದೇವೆ. ಆದರೆ ಡಿ.ಎನ್.ಶಂಕರಭಟ್ ಅವರು ಹೇಳುವ ವ್ಯಾಕರಣಕ್ಕೆ ಕನ್ನಡದ್ದೇಆದ ಪದಗಳಾದ ಹಿಂಬೊತ್ತು, ಈಪೊತ್ತು, ಮುಂಬೊತ್ತು (ಕಾಲಗಳು) ಇತ್ಯಾದಿಗಳು ಅಪರಿಚಿತವಾಗಿವೆ. ಇವುಗಳಿಗೆ ಜನರ ಮುದ್ರೆ ಬೀಳುವತನಕ ಇವುಗಳನ್ನು ಒಪ್ಪಿಕೊಳ್ಳಲಾಗುವುದಿಲ್ಲ. ಅಲ್ಲದೆ ಕನ್ನಡದ್ದೇಆದ ಪದಗಳನ್ನು ಸೃಷ್ಟಿಸಿದ ಮಾತ್ರಕ್ಕೆ ಕಠಿಣವೆಂಬ ಶಾಸ್ತ್ರವಿಷಯವು ಸುಲಭಗೊಳ್ಳುವುದಿಲ್ಲ ಎಂಬುದು ನನ್ನ ಅಭಿಪ್ರಾಯವಾಗಿದೆ.

**೭. ಛಂದಸ್ಸು ಮತ್ತು ಅಲಂಕಾರಗಳು ವ್ಯಾಕರಣದ ವ್ಯಾಪ್ತಿಗೆ ಬರುತ್ತವೆಯೇ ಅಥವಾ ಇಲ್ಲವೋ?**

ಛಂದಸ್ಸು ಮತ್ತು ಅಲಂಕಾರಗಳು ವ್ಯಾಕರಣದ ಒಂದು ಭಾಗ ಎಂದು ಹೇಳಬಹುದು. ಲಘು–ಗುರುಗಳನ್ನು ಗುರುತಿಸುವುದು ಹ್ರಸ್ವಸ್ವರ, ದೀರ್ಘಸ್ವರಗಳ

ಸ್ವರೂಪದಿಂದಲೆ. ಇದನ್ನು ಛಂದೋಪರಿಭಾಷೆಯಲ್ಲಿ ಪ್ರಸ್ತಾರ ಹಾಕುವುದು ಎಂದು ಹೇಳುತ್ತೇವೆ. ಅಕ್ಷರ, ಮಾತ್ರೆ, ಅಂಶಗಳ ಆಧಾರದ ಮೇಲೆ ಗಣವಿಂಗಡಣೆ, ಸಾಲುಗಳು, ಪ್ರಾಸ, ಲಯ ಇತ್ಯಾದಿಗಳು ಪದ್ಯದ ಸ್ವರೂಪವನ್ನರಿಯಲು ಅಗತ್ಯವಾಗಿ ಬೇಕು. ಅದೇ ರೀತಿ ಶಬ್ದ, ಅರ್ಥಗಳ ವೈಚಿತ್ರ್ಯವನ್ನು ಅಲಂಕಾರದಲ್ಲಿ ನೋಡುತ್ತೇವೆ. ಅಂದರೆ ಕಾವ್ಯದ ಸೌಂದರ್ಯವನ್ನರಿಯಲು ಛಂದಸ್ಸು, ಅಲಂಕಾರಗಳು ಬೇಕು. ಭಾಷೆಯ ರಚನೆಯ ನಿಯಮಗಳನ್ನು ಅರಿಯಲು ವ್ಯಾಕರಣ ಬೇಕು. ಗದ್ಯ ಪದ್ಯಗಳು ಭಾಷೆಯೊಳಗಡೆಯಿರುವುದರಿಂದ ಛಂದಸ್ಸು ಕಿವಿಗೆ ಇಂಪಾಗಿ ಮಾಧುರ್ಯವನ್ನು ನೀಡಿದರೆ, ಅಲಂಕಾರವು ಭಾಷಾಸೌಂದರ್ಯವನ್ನು ನೀಡುತ್ತದೆ. ಹೀಗಾಗಿ ಛಂದಸ್ಸು, ಅಲಂಕಾರಗಳು ವ್ಯಾಕರಣದ ಭಾಗವೆ ಹೊರತು ಬೇರೆಯಲ್ಲವೆಂಬುದು ನನ್ನ ಅಭಿಪ್ರಾಯವಾಗಿದೆ.

### ೮. ಶಿಕ್ಷಕರ ಅಭಿಪ್ರಾಯಗಳು

ಪ್ರಾಥಮಿಕ, ಮಾಧ್ಯಮಿಕ ಮತ್ತು ಪ್ರೌಢಶಾಲಾ ಶಿಕ್ಷಕರಿಗೆ ನಡೆಯುವ 'ವಿಷಯ ಸಂಪದೀಕರಣ', 'ಸಮಾಲೋಚನಸಭೆ' ಇತ್ಯಾದಿ ತರಬೇತಿಗಳಲ್ಲಿ ಶಿಕ್ಷಕರನ್ನು ಭೇಟಿಯಾಗಿ ವ್ಯಾಕರಣದ ಬಗ್ಗೆ ಪ್ರಶ್ನಾವಳಿಗಳನ್ನು ಕೇಳಿ ಅವರ ಅಭಿಪ್ರಾಯಗಳನ್ನು ಸಂಗ್ರಹಿಸಲಾಗಿದೆ. (೧೫೦ ಜನ ಶಿಕ್ಷಕರು)

**೧. ನೀವು ಬೋಧನೆ ಮಾಡುತ್ತಿರುವ ಪಠ್ಯಪುಸ್ತಕದ ವ್ಯಾಕರಣಕ್ಕೂ ಪರಾಮರ್ಶನಕ್ಕಾಗಿಯೇ ರಚನೆಯಾಗಿರುವ ವ್ಯಾಕರಣಕ್ಕೂ ಪರಸ್ಪರ ಸಂಬಂಧ ಇದೆಯೇ? ಇದ್ದರೆ ಅದು ಹೇಗೆ?**

೧. ಪಠ್ಯಪುಸ್ತಕದ ವ್ಯಾಕರಣಕ್ಕೂ ಪರಾಮರ್ಶನ ವ್ಯಾಕರಣಕ್ಕೂ ಪರಸ್ಪರ ಸಂಬಂಧವಿದೆ.

೨. ಪರಾಮರ್ಶನ ವ್ಯಾಕರಣಗಳಲ್ಲಿಯ ವ್ಯಾಕರಣಾಂಶಗಳನ್ನು ಮಕ್ಕಳ ಕಲಿಕಾಮಟ್ಟಕ್ಕೆ ಅನುಗುಣವಾಗಿ ಪಠ್ಯಗಳಲ್ಲಿಯ ಭಾಷಾ ಚಟುವಟಿಕೆಗಳಲ್ಲಿ ಪ್ರಾಯೋಗಿಕವಾಗಿ ಅಳವಡಿಸಲಾಗಿದೆ.

೩. ಪರಾಮರ್ಶನ ಗ್ರಂಥಗಳು ಅನುಕ್ರಮಣಿಕೆಯಲ್ಲಿದ್ದರೆ, ಶಾಲಾಪಠ್ಯಗಳಲ್ಲಿ ಅನುಕ್ರಮಣಿಕೆ ಕಂಡುಬರದೆ ಸಾಂದರ್ಭಿಕವಾಗಿ ವ್ಯಾಕರಣಾಂಶಗಳನ್ನು ಅಳವಡಿಸಿರುವುದು ಕಂಡುಬರುತ್ತದೆ.

೪. ಪರಾಮರ್ಶನ ಗ್ರಂಥಗಳ ಮತ್ತು ಶಾಲಾಪಠ್ಯಪುಸ್ತಕಗಳ ವ್ಯಾಕರಣಾಂಶಗಳಲ್ಲಿ ಸಾಮ್ಯತೆ ಇರುವುದು ಕಂಡುಬರುತ್ತದೆ.

೫. ಪರಾಮರ್ಶನ ಗ್ರಂಥಗಳು ಶಿಕ್ಷಕರ ಅಧ್ಯಯನಕ್ಕೆ ಅನುಕೂಲವಾದರೆ ಪಠ್ಯಪುಸ್ತಕದ ವ್ಯಾಕರಣ ವಿದ್ಯಾರ್ಥಿಗಳ ಅಭ್ಯಾಸಕ್ಕೆ ಅನುಕೂಲವಾಗುತ್ತದೆ.

೬. ಪರಾಮರ್ಶನ ಗ್ರಂಥಗಳಲ್ಲಿಯ ಕೆಲವು ವ್ಯಾಕರಣಾಂಶಗಳಿಗೆ ಪೂರಕವಾಗಿ ಶಾಲಾ ಪಠ್ಯಗಳಲ್ಲಿ ವ್ಯಾಕರಣಾಂಶಗಳನ್ನು (ಮಾದರಿಗಳನ್ನು ನೀಡುವುದರೊಂದಿಗೆ) ಬದಲಾಯಿಸಿರುವುದು ಕಂಡುಬರುತ್ತದೆ.

ಉದಾಹರಣೆ

| | |
|---|---|
| ಪುಲ್ಲಿಂಗ, ಸ್ತ್ರೀಲಿಂಗ | – ಪುರುಷರೂಪಗಳು ಸ್ತ್ರೀರೂಪಗಳು. |
| ನಪುಂಸಕಲಿಂಗ | – ಪ್ರಾಣಿಗಳು, ವಸ್ತುಗಳು |
| ತತ್ಸಮ, ತದ್ಭವ | – ಸಂಸ್ಕೃತ ರೂಪಗಳು, ಕನ್ನಡ ರೂಪಗಳು. |
| ದ್ವಿರುಕ್ತಿಗಳು | – ಪುನರಾವರ್ತಿತರೂಪಗಳು, ಪುನರುಚ್ಚರಿತ ರೂಪಗಳು, ಅದೇತೆರನಾದ ಸಾಮ್ಯಪದಗಳು. |

**೨. ಶಾಲಾವ್ಯಾಕರಣ ಕಲಿಕೆ ಬೇಕೆ ಬೇಡವೆ? ಎಂಬುದರ ಬಗ್ಗೆ ಚರ್ಚೆ ಇದೆ. ಇದರ ಬಗ್ಗೆ ನಿಮ್ಮ ಅಭಿಪ್ರಾಯವೇನು?**

೧. ಶಾಲಾಹಂತದಲ್ಲಿ ವ್ಯಾಕರಣ ಕಲಿಕೆ ಬೇಕು. ಅದು ಐದನೇ ತರಗತಿಯಿಂದ ಇದ್ದರೆ ಸೂಕ್ತ. ಏಕೆಂದರೆ ೧ರಿಂದ ೪ನೆ ತರಗತಿವರೆಗೆ ಭಾಷಾ ಕಲಿಕೆಯು ಪ್ರಧಾನವಾಗಿರುತ್ತದೆಯೇ ಹೊರತು ವ್ಯಾಕರಣ ಕಲಿಕೆ ಅಲ್ಲ. ಈ ಹಂತದಲ್ಲಿ ಭಾಷೆಯೊಳಗಡೆ ವ್ಯಾಕರಣಾಂಶಗಳು ಅಂಗರ್ತವಾಗಿರುತ್ತವೆ. ಇವುಗಳನ್ನು ಮಾದರಿ ಅಡಿಯಲ್ಲಿ ಕಲಿಸುವುದರಿಂದ ಭಾಷೆಯೊಂದಿಗೆ ವ್ಯಾಕರಣಾಂಶಗಳು ಬೆಸೆದುಕೊಂಡಿರುತ್ತವೆ.

೨. ವಿದ್ಯಾರ್ಥಿಗಳು ಭಾಷಾ ಕೌಶಲಗಳಾದ ಗ್ರಹಿಕೆ, ಮಾತನಾಡುವಿಕೆ, ಓದು ಮತ್ತು ಬರಹಗಳನ್ನು ಶುದ್ಧವಾಗಿ ಬಳಸಲು ವ್ಯಾಕರಣ ಬೇಕು.

೩. ಮಕ್ಕಳಲ್ಲಿ ಕನ್ನಡ ಭಾಷೆಯ ಜ್ಞಾನವೃದ್ಧಿಯಾಗಲು ವ್ಯಾಕರಣ ಬೇಕು.

೪. ಪ್ರಮಾಣಬದ್ಧವಾದ ಭಾಷೆಯನ್ನು ಕಲಿಯಲು ಮತ್ತು ಸೃಜನಶೀಲತೆಯನ್ನು ಬೆಳೆಸಿಕೊಳ್ಳಲು ವ್ಯಾಕರಣ ಬೇಕು.

೫. ವ್ಯಾಕರಣವಿಲ್ಲದ ಭಾಷಾ ಕಲಿಕೆ ಅವೈಜ್ಞಾನಿಕ. ಭಾಷೆಯ ಜೊತೆ ವ್ಯಾಕರಣಾಂಶಗಳನ್ನು ಪ್ರಾಯೋಗಿಕವಾಗಿ ಬೋಧಿಸುವುದರಿಂದ ಮಕ್ಕಳು ಭಾಷಾ ಬಳಕೆ ಮತ್ತು ರಚನೆಯಲ್ಲಿ ಅಭಿವೃದ್ಧಿಹೊಂದುವರು.

೬. ಭಾಷೆ ಮೊದಲು ನಂತರ ವ್ಯಾಕರಣ ಕಲಿಕೆ. ಆದರೆ ಭಾಷೆಗೆ ಭದ್ರವಾದ ಬುನಾದಿಯೇ ವ್ಯಾಕರಣವಾಗಿದೆ.

೭. ಶಾಲಾಹಂತಗಳಲ್ಲಿ ವ್ಯಾಕರಣ ಕಲಿಕೆ ಅಗತ್ಯವಾಗಿ ಬೇಕು. ಭಾಷೆಯ ಜೀವಾಳವೇ ವ್ಯಾಕರಣವಾಗಿದೆ.

೮. ಭಾಷಾ ಪಕ್ವತೆಗೆ ವ್ಯಾಕರಣ ಬೇಕೇ ಬೇಕು.

೯. ಶಾಲಾಹಂತಗಳಲ್ಲಿ ವ್ಯಾಕರಣ ಕಲಿಕೆ ಬೇಕು. ಆದರೆ ಅದು ಪ್ರತ್ಯೇಕವಾಗಿರಬಾರದು. ಭಾಷಾಭ್ಯಾಸದಲ್ಲಿ, ಭಾಷಾಚಟುವಟಿಕೆಗಳ ಮೂಲಕ ಕ್ರಿಯಾತ್ಮಕವಾಗಿ ಬೋಧಿಸಬೇಕು.

೧೦. ವ್ಯಾಕರಣವು ಶಾಲಾ ವಿವಿಧ ಹಂತಗಳಿಗೆ ಮಕ್ಕಳ ವಯೋಮಾನಕ್ಕೆ ಅನುಗುಣವಾಗಿರಬೇಕು. ಪ್ರಾಥಮಿಕ ಮತ್ತು ಮಾಧ್ಯಮಿಕ ಶಾಲೆಗಳಲ್ಲಿ ಭಾಷಾಕಲಿಕೆಗೆ ವ್ಯಾಕರಣ ಪೂರಕವಾಗಿದ್ದರೆ ಸಾಕು. ಪ್ರೌಢಶಾಲಾ ಹಂತಕ್ಕೆ ವ್ಯಾಕರಣದ ಜೊತೆಗೆ ಛಂದಸ್ಸು ಮತ್ತು ಅಲಂಕಾರಗಳನ್ನು ಕಲಿಸುವುದರಿಂದ ಮಕ್ಕಳಿಗೆ ಅರ್ಥೈಸಿಕೊಳ್ಳಲು ಸಾಧ್ಯವಾಗುತ್ತದೆ.

೩. ನಿಮ್ಮ ಸೇವಾವೃತ್ತಿ ಅನುಭವದ ಆಧಾರದ ಮೇಲೆ ಕಲಿಕೆಯ ಪಠ್ಯಪುಸ್ತಕಗಳು ಹೇಗಿರಬೇಕು? ನಿಮ್ಮ ಅಭಿಪ್ರಾಯವೇನು?

೧. ಶಾಲಾ ಪಠ್ಯಪುಸ್ತಕಗಳು ಆಕರ್ಷಕವಾಗಿರಬೇಕು. ಪ್ರಾಥಮಿಕ ಹಂತದಲ್ಲಿ ಸಚಿತ್ರಗಳೊಂದಿಗೆ ವಿವರಣೆಯಿದ್ದರೆ ಮಕ್ಕಳ ಕಲಿಕೆಗೆ ಸಹಾಯವಾಗುತ್ತವೆ. ಮಾಧ್ಯಮಿಕ ಹಂತದಲ್ಲಿ ಅಗತ್ಯವಿದ್ದಲ್ಲಿ ಮಾತ್ರ ಚಿತ್ರಗಳಿರುವುದು ಸೂಕ್ತ.

೨. ಪಠ್ಯಪುಸ್ತಕಗಳು ಸರಳವಾಗಿ ಕಲಿಯಲು ಮಕ್ಕಳಿಗೆ ಪ್ರೇರಣೆ ನೀಡುವುದರ ಜೊತೆಗೆ ಆಹ್ಲಾದಕರವಾಗಿರಬೇಕು. ಹಿಂಸೆಯಾಗಬಾರದು.

೩. ಕಲಿಕೆಯಲ್ಲಿ ಹಿಂದುಳಿದ ಮಕ್ಕಳಿಗೂ ಅರ್ಥವಾಗುವಂತಿರಬೇಕು.

೪. ಪಠ್ಯಕ್ರಮ ಮಕ್ಕಳ ಕಲಿಕೆಗೆ ಭಾರ, ಹೊರೆಯಾಗಬಾರದು, ಕಡಿಮೆ ಪಠ್ಯದಲ್ಲಿಯೇ ವಿವಿಧ ಚಟುವಟಿಕೆಗಳನ್ನು ಒಳಗೊಂಡಿರಬೇಕು. ಏಕೆಂದರೆ ಹತ್ತು ಸಲ ಓದುವುದು ಒಂದು ಸಲ ಬರೆಯುವುದು ಸಮ. ಮಕ್ಕಳು ಚಟುವಟಿಕೆಗಳನ್ನು ತಾವೇ ಮಾಡುವುದರಿಂದ ಕಲಿಕೆಯು ಸುಲಭವಾಗುತ್ತದೆ.

೫. ಪಠ್ಯಪುಸ್ತಕಗಳು ವ್ಯಾಕರಣಾಂಶಗಳಿಂದ ಕೂಡಿರಬೇಕು.

೬. ಸಂಸ್ಕೃತಿ, ಭಾಷೆಯನ್ನು ಉಳಿಸಿ ಬೆಳೆಸಿಕೊಂಡು ಹೋಗುವ ನಿಟ್ಟಿನಲ್ಲಿ ಪಠ್ಯಪುಸ್ತಕಗಳನ್ನು ರೂಪಿಸಬೇಕು.

೭. ಪಠ್ಯಪುಸ್ತಕಗಳು ಮಕ್ಕಳ ಸರ್ವತೋಮುಖ ಬೆಳವಣಿಗೆಗೆ ಪೂರಕವಾಗಿರಬೇಕು.

೮. ಪಠ್ಯಗಳು ಮಕ್ಕಳಿಗೆ ನೈಜ ಅನುಭವವನ್ನು ನೀಡುವಂತಿರಬೇಕು.

೯. ಮಾನವೀಯ ಮೌಲ್ಯಗಳನ್ನು ಪಠ್ಯಗಳು ಒಳಗೊಂಡಿರಬೇಕು.

೧೦. ಪಠ್ಯಪುಸ್ತಕಗಳು ಜ್ಞಾನಾಭಿವೃದ್ಧಿಯ ಜೊತೆಗೆ ಮನೋರಂಜನೆಯನ್ನು ನೀಡಬೇಕು.

೧೧. ಹಿಂದಿನ ಪಠ್ಯಪುಸ್ತಕಗಳಿಗಿಂತ ಇಂದಿನ ಪಠ್ಯಪುಸ್ತಕಗಳು ಕಲಿಸಲು ಮತ್ತು ಕಲಿಯಲು ಕ್ಲಿಷ್ಟವಾಗದೆ ಸರಳವಾಗಿವೆ. ಅಗತ್ಯವಿದ್ದಲ್ಲಿ ಚಿತ್ರಗಳಿಂದ ಕೂಡಿರಬೇಕು.

೧೨. ಪಠ್ಯಪುಸ್ತಕಗಳು ವೈವಿಧ್ಯತೆಯಿಂದ ಕೂಡಿರಬೇಕು.

೧೩. ಪಾಠಗಳನ್ನು ಬೋಧಿಸಲು ಶಿಕ್ಷಕರಿಗೆ ಅವಶ್ಯಕವಾದ ಸೂಚನೆಗಳಿರಬೇಕು.

೧೪. ಪಾಠಗಳ ವಿಷಯ ಜೋಡಣೆಯಲ್ಲಿ ಸಂದಿಗ್ಧತೆ ಇರಕೂಡದು.

೧೫. ಕನ್ನಡ ಭಾಷಾ ಪಠ್ಯಪುಸ್ತಕವು ಮಕ್ಕಳ ಭಾಷಾ ಸಾಮರ್ಥ್ಯ, ರಾಷ್ಟ್ರಪ್ರೇಮ, ದೇಶಪ್ರೇಮ ಬೆಳೆಸಲು ಅನುವುಮಾಡಿಕೊಡಬೇಕು.

೧೬. ಪಠ್ಯಪುಸ್ತಕಗಳು ಮಗುಕೇಂದ್ರಿತವಾಗಿರಬೇಕು.

೧೭. ಮಕ್ಕಳಲ್ಲಿ ಅಡಗಿರುವ ಸುಪ್ತ ಪ್ರತಿಭೆಗಳನ್ನು ಹೊರಹೊಮ್ಮಿಸಲು ಅವಕಾಶವಿರಬೇಕು.

೧೮. ಪಠ್ಯಗಳು ಒಂದು ಜಾತಿ, ಒಂದು ಧರ್ಮವನ್ನು, ಒಂದು ಜನಾಂಗವನ್ನು ಪ್ರತಿನಿಧಿಸದೆ ಜಾತ್ಯತೀತ, ಧರ್ಮತೀತವಾಗಿರಬೇಕು.

೧೯. ಮಕ್ಕಳಲ್ಲಿ ವೈಜ್ಞಾನಿಕ ಮನೋಭಾವ ಮತ್ತು ವೈಚಾರಿಕತೆಯನ್ನು ಬೆಳೆಸಲು ಪಠ್ಯಪುಸ್ತಕಗಳು ನೆರವಾಗಬೇಕು.

೨೦. ಪಠ್ಯಗಳಲ್ಲಿ ಬಳಸುವ ಭಾಷೆ ಮತ್ತು ವಿಷಯಗಳು ಮಕ್ಕಳ ವಯೋಮಾನಕ್ಕೆ ಅನುಗುಣವಾಗಿರಬೇಕು.

೨೧. ಗದ್ಯಪದ್ಯಗಳಲ್ಲಿ ಬರುವ ಕಠಿಣ ಪದಗಳ ಕೋಶವನ್ನು ಪುಸ್ತಕದ ಕೊನೆಗೆ ಕೊಡಬೇಕು.

೨೨. ಪಠ್ಯಗಳು ದೋಷಮುಕ್ತವಾಗಿರಬೇಕು.

೨೩. ಪಠ್ಯಪುಸ್ತಕ ಉತ್ತಮ ಗುಣಮಟ್ಟದ್ದಾಗಿದ್ದರೆ ಮಕ್ಕಳ ಕಲಿಕೆ ಉತ್ತಮವಾಗುತ್ತದೆ.

ಒಟ್ಟಾರೆ ವಿದ್ವಾಂಸರುಗಳ ಅಭಿಪ್ರಾಯಗಳನ್ನು ಗಮನಿಸಿದಾಗ ತಿಳಿದ ವ್ಯಾಕರಣ ಮತ್ತು ನುಡಿಯುವ ವ್ಯಾಕರಣ ಕಲಿಕೆಯ ನಡುವೆ ವ್ಯತ್ಯಾಸಗಳು ಇರುವುದು ಕಂಡುಬರುತ್ತದೆ. ಅಂದರೆ ಈ ವಿದ್ವಾಂಸರುಗಳ ಅಭಿಪ್ರಾಯಗಳಲ್ಲಿ ಕನ್ನಡಕ್ಕೆ ವ್ಯಾಕರಣ ಬೇಡ ಎಂಬ ಅಭಿಪ್ರಾಯವಿಲ್ಲ. ವ್ಯಾಕರಣ ಕಲಿಕೆಯಲ್ಲಿ ಸುಲಭ ಮಾಡಿಕೊಳ್ಳಬೇಕಾದ ಅಗತ್ಯತೆಯನ್ನು ಮಾತನಾಡುತ್ತಿದ್ದಾರೆ ಎಂದೆನಿಸುತ್ತದೆ. ತಿಳಿದ ವ್ಯಾಕರಣವು ನುಡಿಯುವ ವ್ಯಾಕರಣವನ್ನು ಅರ್ಥ ಮಾಡಿಕೊಳ್ಳುವ ಚಳಕವನ್ನು ಬೆಳೆಸುತ್ತಿಲ್ಲ ಎಂಬುದು ಈ ವಿದ್ವಾಂಸರ ಸ್ಪಷ್ಟವಾದ ಅಭಿಪ್ರಾಯವಾಗಿದೆ.

ಭಾಷಿಕ ರಚನೆಯ ಸ್ವರೂಪವನ್ನು ತಿಳಿಯಲು, ಭಾಷಾ ಪ್ರಭುತ್ವವನ್ನು ಬೆಳೆಸಿಕೊಳ್ಳಲು ಶಾಲಾ ವಿವಿಧ ಹಂತಗಳಲ್ಲಿ ಕಲಿಕಾರ್ಥಿಗಳಿಗೆ ವ್ಯಾಕರಣ ಅಗತ್ಯವಾಗಿ ಬೇಕು. ಶಾಲೆಗಳಲ್ಲಿ ವ್ಯಾಕರಣಶಾಸ್ತ್ರ ವಿಷಯಕ್ಕೆ ಬಂದಾಗ ವ್ಯಾಕರಣದ ಪರಿಭಾಷೆಗಳೆಲ್ಲವನ್ನು ಕಲಿಸುವುದಿಲ್ಲ. ಹೀಗಾಗಿ ಶಾಲಾ ಹಂತಗಳಲ್ಲಿ ವ್ಯಾಕರಣವನ್ನು ಕಲಿಸುತ್ತೇವೆಂದು ಹೇಳುವುದಕ್ಕಿಂತ ವ್ಯಾಕರಣಾಂಶಗಳನ್ನು ಕಲಿಸುತ್ತೇವೆಂದು ಹೇಳುವುದು ಸೂಕ್ತವೆನಿಸುತ್ತದೆ. ಶಾಲಾ ಆರಂಭಿಕ ಹಂತದಲ್ಲಿ ಕನ್ನಡ ಭಾಷಾ ಪಠ್ಯಗಳೊಂದಿಗೆ ವ್ಯಾಕರಣಾಂಶಗಳು ಅಂತರ್ಗತವಾಗಿದ್ದರೂ ಕೂಡ ಪರಿಭಾಷೆಗಳಡಿಯಲ್ಲಿ ವ್ಯಾಕರಣಾಂಶಗಳನ್ನು ನಾವಿಂದು ಕಲಿಸುವುದಿಲ್ಲ. ಏಕೆಂದರೆ ಈ ಆರಂಭಿಕ ಹಂತದಲ್ಲಿ ಭಾಷಾ ಕಲಿಕೆ ಪ್ರಧಾನವಾಗಿರುತ್ತದೆ. ಭಾಷಾ ಕಲಿಕೆಗಾಗಿಯೇ ಪಠ್ಯಗಳನ್ನು ರೂಪಿಸಲಾಗುತ್ತದೆಯೇ ಹೊರತು ವ್ಯಾಕರಣ ಕಲಿಕೆಗಾಗಿ ಅಲ್ಲ. ಹೀಗಾಗಿ ಮೊದಲು ಭಾಷೆ ನಂತರ ವ್ಯಾಕರಣ. ಈ ಹಿನ್ನೆಲೆಯಲ್ಲಿ ಶಾಲಾ ಆರಂಭಿಕ ಹಂತದಲ್ಲಿಯ ಪಠ್ಯಗಳು ಪರಿಭಾಷೆಗಳಿಂದ ಮುಕ್ತವಾಗಿವೆ. ಪಾಠಗಳ ಭಾಷಾಭ್ಯಾಸಗಳಡಿಯಲ್ಲಿ ಮಾದರಿ ನೋಡಿ ಬರೆಯಿರಿ, ಗಮನಿಸಿ ಓದಿ, ಸರಿಯಾದ ರೂಪ ಗುರುತಿಸಿ ಇತ್ಯಾದಿ ರೂಪಗಳ ಮುಖಾಂತರ ಕಲಿಸುವುದರಿಂದ ಭಾಷಾ ಕಲಿಕೆ ಭಾರವಾಗದೆ ಸುಲಭವಾಗುತ್ತದೆ. ಭಾಷೆಯನ್ನು ಸುಲಭವಾಗಿ ತಿಳಿಯಲು ಪ್ರಾಚೀನ ವ್ಯಾಕರಣಾಂಶಗಳಡಿಯಲ್ಲಿ ಕಲಿಸುವುದಕ್ಕಿಂತ ಭಾಷಾವಿಜ್ಞಾನದ ಹಿನ್ನೆಲೆಯಲ್ಲಿ ಕಸಿಗೊಂಡ ರೂಪಗಳನ್ನು ಪಠ್ಯಗಳಲ್ಲಿ ಬಳಕೆ ಮಾಡುವುದರಿಂದ ಭಾಷಾ ಕಲಿಕೆ ಕ್ಲಿಷ್ಟವಾಗುವುದಿಲ್ಲ ಎಂಬ ಅಭಿಪ್ರಾಯವು ಇದೆ. ವ್ಯಾಕರಣಾಂಶಗಳ ಕಲಿಕೆಯಲ್ಲಿ ಸುಲಭೀಕರಣ ಮಾಡಿಕೊಂಡಿರುವುದು ಪಠ್ಯಗಳಿಂದ ತಿಳಿದುಬರುತ್ತದೆ.

ಮಾಧ್ಯಮಿಕ ಹಂತದಲ್ಲಿ ಕಲಿಕಾರ್ಥಿಗಳಿಗೆ ವ್ಯಾಕರಣ ಪರಿಭಾಷೆಗಳನ್ನು ನಿಗಮ ಪದ್ಧತಿಯಲ್ಲಿ ಕಲಿಸುವುದಕ್ಕಿಂತ ಅನುಗಮನ ಪದ್ಧತಿಯಲ್ಲಿ ಕಲಿಸುವುದು ಸೂಕ್ತವೆನಿಸುತ್ತದೆ. ಏಕೆಂದರೆ ನಿಗಮ ಪದ್ಧತಿಯಲ್ಲಿ ಮಕ್ಕಳು ನಿಯಮಗಳನ್ನು ಅಥವಾ ಸೂತ್ರಗಳನ್ನು ಉರುಹೊಡೆಯುವುದರಿಂದ ಕಲಿಕೆಗಾಗಿ ಕಲಿಕೆಯಾಗುತ್ತದೆಯೇ ಹೊರತು ತಿಳುವಳಿಕೆಗಾಗಿ ಕಲಿಕೆಯಾಗಲಾರದು. ಕಂಠಪಾಠ ಮಾಡುವುದರಿಂದ ಭಾಷಾ ಪ್ರಭುತ್ವ ವೃದ್ಧಿಯಾಗಲಾರದು. ವಿವಿಧ ಭಾಷಾ ಚಟುವಟಿಕೆಗಳನ್ನು, ಅಭ್ಯಾಸಗಳನ್ನು ಮಾಡಿಸುವುದರಿಂದ ಭಾಷಾ ಕಲಿಕೆ ಫಲಪ್ರದವಾಗುತ್ತದೆ. ಆಗ ಕಲಿಕಾರ್ಥಿಗಳಲ್ಲಿ ಕ್ರಿಯಾಶೀಲತೆ, ಸೃಜನಶೀಲತೆ ತಾನೇ ಬೆಳೆಯುತ್ತದೆ.

ವ್ಯಾಕರಣವು ತನ್ನದೇಆದ ಪರಿಭಾಷೆಯನ್ನು ಹೊಂದಿದೆ. ಈ ಪರಿಭಾಷೆಯ ತಿಳುವಳಿಕೆ ಬೋಧಿಸುವ ಶಿಕ್ಷಕರಿಗೆ ಅಗತ್ಯವಾಗಿರಬೇಕು. ಪರಿಭಾಷೆ ಬಳಕೆಯ ವಲಯವನ್ನು ಕಲಿಕಾರ್ಥಿಗಳಿಗೆ ಶಿಕ್ಷಕರು ಪರಿಚಯಿಸಬೇಕು. ಆದರೆ ಪರಿಭಾಷೆಗಳನ್ನು ಕಲಿಕಾರ್ಥಿಗಳಿಗೆ ಕಲಿಕೆಯಲ್ಲಿ ಹೇರುವುದರಿಂದ ಭಾಷಾ ಕಲಿಕೆ ಕುಂಠಿತವಾಗುವುದರೊಂದಿಗೆ ವ್ಯಾಕರಣ ಕಲಿಕೆ ಕ್ಲಿಷ್ಟವಾಗುವ ಸಾಧ್ಯತೆ ಇದೆ. ಹೀಗಾಗಿ ಕಲಿಕಾರ್ಥಿಗಳು ತಕ್ಕಮಟ್ಟಿಗೆ ಭಾಷಾ ಪ್ರಭುತ್ವವನ್ನು ಪಡೆದಿರುವ ಹಂತವೆಂದು ಗುರತಿಸಲಾದ ಪ್ರೌಢಶಾಲಾ ಹಂತದಲ್ಲಿ ಪರಿಭಾಷೆಗಳನ್ನು ಕಲಿಸುವುದು ಸೂಕ್ತ. ಈ ಹಂತದಲ್ಲಿ ನಿಗಮ ಅಥವಾ ಅನುಗಮನ ಪದ್ಧತಿಯಲ್ಲಿ ವ್ಯಾಕರಣಾಂಶಗಳನ್ನು ಕಲಿಸುವುದರಿಂದ ಭಾಷೆ ರಚನೆಯ ನಿಯಮಗಳನ್ನು ಅರಿಯಲು ಸಹಾಯವಾಗುತ್ತದೆ. ವ್ಯಾಕರಣಾಂಶಗಳನ್ನು ಪ್ರತ್ಯೇಕವಾಗಿ ಕಲಿಸದೆ ಪಠ್ಯದ ಜೊತೆಜೊತೆಯಲ್ಲಿಯೇ ಕ್ರಿಯಾತ್ಮಕವಾಗಿ ಕಲಿಸಬೇಕು. ಹೀಗೆ ಕಲಿಸುವುದರಿಂದ ವ್ಯಾಕರಣಾಂಶಗಳು ಕಲಿಕಾರ್ಥಿಗಳಿಗೆ ಕಠಿಣವಾಗುವುದಿಲ್ಲ.

ಕಲಿಕಾರ್ಥಿಗಳು ತಾವು ಹಿಂದೆ ಪ್ರಾಥಮಿಕ, ಮಾಧ್ಯಮಿಕ ಹಂತಗಳಲ್ಲಿ ಕಲಿತಂತಹ ವ್ಯಾಕರಣಾಂಶಗಳು ಪ್ರೌಢಶಾಲಾ ಹಂತದಲ್ಲಿಯ ವ್ಯಾಕರಣಾಂಶಗಳೊಂದಿಗೆ ಪುನರಾವರ್ತನೆಯಾಗಬೇಕು. ಹೀಗೆ ಪುನರಾವರ್ತನೆ ಆಗುವುದರಿಂದ ಕಲಿಕಾರ್ಥಿಗಳು ಭಾಷಾ ಪ್ರಭುತ್ವವನ್ನು ಪಡೆಯಲು ವ್ಯಾಕರಣಾಂಶಗಳು ಸಹಾಯಕವಾಗುತ್ತವೆ. ವ್ಯಾಕರಣಾಂಶಗಳ ತಿಳುವಳಿಕೆ ಇದ್ದಾಗ ಮಾತ್ರ ಭಾಷೆಯ ರಾಚನಿಕ ನಿಯಮಗಳನ್ನು ಅರಿಯಲು ಸಾಧ್ಯವಾಗುತ್ತದೆ. ಈ ಹಿನ್ನೆಲೆಯಲ್ಲಿ ಪಠ್ಯಗಳಾಗಲಿ, ವ್ಯಾಕರಣಾಂಶಗಳಾಗಲಿ ಸರಳತೆಯಿಂದ ಸಂಕೀರ್ಣತೆಯ ಕಡೆಗೆ ಸಾಗಿರುವುದು ಕಂಡುಬರುತ್ತದೆ. ಭಾಷಾ ಪ್ರಭುತ್ವ

ಕಲಿಕಾರ್ಥಿಗಳಲ್ಲಿ ಬೆಳೆದಂತೆ ವ್ಯಾಕರಣ ಕಲಿಕೆಯ ಸಂಕೀರ್ಣತೆ ಕಡಿಮೆಯಾಗುತ್ತದೆ. ಇತ್ತೀಚೆಗೆ ಈ ಮೇಲೆ ಹೇಳಿದ ಅಂಶಗಳಿಗೆ ಪೂರಕವಾಗಿಯೇ ಶಾಲಾ ವಿವಿಧ ಹಂತಗಳ ಪಠ್ಯಗಳನ್ನು ರೂಪಿಸಲಾಗುತ್ತಿದೆ.

ಪಠ್ಯಪುಸ್ತಕದ ವ್ಯಾಕರಣಾಂಶಗಳು ಮತ್ತು ಪರಾಮರ್ಶನ ವ್ಯಾಕರಣಾಂಶಗಳು ಏಕಮಾದರಿಯಲ್ಲಿವೆ. ಆದರೆ ಪರಾಮರ್ಶನ ವ್ಯಾಕರಣ ಗ್ರಂಥಗಳಲ್ಲಿಯ ಎಲ್ಲಾ ವ್ಯಾಕರಣಾಂಶಗಳನ್ನು ನಾವಿಂದು ಕಲಿಸುತ್ತಿಲ್ಲ. ಶಾಲಾ ವಿವಿಧ ಹಂತಗಳ ಮಕ್ಕಳ ಬುದ್ಧಿಮಟ್ಟಕ್ಕನುಗುಣವಾಗಿ ವ್ಯಾಕರಣಾಂಶಗಳನ್ನು ಕಲಿಸುತ್ತಿದ್ದೇವೆ. ಪರಾಮರ್ಶನ ವ್ಯಾಕರಣ ಗ್ರಂಥಗಳನ್ನು ಶಿಕ್ಷಕರು ಹೆಚ್ಚಿನ ಅಧ್ಯಯನಕ್ಕೆ ಬಳಸಿಕೊಳ್ಳಬೇಕಾದ ಅಗತ್ಯತೆ ಇಂದು ಕಂಡುಬರುತ್ತದೆ. ಕಲಿಕಾರ್ಥಿಗಳಿಗೆ ವ್ಯಾಕರಣಾಂಶಗಳನ್ನು ಪಠ್ಯದ ಜೊತೆಜೊತೆ ಕಲಿಸಬೇಕಾಗಿದೆ. ಹೀಗೆ ಕಲಿಸುವುದರಿಂದ ಭಾಷಾ ಕಲಿಕೆಯೊಂದಿಗೆ ವ್ಯಾಕರಣಾಂಶಗಳ ಕಲಿಕೆಯು ಸುಲಭವಾಗುತ್ತದೆ. ಈ ನಿಟ್ಟಿನಲ್ಲಿ ಕಲಿಕಾರ್ಥಿಗಳಿಗೆ ವ್ಯಾಕರಣಾಂಶಗಳ ಕಲಿಕೆಯು ಅಗತ್ಯವಾಗಿ ಬೇಕು ಎಂಬುದು ಸ್ಪಷ್ಟವಾಗಿ ತಿಳಿದುಬರುತ್ತದೆ.

## ಅಧ್ಯಾಯ – ಆರು

# ಅಧ್ಯಯನದ ಫಲಿತಗಳು

೧. ಸ್ವಾತಂತ್ರ್ಯಪೂರ್ವದಿಂದ ಸಮಕಾಲೀನ ಪಠ್ಯಗಳನ್ನು ಗಮನಿಸಿದಾಗ ಮಕ್ಕಳ ಭಾಷಾ ಕಲಿಕೆಗೆ ಪಠ್ಯಗಳು ಭಾರವಾಗಬಾರದೆಂಬ ಉದ್ದೇಶದಿಂದ ಸಚಿತ್ರ ಬರಹಗಳೊಂದಿಗೆ ಪಠ್ಯಪುಸ್ತಕಗಳು ರೂಪಿತವಾಗಿರುವುದು ಅಧ್ಯಯನದಿಂದ ತಿಳಿದುಬರುತ್ತದೆ.

೨. ಸ್ವಾತಂತ್ರ್ಯಪೂರ್ವದ ಶಾಲಾ ಕನ್ನಡ ಪಠ್ಯಪುಸ್ತಕಗಳನ್ನು ಗಮನಿಸಿದಾಗ ವ್ಯಾಕರಣವನ್ನು ಪ್ರತ್ಯೇಕ ಪಠ್ಯಪುಸ್ತಕವನ್ನಾಗಿ ಕಲಿಸುತ್ತಿರುವುದು ಅಧ್ಯಯನದಿಂದ ತಿಳಿದುಬರುತ್ತದೆ.

ಉದಾಹರಣೆ

- ಪಂಜೆಯವರ ಕನ್ನಡ ಮೂಲವ್ಯಾಕರಣ (೧೯೦೫)
- ಡಾ.ಎ.ಎನ್. ನರಸಿಂಹಯ್ಯನವರ ಕನ್ನಡ ಪ್ರಥಮವ್ಯಾಕರಣ (೧೯೩೮)
- ತೀ. ನಂ. ಶ್ರೀ ಅವರ ಕನ್ನಡ ಮಧ್ಯಮವ್ಯಾಕರಣ (೧೯೪೦)
  ಮಹಾದೇವ ಪ್ರಭಾಕರ ಪೂಜಾರ ಅವರ
- ಕನ್ನಡ ನುಡಿಗನ್ನಡಿ ಭಾಗ – ೧ (೧೯೪೬)
- ಕನ್ನಡ ನುಡಿಗನ್ನಡಿ ಭಾಗ – ೨ (೧೯೪೬)
- ಕನ್ನಡ ನುಡಿಗನ್ನಡಿ ಮತ್ತು ಛಂದೋಮಂಜರಿ (೧೯೪೬)

೩. ಸಮಗ್ರವಾಗಿ ವ್ಯಾಕರಣವೇ ಆಗಿರುವಂತಹ ವ್ಯಾಕರಣ ಕೃತಿಗಳ ವಿಶ್ಲೇಷಣೆಯನ್ನು ಗಮನಿಸಿದಾಗ ಶಾಲಾ ವಿವಿಧ ಹಂತಗಳಿಗನುಗುಣವಾಗಿ ವಿದ್ಯಾ ಇಲಾಖೆಯು ಪಠ್ಯದಜೊತೆಗೆ ವ್ಯಾಕರಣ ಕೃತಿಗಳನ್ನು ಅಳವಡಿಸಲಾಗಿದೆ. ಇನ್ನು ಕೆಲವು ವ್ಯಾಕರಣ ಕೃತಿಗಳು ಪ್ರಾದೇಶಿಕ ವಲಯಕ್ಕೆ ಮೀಸಲಿರುವುವು. ಅಂದರೆ ಉತ್ತರ ಕರ್ನಾಟಕಕ್ಕೆ, ಮೈಸೂರು ಸಂಸ್ಥಾನದ ಜಿಲ್ಲೆಗಳಿಗೆ, ಹೈದ್ರಾಬಾದ್ ಕರ್ನಾಟಕ ಜಿಲ್ಲೆಗಳಿಗೆ ನಿರ್ಧಿಷ್ಟವಾಗಿ ಕೆಲವು ವ್ಯಾಕರಣ ಕೃತಿಗಳನ್ನು ಪ್ರಾದೇಶಿಕವಾಗಿ ಅಳವಡಿಸಲಾಗಿದೆ. ಇಲ್ಲಿ ಪ್ರಾದೇಶಿಕತೆಗೆ ಅನುಗುಣವಾಗಿ ವ್ಯಾಕರಣ ರಚನೆಯಾಗಿದೆ. ಆದರೆ ಕೃತಿಯಲ್ಲಿ

ಪ್ರಾದೇಶಿಕ ನುಡಿ ಚರ್ಚೆಯಾಗಿಲ್ಲ. ಬರಹದ ಕನ್ನಡದಲ್ಲಿ ಪ್ರಾದೇಶಿಕವಾಗಿ ಚರ್ಚೆಮಾಡಿರುವುದು ಕಂಡುಬರುತ್ತದೆ.

ಉದಾಹರಣೆ

೧. ಉತ್ತರ ಕರ್ನಾಟಕದ ಪ್ರಾಥಮಿಕ, ಮಾಧ್ಯಮಿಕ ಮತ್ತು ಹೈಸ್ಕೂಲುಗಳಿಗೆ ಸ್ವಾತಂತ್ರ್ಯ ಪೂರ್ವ ಮತ್ತು ನಂತರದಲ್ಲಿ ಮ.ಪ್ರ.ಪೂಜಾರರ **ನುಡಿಗನ್ನಡಿ ಭಾಗ-೧, ನುಡಿಗನ್ನಡಿ ಭಾಗ-೨ ಕನ್ನಡ ನುಡಿಗನ್ನಡಿ ಮತ್ತು ಛಂದೋಮಂಜರಿ** ಈ ಮೂರು ಪುಸ್ತಕಗಳು ಸರಕಾರದಿಂದ ಪಠ್ಯಪುಸ್ತಕ (ಟೆಸ್ಟ್‌ಬುಕ್) ವೆಂದು ಮಂಜೂರಾಗಿವೆ.

೨. ಮೈಸೂರು ಸಂಸ್ಥಾನದ ಜಿಲ್ಲೆಗಳಿಗೆ ೧೯೬೪ರಲ್ಲಿ (ನಾಲ್ಕನೆಯ ಮುದ್ರಣ) ಡಿ. ಗಂಗರಾಜು ಅವರ **ಹೊಸಗನ್ನಡ ವ್ಯಾಕರಣ ಮತ್ತು ವಾಕ್ಯರಚನೆ ಭಾಗ-೧.** ಹೈಯರ್ ಸೆಕೆಂಡರಿ ೮ನೆಯ ತರಗತಿಗಾಗಿ (ಮೈಸೂರು, ಮಂಡ್ಯ, ಹಾಸನ, ಚಿಕ್ಕಮಗಳೂರು, ಶಿವಮೊಗ್ಗ, ಮಂಗಳೂರು ಮತ್ತು ಕೊಡಗು) - ಈ ೭ ಜಿಲ್ಲೆಗಳಿಗೂ ಪಠ್ಯಪುಸ್ತಕ ಸಮಿತಿಯಿಂದ ಅಂಗೀಕೃತವಾದುದು.

೩. ಕರ್ನಾಟಕ ಸರಕಾರದ ವಿದ್ಯಾಖಾತೆಯವರು ಹೈದ್ರಾಬಾದ್ ಕರ್ನಾಟಕ ವಿಭಾಗಕ್ಕೆ ೧೯೭೫ರಲ್ಲಿ ಬಿ.ಎಂ.ಸಿದ್ಧವೀರಯ್ಯನವರು ರಚಿಸಿದ, (ನಾಲ್ಕನೆ ಮುದ್ರಣಕಂಡ) **ಕನ್ನಡ ಕೈಗನ್ನಡಿ (೨ನೆಯ ಭಾಗ)** ಕನ್ನಡ ೮, ೯ ಮತ್ತು ೧೦ನೆಯ ವರ್ಗಗಳಿಗಾಗಿ ಮಂಜೂರಾಗಿದೆ.

೪. ಪ್ರಾಥಮಿಕ ಮತ್ತು ಮಾಧ್ಯಮಿಕ ಹಂತಕ್ಕೆ ಸರಕಾರದಿಂದ ಮಂಜೂರಾದ ಪರಾಮರ್ಶನ ವ್ಯಾಕರಣ ಗ್ರಂಥಗಳಲ್ಲಿ ಕೆಲವು ಗ್ರಂಥಗಳು ಚಿತ್ರಗಳೊಂದಿಗೆ ವ್ಯಾಕರಣಾಂಶಗಳನ್ನು ವಿವರಿಸಿರುವುದು ಅಧ್ಯಯನದಿಂದ ತಿಳಿದುಬರುತ್ತದೆ.

ಉದಾಹರಣೆ

- ಪಂಡಿತ ಎಸ್.ಚಿಕ್ಕಣ್ಣ ರಚಿಸಿದ ಸಿರಿಗನ್ನಡ ಪ್ರಥಮವ್ಯಾಕರಣ (೧೯೫೫)
- ,, ,, ಸಿರಿಗನ್ನಡ ಮಧ್ಯಮವ್ಯಾಕರಣ (೧೯೫೫)

೫. ಸ್ವಾತಂತ್ರ್ಯ ಪೂರ್ವದಿಂದ ಹಿಡಿದು ಸಮಕಾಲೀನ ಪಠ್ಯಗಳನ್ನು ಗಮನಿಸಿದಾಗ ಆರಂಭದ ಪಠ್ಯಗಳಲ್ಲಿ ನಿದರ್ಶನಗಳ ಮೂಲಕ ಮಾತುಗಾರಿಕೆಯನ್ನು ಸರಳವಾದ ಪದಗಳ ಮೂಲಕ ವಿಶ್ಲೇಷಣೆ ಮಾಡುವಾಗ ಅನ್ಯಭಾಷಾ ಪದಗಳ ಬೆರಕೆ ಕಂಡುಬರುವುದಿಲ್ಲ. ಆದರೆ ಸಮಕಾಲೀನ ಸಂದರ್ಭದ ಶಾಲಾ ವಿವಿಧ ಹಂತಗಳ ಪಠ್ಯಪುಸ್ತಕಗಳಲ್ಲಿ ಅನ್ಯಭಾಷಾ ಪದಗಳನ್ನು ಹೆಚ್ಚಾಗಿ ಬಳಕೆ ಮಾಡಿರುವುದು ಅಧ್ಯಯನದಿಂದ ತಿಳಿದುಬರುತ್ತದೆ.

ಉದಾಹರಣೆ

**ಸಂಸ್ಕೃತ ಪದಗಳು :** ರಾಜ, ಯಶ, ವರ್ಣ, ಕುಮಾರ, ಪೆಣ್ಣು, ಪೆರ್ಮೆ, ಆಕಾಶ, ಮಾಲಾ, ವರ್ಷ, ವೈಶಾಖ, ವೇಷ, ಶುಂಠಿ, ಆಶೆ.

**ಇಂಗ್ಲಿಷ್ ಪದಗಳು :** ಕಾರು, ರೈಲು, ಗೇಟು, ನರ್ಸರಿ, ಸರ್ಟಿಫಿಕೇಟ್, ಸರ್ಜರಿ, ಪ್ರೈಮರಿ ಸ್ಕೂಲು, ಕ್ಯಾಮರ, ಷಾರ್ಟ್‌ಸರ್ಕ್ಯೂಟ್, ಷಾಪ್ ಇತ್ಯಾದಿ. ಚಾಕರಿ, ಜಮೀನ್ದಾರ, ಗಿರಾಕಿ, ಕುರ್ಚಿ, ರಸೀದಿ, ಖಾನಾವಳಿ, ಕಿರಾಣಿ, ಪಗಾರ, ತಂಬಾಕು, ವರಾಂಡ, ಚಾವಿ, ಅಲಮಾರು, ಅರ್ಜಿ, ಬಂದೂಕು, ಕಾರಕೂನ, ದವಾಖಾನೆ, ಕಾಗದ, ನಕಲಿ, ದರ್ಬಾರು, ದೇಶಾವರಿ, ದರ್ಗಾ ಮುಂತಾದ ಉರ್ದು, ಮರಾಠಿ, ಅರಬ್ಬಿ, ಪೋರ್ಚುಗೀಸ್, ಗ್ರೀಕ್ ಅನ್ಯಭಾಷಾ (ಅನ್ಯದೇಶಿ) ಪದಗಳು ಹೆಚ್ಚಾಗಿ ಬಳಕೆಯಾಗಿರುವುದು ಕಂಡುಬರುತ್ತದೆ.

೬. ಸ್ವಾತಂತ್ರ್ಯಪೂರ್ವ, ಸ್ವಾತಂತ್ರ್ಯ ನಂತರ ಮತ್ತು ಕರ್ನಾಟಕ ಸರಕಾರದ ಶಾಲಾ ಶಿಕ್ಷಣ ನೀತಿಯನ್ವಯ ಶಾಲಾ ಹಂತಗಳಿಗೆ ಅನುಗುಣವಾಗಿ ಶಾಲಾವ್ಯಾಕರಣ ಪರಿಚಯಿಸುವುದಕ್ಕೆ ರಚನೆಯಾದ ಪಠ್ಯಪುಸ್ತಕಗಳು, ಅವುಗಳಲ್ಲಿ ಬಳಕೆಯಾಗಿರುವ ಶಾಲಾವ್ಯಾಕರಣ ಒಂದೇ ರೀತಿಯಾಗಿರದೆ ಆಯಾ ಕಾಲಘಟ್ಟಕ್ಕೆ ತಕ್ಕಂತೆ ಅಗತ್ಯಕ್ಕನುಗುಣವಾಗಿ ಭಾಷಾ ಬಳಕೆಯಲ್ಲಿ ಬದಲಾವಣೆ ಆಗಿರುವುದು ಅಧ್ಯಯನದಿಂದ ತಿಳಿದುಬರುತ್ತದೆ.

೭. ಸ್ವಾತಂತ್ರ್ಯಪೂರ್ವ ಮತ್ತು ಸ್ವಾತಂತ್ರ್ಯ ನಂತರದ ಪಠ್ಯಪುಸ್ತಕಗಳಲ್ಲಿ ಶಿಷ್ಟರೂಪಗಳನ್ನು ಬಳಕೆ ಮಾಡಿದರೆ, ಸಮಕಾಲೀನ ಸಂದರ್ಭದ ಪಠ್ಯಪುಸ್ತಕಗಳಲ್ಲಿ ಧ್ವನಿವ್ಯತ್ಯಾಸ, ಅರ್ಥವ್ಯತ್ಯಾಸ, ಸರಿರೂಪಗಳು, ಅನ್ಯಭಾಷಾ ಪದಗಳು ಮುಂತಾದ ಆಧುನಿಕ ಭಾಷಾವಿಜ್ಞಾನದಿಂದ ಕಸಿಗೊಂಡ ರೂಪಗಳನ್ನು ಬಳಕೆ ಮಾಡಿರುವುದು

ಕಂಡುಬರುತ್ತದೆ. ಈ ಅಂಶಗಳನ್ನು ಗಮನಿಸಿದಾಗ ಭಾಷೆಯನ್ನು ಭಾಷಾವಿಜ್ಞಾನದ, ಧ್ವನಿಸಿದ್ಧಾಂತದ ಮೂಲಕ ಕಲಿಕೆಗೆ ಅವಕಾಶ ಮಾಡಿಕೊಟ್ಟಿರುವುದು ಅಧ್ಯಯನದಿಂದ ತಿಳಿದುಬರುತ್ತದೆ.

ಉದಾಹರಣೆ

೧. ಧ್ವನಿ ವ್ಯತ್ಯಾಸ ಗುರುತಿಸಿ ಹೇಳಿ

| | | | | | |
|---|---|---|---|---|---|
| ಅರಡಿದ | – | ಹರಡಿದ | ಖಳೆದು | – | ಕಳೆದು |
| ಭಂಟರು | – | ಬಂಟರು | ಭಾನಿನ | – | ಬಾನಿನ |
| ಅದ್ದಿನ | – | ಹದ್ದಿನ | ಹಿರುಳು | – | ಇರುಳು |

೨. ಇವುಗಳನ್ನು ಓದಿ ಅರ್ಥ ಮತ್ತು ವ್ಯತ್ಯಾಸ ತಿಳಿಯಿರಿ

೧. ರಾಜ ಹೂಗಳನ್ನು ನೋಡಿದನು
೨. ರಾಣಿ ಹೂಗಳನ್ನು ನೋಡಿದಳು
೩. ಅವನು ಚಂಡನ್ನು ಎಸೆದನು

೩. ಈ ಪದಗಳನ್ನು ಸರಿಯಾದ ರೂಪದಲ್ಲಿ ಬರೆಯಿರಿ

| | | | |
|---|---|---|---|
| ಅವರಸ | ದಡಕ್ಕನೆ | ಬಯ | ನಿಮಿಸ |
| ______ | ______ | ______ | ______ |
| ಸಮಾಧನ | ಥಡವಾಗಿ | ಹಪಗಾತ | ಅಸಿರು |
| ______ | ______ | ______ | ______ |

೪. ಅನ್ಯಭಾಷಾ ಪದಗಳು (ಸ್ವೀಕೃತ ಪದರೂಪ)

ಟಿಂಚರ್, ಆಸ್ಪತ್ರೆ, ಮೇಡಂ, ಪ್ರಥಮ ಚಿಕಿತ್ಸೆ, ಬ್ಲೇಡು, ಡಾಕ್ಟ್ರು, ಡಾಲ್, ನೈಂಟಿಂಗೇಲ್, ಫೆಸೆಂಟ್, ಲಾರ್ಕ್, ಸಿಕ್ಸರ್, ಕಾಲೇಜ್ ಇತ್ಯಾದಿ.

೫. ಆಧುನಿಕ ಭಾಷಾವಿಜ್ಞಾನದಿಂದ ಕಸಿಗೊಂಡ ರೂಪಗಳು

| | | |
|---|---|---|
| ಪುಲ್ಲಿಂಗ, ಸ್ತ್ರೀಲಿಂಗ | – | ಪುರುಷರೂಪಗಳು, ಸ್ತ್ರೀರೂಪಗಳು |
| ನಪುಂಸಕಲಿಂಗ | – | ವಸ್ತುಗಳು, ಪ್ರಾಣಿಗಳು |

| | | |
|---|---|---|
| ದ್ವಿರುಕ್ತಿಗಳು | – | ಪುನರಾವರ್ತಿತ ರೂಪಗಳು, ಪುನರುಚ್ಚರಿತ ರೂಪಗಳು |
| ಶಿಷ್ಟರೂಪಗಳು | – | ರಚನಾರೂಪ, ಸರಿಯಾದರೂಪ, ಗ್ರಾಂಥಿಕರೂಪ |
| ತತ್ಸಮ–ತದ್ಭವ | – | ಸಂಸ್ಕೃತರೂಪ, ಕನ್ನಡರೂಪ |
| ಜೋಡುನುಡಿ | – | ಅದೇ ತೆರನಾದ ಪದಗಳು, ಸಾಮ್ಯಪದಗಳು. |

೮. ಸ್ವಾತಂತ್ರ್ಯಪೂರ್ವದ ಪರಾಮರ್ಶನ ವ್ಯಾಕರಣ ಗ್ರಂಥಗಳಲ್ಲಿ ಸಂಸ್ಕೃತ ಸಂಧಿಗಳನ್ನು ಕೈಬಿಟ್ಟಿರುವುದು ಕಂಡುಬರುತ್ತದೆ.

ಉದಾಹರಣೆ

- ಡಾ. ಎ.ಎನ್. ನರಸಿಂಹಯ್ಯನವರ – ಕನ್ನಡ ಪ್ರಥಮವ್ಯಾಕರಣ
- ತೀ. ನಂ. ಶ್ರೀಕಂಠಯ್ಯನವರ – ಕನ್ನಡ ಮಧ್ಯಮವ್ಯಾಕರಣ

ಇಂದು ಡಿ.ಎನ್.ಶಂಕರಭಟ್ ಅವರು ಸಂಸ್ಕೃತ ಸಂಧಿಗಳ ಅಗತ್ಯವಿಲ್ಲ, ಅವುಗಳನ್ನು ಶಾಲಾ ಹಂತಗಳಲ್ಲಿ ಕೈಬಿಡಬೇಕೆಂಬ ಅಭಿಪ್ರಾಯವು ಹೊಸದೇನಲ್ಲ. ಸಂಸ್ಕೃತ ಸಂಧಿಗಳನ್ನು ಸ್ವಾತಂತ್ರ್ಯಪೂರ್ವದ ಪರಾಮರ್ಶನ ವ್ಯಾಕರಣ ಗ್ರಂಥಗಳಿಂದ ಕೈಬಿಟ್ಟಿರುವುದು ಅಧ್ಯಯನದಿಂದ ತಿಳಿದುಬರುತ್ತದೆ.

೯. ಸ್ವಾತಂತ್ರ್ಯಪೂರ್ವ, ಸ್ವಾತಂತ್ರ್ಯನಂತರ ಮತ್ತು ಸಮಕಾಲೀನ ಪಠ್ಯಗಳನ್ನು ಗಮನಿಸಿದಾಗ ಕೆಲವು ವ್ಯಾಕರಣಾಂಶಗಳ ಸ್ವರೂಪದಲ್ಲಿ ಬದಲಾವಣೆಯಾಗಿರುವುದು ಅಧ್ಯಯನದಿಂದ ತಿಳಿದುಬರುತ್ತದೆ. ಅಂದರೆ ಸ್ವಾತಂತ್ರ್ಯಪೂರ್ವದಲ್ಲಿ ವಿರುದ್ಧಾರ್ಥಕ ನುಡಿಗಳಿಗೆ ವಿಪರೀತಾರ್ಥ ನುಡಿಗಳು, ಮಾರ್ನುಡಿಗಳು ಎಂದು ಕರೆಯುತ್ತಿದ್ದರು. ಮೈಸೂರು ಸರಕಾರದ ಇಲಾಖೆ ಪಠ್ಯಪುಸ್ತಕಗಳಲ್ಲಿ ಎದುರು ಪದಗಳೆಂದು ಕರೆಯುತ್ತಿದ್ದರೆ, ಸಮಕಾಲೀನ ಪಠ್ಯಗಳಲ್ಲಿ ವಿರೋಧ ಪದಗಳು, ವಿರುದ್ಧ ಪದಗಳು, ವಿರುದ್ಧಾರ್ಥಕ ಪದಗಳು ಎಂದು ದಾಖಲಿಸಿರುವುದು ಕಂಡುಬರುತ್ತದೆ.

ಉದಾಹರಣೆ

೧. ವಿಪರೀತಾರ್ಥ ನುಡಿಗಳು / ಮಾರ್ನುಡಿಗಳು

| | |
|---|---|
| ತಪ್ಪು X ಒಪ್ಪು | ಆಸ್ತಿಕ X ನಾಸ್ತಿಕ |
| ಉದಯ X ಅಸ್ತ | ಶತ್ರು X ಮಿತ್ರ |

೨. ಎದುರು ಪದಗಳು

ಕೊಳ್ಳುವುದು X ಮಾರುವುದು    ಈಗ X ಆಗ

ನ್ಯಾಯ X ಅನ್ಯಾಯ    ಎಡ X ಬಲ

೩. ವಿರೋಧಪದಗಳು, ವಿರುದ್ಧಪದಗಳು, ವಿರುದ್ಧಾರ್ಥಕ ಪದಗಳು

ನೀಡುತ X ಬೇಡುತ    ಹಾಕುತ X ತೆಗೆಯುತ

ಹಿಡಿ X ಬಿಡು    ಸಾಕು X ಬೇಕು

೧೦. ಸ್ವಾಂತ್ರ್ಯಪೂರ್ವ, ಸ್ವಾತಂತ್ರ್ಯನಂತರ ಮತ್ತು ಸಮಕಾಲೀನ ಪಠ್ಯಗಳಲ್ಲಿ ಒಂದು ಪದಕ್ಕೆ ಒಂದು ಅರ್ಥ ನೀಡುವುದು ಸಾಮಾನ್ಯವಾಗಿದೆ. ಆದರೆ ಸಮಕಾಲೀನ ಪ್ರಾಥಮಿಕ/ಮಾಧ್ಯಮಿಕ ಪಠ್ಯಗಳಲ್ಲಿ ಈ ರೂಪದ ಜೊತೆಗೆ ಪದಕ್ಕೆ ದೀರ್ಘವಾದ ವಿವರಣೆಯನ್ನು 'ಗಮನಿಸಿ–ತಿಳಿ' ಎನ್ನುವ ಶೀರ್ಷಿಕೆ ಅಡಿಯಲ್ಲಿ, ಪ್ರೌಢಶಾಲಾ ಪಠ್ಯಗಳಲ್ಲಿ 'ಪಠ್ಯಾಧಾರ ಟಿಪ್ಪಣಿ' ಶೀರ್ಷಿಕೆ ಅಡಿಯಲ್ಲಿ ದಾಖಲಿಸಲಾಗಿದೆ.

ಉದಾಹರಣೆ

೧. ಗಮನಿಸಿ–ತಿಳಿ

ಅಥಿತಿ – ಅನಿರೀಕ್ಷಿತವಾಗಿ ಮನೆಗೆ ಬಂದ ಸಭ್ಯ, ಆಮಂತ್ರಣ ಪಡೆದು ಅಥವಾ ಪಡೆಯದೆ ಬಂದ ಗೌರವಸ್ಥ, ಆಮಂತ್ರಿತ.

ಝೀಬ್ರಾಪಟ್ಟಿ – ವಾಹನಗಳು ಚಲಿಸುವಾಗ ಜನ ರಸ್ತೆಯನ್ನು ಸುರಕ್ಷಿತವಾಗಿ ದಾಟಲು ಎಳೆದಿರುವ ಪಟ್ಟಿ.

ವಂದನಾರ್ಪಣೆ – ಕಾರ್ಯಕ್ರಮ ಮುಗಿದ ಮೇಲೆ ತಿಳಿಸುವ ಧನ್ಯವಾದ.

ಮಿಂಚು – ಮಳೆಗಾಲದ ಸಮಯದಲ್ಲಿ ಆಕಾಶದಲ್ಲಿ ಕಾಣಿಸಿಕೊಳ್ಳುವ ವಿದ್ಯುತ್ಸಂಚಾರದ ಹೊಳಪು.

ಸಾಂಸ್ಕೃತಿಕ ಕಾರ್ಯಕ್ರಮ – ನೃತ್ಯ,ರೂಪಕ, ಕೋಲಾಟ, ಸಮೂಹಗೀತೆ, ಹಾಡು ಇತ್ಯಾದಿ ಕಾರ್ಯಕ್ರಮಗಳು.

೨. ಪಠ್ಯಾಧಾರ ಟಿಪ್ಪಣಿ

ಏಕತಾರಿ – ಒಂದೇ ತಂತಿವುಳ್ಳ ಸಂಗೀತ ವಾದ್ಯ.

ದೇವರಗುಡ್ಡರು – ದೇವರನ್ನು ವಂಶಪಾರಂಪರ್ಯವಾಗಿ

ಪೂಜಿಸುವ ಮನೆತನದವರು.

ದಮ್ಮಡಿ – ಕಂಸಾಳೆಯವರು ಕತೆ ಹೇಳುವಾಗ ಹಿಮ್ಮೇಳದವರು ಬಾರಿಸುವ ವೃತ್ತಾಕಾರದ ಚರ್ಮದ ಸಾಧನ.

ಟೂರಿಂಗ್‌ಟಾಕೀಸ್ – ಪ್ರದೇಶದಿಂದ ಪ್ರದೇಶಕ್ಕೆ ಬದಲಾಗುವ ಸಂಚಾರಿ ಚಿಂತ್ರಮಂದಿರ.

ಚೌಕಟ್ಟ್ಯಾಗ – ಸಾಧನೆ ಮಾಡಿದವರ ಫೋಟೊ ಪತ್ರಿಕೆಯಲ್ಲಿ ಬರುವುದು.

೧೧. ಸ್ವಾತಂತ್ರ್ಯಪೂರ್ವದಲ್ಲಿ ಪಠ್ಯಗಳೇ ತರಗತಿಗಳನ್ನು ಗುರುತಿಸುವುದು ಕಂಡುಬರುತ್ತದೆ. ಸ್ವಾತಂತ್ರ್ಯನಂತರದಲ್ಲಿ (ಕರ್ನಾಟಕ ಏಕೀಕರಣದ ನಂತರ) ಕನ್ನಡ ಸಾಹಿತ್ಯ, ಕನ್ನಡ ಭಾಷೆಗೆ ಪ್ರಾಧಾನ್ಯತೆ ಕೊಡುತ್ತ ಬಂದಿದ್ದರ ಪರಿಣಾಮವಾಗಿ ಸಮಕಾಲೀನ ಪಠ್ಯಗಳಿಗೆ ಸಿಹಿಯಾದ, ಸವಿಯಾದ, ಕಸ್ತೂರಿಯಂತೆ ಪರಿಮಳ ಬೀರುವ, ಕನ್ನಡಕ್ಕೆ ಕನ್ನಡದ್ದೇಆದ ಶೀರ್ಷಿಕೆಗಳನ್ನು ನೀಡಿರುವುದು ಅಧ್ಯಯನದಿಂದ ತಿಳಿದುಬರುತ್ತದೆ.

ಉದಾಹರಣೆ

೧. ಸ್ವಾತಂತ್ರ್ಯ ಪೂರ್ವದ ಶಾಲಾಪಠ್ಯಗಳ ಶೀರ್ಷಿಕೆಗಳು ಮತ್ತು ಪ್ರಕಟವಾದ ವರ್ಷ

೧. ಬಾಲ ಕಥಾವಾಳಿ ಒಂದನೇ ತರಗತಿ – ೧೯೧೬
೨. ಕನ್ನಡ ಬಾಲಶಿಕ್ಷೆ ಮೊದಲನೆಯ ತರಗತಿಯವರಿಗೋಸ್ಕರ– ೧೯೩೯
೩. ಕನ್ನಡ ಮೊದಲನೇ ಪುಸ್ತಕ – ೧೯೨೮
೪. ಕನ್ನಡ ಒಂದನೆಯ ಪುಸ್ತಕ – ೧೯೪೬
೫. ಕನ್ನಡ ಎರಡನೇ ಪುಸ್ತಕ – ೧೯೨೭
೬. ಕನ್ನಡ ಐದನೇ ಪುಸ್ತಕ – ೧೯೧೦
೭. ಕನ್ನಡ ಆರನೇ ಪುಸ್ತಕ – ೧೯೧೦
೮. ಕನ್ನಡ ಏಳನೇ ಪುಸ್ತಕ – ೧೯೧೦
೯. ಕನ್ನಡ ನೂತನ ಪಾಠಮಾಲೆ ಎಂಟನೆಯ ಪುಸ್ತಕ – ೧೯೩೯
೧೦. ಮ್ಯಾಟ್ರಿಕ್ಯುಲೇಶನ್ ಪರೀಕ್ಷೆಗೆ ನಿಯಮಿಸಲ್ಪಟ್ಟ ಗದ್ಯಪದ್ಯಸಂಗ್ರಹ – ೧೯೪೦

೨. ಕರ್ನಾಟಕ ಏಕೀಕರಣ ನಂತರದ ಮತ್ತು ಸಮಕಾಲೀನ ಸಂದರ್ಭದ ಶಾಲಾಪಠ್ಯಗಳ ಶೀರ್ಷಿಕೆಗಳು ಮತ್ತು ಪ್ರಕಟವಾದ ವರ್ಷ.

೧. ಸಾಹಿತ್ಯ ಸುಗ್ಗಿ ಹೈಯರ್ ಸೆಕೆಂಡರಿ (ಎಂಟನೆ ತರಗತಿ) – ೧೯೭೬
೨. ಸಾಹಿತ್ಯ ಮಂದಾರ (ಒಂಬತ್ತನೆಯ ತರಗತಿ) – ೧೯೭೬
೩. ಕನ್ನಡ ಗಂಗೋತ್ರಿ – ೨ (ಒಂಬತ್ತನೆಯ ತರಗತಿ) – ೧೯೭೯
೪. ಕನ್ನಡ ಕಲಿ – ನಲಿ ೧ (ಒಂದನೇ ತರಗತಿ) – ೨೦೦೯
೫. ಕನ್ನಡ ಕಲಿ – ನಲಿ ೨ (ಎರಡನೇ ತರಗತಿ) – ೨೦೦೯
೬. ಕನ್ನಡ ಕಲಿ – ನಲಿ ೩ (ಮೂರನೇ ತರಗತಿ) – ೨೦೦೯
೭. ನಲಿ – ಕಲಿ ೩ (ಮೂರನೇ ತರಗತಿ) – ೨೦೧೧
೮. ಕನ್ನಡ ಕಲಿ – ನಲಿ ೪ (ನಾಲ್ಕನೇ ತರಗತಿ) – ೨೦೧೩
೯. ತಿಳಿ ಕನ್ನಡ –೩ (ಏಳನೇ ತರಗತಿ) – ೨೦೦೮
೧೦. ಕನ್ನಡ ಕಸ್ತೂರಿ – ೮ (ಎಂಟನೆಯ ತರಗತಿ) – ೨೦೧೦
೧೧. ಸಿರಿ ಕನ್ನಡ – ೯ (ಒಂಬತ್ತನೆಯ ತರಗತಿ) – ೨೦೧೩
೧೨. ತಿಳಿ ಕನ್ನಡ – ೬ (ಹತ್ತನೆಯ ತರಗತಿ) – ೨೦೧೩

೧೨. ಸ್ವಾತಂತ್ರ್ಯಪೂರ್ವ ಮತ್ತು ನಂತರದ ಪಠ್ಯಪುಸ್ತಕಗಳಲ್ಲಿ 'ಮಾಡಬೇಕಾದ ಕೆಲಸ', 'ಬರಹ' ಎಂದು ದಾಖಲಾಗಿದ್ದರೆ, ಸಮಕಾಲೀನ ಸಂದರ್ಭದ ಪಠ್ಯಗಳಲ್ಲಿ 'ಭಾಷಾ–ಚಟುವಟಿಕೆ', ಅಭ್ಯಾಸ – ಚಟುವಟಿಕೆ' ಎಂದು ಬಳಕೆ ಮಾಡಿರುವುದು ಅಧ್ಯಯನದಿಂದ ತಿಳಿದುಬರುತ್ತದೆ. ಅಂದರೆ ಇಂದು ಚರ್ಚೆಮಾಡುತ್ತಿರುವ ಕನ್ನಡವನ್ನು ಕನ್ನಡದ ಮೂಲಕ ನೋಡಬೇಕೆನ್ನುವ ಚರ್ಚೆಯ ವಿಷಯ ಸ್ವಾತಂತ್ರ್ಯಪೂರ್ವದಲ್ಲೆ ಇತ್ತೇನೋ ಎಂಬುದು ಇಂತಹ ಉದಾಹರಣೆಗಳಿಂದ ತಿಳಿದುಬರುತ್ತದೆ.

೧೩. ಪರಾಮರ್ಶನ ವ್ಯಾಕರಣ ಗ್ರಂಥಗಳ ವಿಷಯ ಸಮಕಾಲೀನ ಪಠ್ಯಪುಸ್ತಕಗಳಲ್ಲಿ ಯಾವ ಸ್ವರೂಪದಲ್ಲಿ ಅಳವಡಿಸಲಾಗಿದೆ ಎಂಬುದನ್ನು ನೋಡಿದಾಗ ಭಿನ್ನತೆಗಿಂತ ಹೆಚ್ಚು ಸಾಮ್ಯತೆ ಹೊಂದಿರುವುದು ಅಧ್ಯಯನದಿಂದ ತಿಳಿದುಬರುತ್ತದೆ. ಪರಾಮರ್ಶನ ಗ್ರಂಥಗಳು ವ್ಯಾಕರಣದ ಪರಿಭಾಷೆಗಳನ್ನು ಹೊಂದಿದ್ದರೆ, ಪಠ್ಯಪುಸ್ತಕಗಳು ಮಕ್ಕಳ

ತಿಳುವಳಿಕೆಯನ್ನಾದರಿಸಿ ವ್ಯಾಕರಣಾಂಶಗಳನ್ನು ಹೊಂದಿವೆ. ಕೆಲವು ಪರಿಭಾಷೆಗಳಲ್ಲಿ ಭಿನ್ನತೆಯಿದ್ದರೂ ವಿಶ್ಲೇಷಣೆಯಲ್ಲಿ ಸಾಮ್ಯತೆ ಇರುವುದು ಕಂಡುಬರುತ್ತದೆ.

ಉದಾಹರಣೆ

| ಪರಾಮರ್ಶನ ವ್ಯಾಕರಣ ಗ್ರಂಥಗಳು | ಶಾಲಾಪಠ್ಯಪುಸ್ತಕಗಳು |
|---|---|
| ನ್ಯೂನರೂಪಗಳು | ಕೃದಂತಗಳು |
| ಸಮುಚ್ಚಯಗಳು | ಅವ್ಯಯಗಳು |
| ದ್ವಿರುಕ್ತಿ | ಪುನರಾವರ್ತಿತ ರೂಪಗಳು |
| ಪದಗಳಕ್ರಮ | ವಾಕ್ಯವಿಭಜನೆ |
| ಅಪಭ್ರಂಶಗಳು | ತತ್ಸಮ – ತದ್ಭವ |
| ಉಭಯಪದಗಳು | ಕ್ರಿಯಾಪದಮತ್ತು ನಾಮಪದ |

೧೪. ಪರಾಮರ್ಶನ ವ್ಯಾಕರಣಗಳು ಮತ್ತು ಪಠ್ಯಪುಸ್ತಕದ ವ್ಯಾಕರಣವನ್ನು ಗಮನಿಸಿದಾಗ ಎರಡಕ್ಕೂ ನಿಯಮ ಒಂದೆ ಇರುವುದು ಅಧ್ಯಯನದಿಂದ ತಿಳಿದುಬರುತ್ತದೆ. ಆದರೆ ನಿಯಮ ಬಳಸುವ ವಿಧಾನ ಬೇರೆಬೇರೆ ಆಗಿದೆ. ಇವೆರಡೂ ಬಹುಮಟ್ಟಿಗೆ ಬಿಡಿಬಿಡಿಯಾಗಿ ಒಡೆದು ನೋಡುವ ಪ್ರಕ್ರಿಯೆಯನ್ನು ಹೇಳುತ್ತಿರುವುದು ಕಂಡುಬರುತ್ತದೆ.

ಉದಾಹರಣೆ

೧. ಪದ ಬಿಡಿಸಿ ಬರೆಯಿರಿ

ಹೂವಿನೊಳಗೊಂದು, ಅಂದಾಗೊಮ್ಮೆ, ಕೀಳೇಳು, ಅಧಿಕವಾಗಲಿ,
ಹುಲ್ಲುಗಾವಲು, ಸೂರ್ಯೋದಯ, ಹೆಜ್ಜೇನು, ಕೊಂದಿಕ್ಕು.

೨. ಮಾದರಿಯಲ್ಲಿ ಸೂಚಿಸಿದಂತೆ ಪದ ವಿಶ್ಲೇಷಣೆ ಬರೆದು ಸ್ಪಷ್ಟವಾಗಿ ಓದಿ

ಮಾದರಿ : ಮಳೆಗಾಲ > ಮಳೆ + ಕಾಲ
ಬರಗಾಲ > ________
ಬಿಸಿಲುಗಾಲ > ________
ಚಳಿಗಾಲ > ________
ಕೊನೆಗಾಲ > ________

೩. ಮಾದರಿಯಲ್ಲಿ ಸೂಚಿಸಿದಂತೆ ಸೂಕ್ತಪದ ರಚಿಸಿ ಬರೆಯಿರಿ

| | | | |
|---|---|---|---|
| ಮಾದರಿ : ಒಂದು | + ಅಲ್ಲ | > | ಒಂದಲ್ಲ |
| ಎದುರು | + ಆಯಿತು | > | ________ |
| ಆತ್ಮೀಯಳು | + ಆದಳು | > | ________ |
| ಸೇರು | + ಇದ್ದಳು | > | ________ |
| ಒಬ್ಬ | + ಆತ | > | ________ |

೪. ಬಿಡಿಸಿ ಬರೆದು ಸಂಧಿಯ ಹೆಸರನ್ನು ಹೇಳಿ

ತೊರೆದಿದ್ದೇನೆ, ಕೊನೆಗಾಲ, ಲೇಖಕಾಗ್ರಣಿ, ಅತ್ಯುತ್ತಮ, ಪಿತ್ರಾರ್ಜಿತ, ಹುಲಿದೊಗಲು. ಪರಮಾಣು, ಕಾಳೋರಗ, ಸಿರಿಗನ್ನಡ, ಬೇರೊಬ್ಬ.

೫. ವಿಭಕ್ತಿ ಪ್ರತ್ಯಯಗಳನ್ನು ವಿಂಗಡಿಸಿ ವಿಭಕ್ತಿಯನ್ನು ಹೆಸರಿಸಿ

ದೀಪಗಳನ್ನು, ಪೂಜಿಸುವ, ದೃಶ್ಯಕ್ಕೆ, ಹರಿದ್ವಾರದಿಂದ, ಗಂಗೆಯಲ್ಲಿ.

೧೫. ಬ್ರಿಟೀಷರ ಆಳ್ವಿಕೆಯಲ್ಲಿ, ಕ್ರಿಶ್ಚಿಯನ್ ಮಿಷಿನರಿಗಳ ಕಾಲಘಟ್ಟದಲ್ಲಿ ಬಂದಿರುವ ವ್ಯಾಕರಣಗಳಿಂದ ತಿಳಿದುಬರುವ ಸಂಗತಿ ಎಂದರೆ ಕನ್ನಡ ಭಾಷೆಯ ವ್ಯಾಕರಣವನ್ನು ಹೇಳಿಕೊಡುವ ಮೂಲಕವೇ ಅದರ ಬಳಕೆಯನ್ನು ತಂದುಕೊಳ್ಳಲು ಸಾಧ್ಯ ಎಂಬುದು ಅಧ್ಯಯನದಿಂದ ತಿಳಿದುಬರುತ್ತದೆ.

೧೬. ಸ್ವಾತಂತ್ರ್ಯ ಪೂರ್ವದ ಪ್ರತ್ಯೇಕ ವ್ಯಾಕರಣ ಪುಸ್ತಕಗಳು, ಸ್ವಾತಂತ್ರ್ಯ ನಂತರ ಮತ್ತು ಸಮಕಾಲೀನ ಸಂದರ್ಭದ ಪಠ್ಯಗಳಲ್ಲಿರುವ ವ್ಯಾಕರಣಾಂಶಗಳು ಭಾಷೆಯನ್ನು ಬಳಸುವವರ ನೆರವಿಗೆ ಬರದೆ ಇದ್ದರೂ, ರಚನಾತ್ಮಕವಾಗಿ ಭಾಷೆಯನ್ನು ಬಳಸುವವರ ನೆರವಿಗೆ ಬರುತ್ತವೆಂಬುದನ್ನು ಅಧ್ಯಯನದಿಂದ ಕಂಡುಕೊಳ್ಳಲಾಗಿದೆ. ಉದಾಹರಣೆಗೆ: ಶಾಲಾ ವಿವಿಧ ಹಂತಗಳ ಇಂದಿನ ಪಠ್ಯಪುಸ್ತಕಗಳಲ್ಲಿ ಅಳವಡಿಸಿರುವ ಪ್ರಾಯೋಗಿಕ ವ್ಯಾಕರಣಾಂಶಗಳು ಮಕ್ಕಳ ಭಾಷಾ ಪ್ರಭುತ್ವವನ್ನು ಬೆಳೆಸುವುದಾಗಿದೆ. ಈ ವ್ಯಾಕರಣಾಂಶಗಳನ್ನು ಕನ್ನಡ ಪ್ರಥಮ/ದ್ವಿತೀಯ/ ತೃತೀಯ ಭಾಷಾ ಪಠ್ಯಪುಸ್ತಕಗಳ ಅಭ್ಯಾಸಗಳಡಿಯಲ್ಲಿ ಕಲಿಸಿಕೊಡಲಾಗುತ್ತಿದೆ.

೧೭. ಸ್ವಾತಂತ್ರ್ಯ ಪೂರ್ವ, ಸ್ವಾತಂತ್ರ್ಯ ನಂತರ ಮತ್ತು ಸಮಕಾಲೀನ ಸಂದರ್ಭದಲ್ಲೂ ಸಂಸ್ಕೃತ ವ್ಯಾಕರಣದ ಮಾದರಿಯನ್ನು ಅನುಸರಿಸಿ ರೂಪಿಸಿರುವ ನಿಯಮಗಳನ್ನು ಈಗಲೂ ಬಳಕೆ ಮಾಡುತ್ತಿದ್ದೇವೆಂಬುದು ಅಧ್ಯಯನದಿಂದ ತಿಳಿದುಬರುತ್ತದೆ. ಉದಾಹರಣೆಗೆ: ವ್ಯಾಕರಣವು ತನ್ನದೇಆದ ಪರಿಭಾಷೆಯನ್ನು ಹೊಂದಿದೆ. ಆ ಪರಿಭಾಷೆಯನ್ನು ಅಥವಾ ವ್ಯಾಕರಣಾಂಶಗಳನ್ನು (ಸಂಸ್ಕೃತ, ಕನ್ನಡ) ಇಂದಿಗೂ ಶಾಲೆಗಳಲ್ಲಿ ನಾವು ಕಲಿಸಿಕೊಡುತ್ತಿದ್ದೇವೆ.

೧೮. ಸ್ವಾತಂತ್ರ್ಯಪೂರ್ವ, ಸ್ವಾತಂತ್ರ್ಯ ನಂತರದ ಕನ್ನಡ ಪಠ್ಯಪುಸ್ತಕಗಳನ್ನು ಗಮನಿಸಿದಾಗ ಹೆಚ್ಚಿನ ಪ್ರಮಾಣದಲ್ಲಿ ಬರಹದ ಕನ್ನಡವನ್ನು ಮಾತ್ರ ಗಮನದಲ್ಲಿರಿಸಿಕೊಂಡಿದ್ದರೆ, ಸಮಕಾಲೀನ ಸಂದರ್ಭದ ಪಠ್ಯಗಳಲ್ಲಿ ಬರಹದ ಕನ್ನಡದ ಜೊತೆಗೆ ಆಡುನುಡಿಯನ್ನು ಬಳಕೆಮಾಡಿರುವುದು ಅಧ್ಯಯನದಿಂದ ತಿಳಿದುಬರುತ್ತದೆ.

ಉದಾಹರಣೆ

ಮೇಷ್ಟ್ರು, ಅಂಗಿ, ಸ್ವಾಮಿ, ಕಾಯಿ, ಕಾಸು, ಆತ, ಈತ, ದನಿ, ಚೋಟುದ್ದ, ಬರ್ತೀನಿ, ಬಿಡ್ತೀನಿ, ಹೋಗ್ತೀನಿ, ಮಾಡ್ತೀನಿ, ಪೀಪಿ ಇತ್ಯಾದಿ.

೧೯. ಸ್ವಾತಂತ್ರ್ಯ ಪೂರ್ವಕಾಲಘಟ್ಟದ ಪ್ರತ್ಯೇಕ ವ್ಯಾಕರಣಗಳು ಅನುಗಮನ ಪದ್ಧತಿಯಲ್ಲಿ ಇನ್ನು ಕೆಲವು ನಿಗಮ ಪದ್ಧತಿಯಲ್ಲಿ ರಚಿತವಾಗಿದ್ದರೆ, ಸ್ವಾತಂತ್ರ್ಯ ನಂತರ ಮತ್ತು ಸಮಕಾಲೀನ ಸಂದರ್ಭದ ಪಠ್ಯಗಳಲ್ಲಿ ವ್ಯಾಕರಣಾಂಶಗಳನ್ನು ಪಠ್ಯದ ಜೊತೆಜೊತೆಯಲ್ಲಿಯೇ ಅನುಗಮನ ಪದ್ಧತಿಯಲ್ಲಿ ಅಂದರೆ ಇಂದಿನ ಪ್ರಾಥಮಿಕ ಮತ್ತು ಮಾಧ್ಯಮಿಕ ಶಾಲಾಹಂತಗಳಲ್ಲಿ ಅನುಗಮನ ಪದ್ಧತಿಯನ್ನು ಅನುಸರಿಸಿದರೆ, ಪ್ರೌಢಶಾಲಾ ಹಂತದಲ್ಲಿ ನಿಗಮ ಮತ್ತು ಅನುಗಮನ ಪದ್ಧತಿಗಳೆರಡನ್ನೂ ಅಳವಡಿಸಿರುವುದು ಅಧ್ಯಯನದಿಂದ ತಿಳಿದುಬರುತ್ತದೆ.

ಉದಾಹರಣೆ

೧. ಪ್ರಾಥಮಿಕ/ಮಾಧ್ಯಮಿಕ ಶಾಲಾ ಹಂತಕ್ಕೆ : ಲೋಪಸಂಧಿ

ನಾನು + ಅರಿಯನೆ > ನಾನರಿಯನೆ

ಉ ಅ

ಹಣ್ಣು + ಆಗು > ಹಣ್ಣಾಗು

ಉ ಆ

ನೆನಪು + ಇರಲಿ > ನೆನಪಿರಲಿ

ಉ ಇ

ಒಂದು + ಒಂದು > ಒಂದೊಂದು

ಉ ಒ

ಸಂಧಿ ಪ್ರಕ್ರಿಯೆಯಲ್ಲಿ ಪದದ ಅರ್ಥ ಕೆಡದಂತೆ ಪೂರ್ವಪದದ ಕೊನೆ ಸ್ವರ ಲೋಪವಾಗಿ ಉತ್ತರ ಪದದ ಸ್ವರಾಕ್ಷರದೊಂದಿಗೆ ಸೇರುವುದೇ ಲೋಪಸಂಧಿ.

೨. ಪ್ರೌಢಶಾಲಾ ಹಂತಕ್ಕೆ : ನಾಮಪದ

ನಾಮ ಎಂದರೆ ಹೆಸರು. ನಾಮಪದ ಎಂದರೆ ಹೆಸರನ್ನು ಹೇಳುವ ಪದ. ವ್ಯಕ್ತಿ, ವಸ್ತು, ಪ್ರಾಣಿ ಹಾಗೂ ಸ್ಥಳಗಳ ಹೆಸರನ್ನು ತಿಳಿಸುವ ಪದವು ನಾಮಪದ.

| ವ್ಯಕ್ತಿ | ವಸ್ತು | ಪ್ರಾಣಿ | ಸ್ಥಳ |
|---|---|---|---|
| ಅರ್ಜುನ | ಮನೆ | ಬೆಕ್ಕು | ಧಾರವಾಡ |
| ಪುಷ್ಪಾ | ಪೆಟ್ಟಿಗೆ | ನಾಯಿ | ಬೆಂಗಳೂರು |
| ಜ್ಯೋತಿ | ಪುಸ್ತಕ | ಹುಲಿ | ಮಂಗಳೂರು |

೨೦. ಸಮಕಾಲೀನ ಸಂದರ್ಭದ ಪ್ರಾಥಮಿಕ ಮತ್ತು ಮಾಧ್ಯಮಿಕ ಶಾಲಾ ಹಂತದ ಕನ್ನಡ ಪಠ್ಯಗಳಲ್ಲಿ ಆಧುನಿಕ ಭಾಷಾವಿಜ್ಞಾನದ ಸಹಾಯದಿಂದ ಭಾಷಿಕ ರೂಪಗಳನ್ನು ಬಳಕೆ ಮಾಡಿರುವುದು ಅಧ್ಯಯನದಿಂದ ತಿಳಿದುಬರುತ್ತದೆ.

ಉದಾಹರಣೆ : ಪ್ರಾಥಮಿಕ/ಮಾಧ್ಯಮಿಕ ಶಾಲಾ ಹಂತಕ್ಕೆ

೧. ಕೊಟ್ಟಿರುವ ಪದಗಳ ಪುರುಷ ರೂಪ ಬರೆಯಿರಿ

ಅಕ್ಕ ________ ಮಗಳು ________

ಇವಳು ________ ತಂಗಿ ________

೨. ಕೊಟ್ಟಿರುವ ಪದಗಳ ಸ್ತ್ರೀ ರೂಪ ಬರೆಯಿರಿ

ತಂದೆ ______ ಅಜ್ಜ ______

ತಮ್ಮ ______ ಅಣ್ಣ ______

೩. ಕೊಟ್ಟಿರುವ ಪದಗಳಿಗೆ ಬಹುವಚನ ರೂಪ ಬರೆಯಿರಿ

ರಾಜ ______ ಮುದುಕಿ______

ಸೇತುವೆ ______ ಅವನು ______

೪. ಕೊಟ್ಟಿರುವ ಪುನರಾವರ್ತಿತ ರೂಪಗಳನ್ನು ಸ್ಪಷ್ಟವಾಗಿ ಓದು

ಹೌದುಹೌದು, ನಡೆನಡೆ, ಹೇಳುಹೇಳು, ಹೋಗುಹೋಗು ಇತ್ಯಾದಿ.

೫. ಆಡುಮಾತಿನ ರೂಪ ಮತ್ತು ಗ್ರಾಂಥಿಕರೂಪ ತಿಳಿಯಿರಿ

| ಆಡುಮಾತಿನ ರೂಪ | | ಗ್ರಾಂಥಿಕರೂಪ |
|---|---|---|
| ಇಸಮು | – | ಆಸಾಮಿ (ವ್ಯಕ್ತಿ) |
| ಕೊಲ್ರಿ | – | ಕೊಲ್ಲಿರಿ |
| ಮಕ | – | ಮುಖ |
| ಉಣ್ಣೋಹೊತ್ತು | – | ಊಟ ಮಾಡುವ ಹೊತ್ತು |

೬. ಪದಗಳ ಸರಿಯಾದ ರಚನಾರೂಪ ಬರೆದು ಸ್ಪಷ್ಟವಾಗಿ ಉಚ್ಚರಿಸಿ

ರಥ್ನ ______ ವ್ಯತಾಸ ______

ವಿಶಾಂತಿ ______ ಪೂಜರು ______

ಕೇಮು ______ ಮನುಷ ______

ಆಶ್ಚರ ______ ಸಂತೋಸ ______

೭. ಕೊಟ್ಟಿರುವ ಪದ ಓದಿ ಅದೇ ತೆರನಾದ ಸಾಮ್ಯಪದ ಬರೆಯಿರಿ

ಮೃಗ – ಖಗ ______ ಶುಕ – ಪಿಕ ______

ಗಿಡ – ಗಂಟೆ ______ ಕಾಡು – ಮೇಡು ______

೮. ಸ್ಪಷ್ಟವಾಗಿ ಧ್ವನಿ ಉಚ್ಚಾರ ಮಾಡಿ–ಓದಿ ಅರ್ಥ ವ್ಯತ್ಯಾಸ ತಿಳಿಸಿ

ಬಳೆ – ಬಲೆ ನಾಳೆ – ನಾಲೆ

ಹೆಮ್ಮೆ – ಎಮ್ಮೆ ಚಿನ್ನ – ಚಿಣ್ಣ

೨೧. ವ್ಯಾಕರಣವು ತನ್ನದೇಆದ ಪರಿಭಾಷೆಯನ್ನು ಹೊಂದಿದೆ. ಆ ಪರಿಭಾಷೆಗಳು ಮಕ್ಕಳ ಭಾಷಾ ಕಲಿಕೆಗೆ ತೊಡಕಾಗಬಾರದೆಂಬ ಉದ್ದೇಶದಿಂದ ಪ್ರಾಥಮಿಕ

ಶಾಲಾಹಂತದ ಸಮಕಾಲೀನ ಸಂದರ್ಭದ ಕನ್ನಡ ಪಠ್ಯಪುಸ್ತಕಗಳು ಪರಿಭಾಷೆಗಳಿಂದ ಮುಕ್ತವಾಗಿ ಕಲಿಕೆಯು ಆಹ್ಲಾದಕರವಾಗುವಂತೆ ಸಂದರ್ಭೋಚಿತವಾಗಿ ಚಿತ್ರಗಳನ್ನು ಹೊಂದಿರುವುದು ಅಧ್ಯಯನದಿಂದ ತಿಳಿದುಬರುತ್ತದೆ.

೨೨. ಮೊದಲು ಭಾಷೆ ನಂತರ ವ್ಯಾಕರಣ ಎಂಬ ತಾತ್ವಿಕ ಹಿನ್ನೆಲೆಯಲ್ಲಿ ಪಠ್ಯಗಳನ್ನು ರೂಪಿಸಲಾಗಿದೆ. ಭಾಷೆಯ ಸರಿತಪ್ಪುಗಳ ತಿಳುವಳಿಕೆಯನ್ನು ಮೂಡಿಸುವ ಉದ್ದೇಶದಿಂದ ಸಮಕಾಲೀನ ಸಂದರ್ಭದ ಪ್ರಾಥಮಿಕ, ಮಾಧ್ಯಮಿಕ ಮತ್ತು ಪ್ರೌಢಶಾಲಾ ಹಂತದ ಕನ್ನಡ ಪಠ್ಯಪುಸ್ತಕಗಳಲ್ಲಿ ಭಾಷೆಯ ಜೊತೆಜೊತೆಗೆ ವ್ಯಾಕರಣಾಂಶಗಳನ್ನು ಕ್ರಿಯಾತ್ಮಕವಾಗಿ ಅಳವಡಿಸಿ ಕಲಿಸುತ್ತಿರುವುದು ಅಧ್ಯಯನದಿಂದ ತಿಳಿದುಬರುತ್ತದೆ.

೨೩. ಸ್ವಾತಂತ್ರ್ಯ ನಂತರದಿಂದ ಸಮಕಾಲೀನ ಸಂದರ್ಭದ ಮಾಧ್ಯಮಿಕ ಮತ್ತು ಪ್ರೌಢಶಾಲಾ ಹಂತಗಳಲ್ಲಿ ಛಂದಸ್ಸು ಮತ್ತು ಅಲಂಕಾರವನ್ನು ಕಲಿಸಿಕೊಡುತ್ತಿರುವುದು ಅಧ್ಯಯನದಿಂದ ತಿಳಿದುಬರುತ್ತದೆ. ಭಾಷಿಕ ರಚನೆಯ ನಿಯಮಗಳನ್ನು ತಿಳಿಸಿಕೊಡುವ ವ್ಯಾಕರಣವು ಶಾಸ್ತ್ರವಾದ್ದರಿಂದ ಈ ಶಾಸ್ತ್ರವಿಷಯದ ಜೊತೆಗೆ ಇತರ ಶಾಸ್ತ್ರವಿಷಯಗಳಾದ ಅಲಂಕಾರ ಮತ್ತು ಛಂದಸ್ಸುಗಳ ತಿಳುವಳಿಕೆ ಇದ್ದರೆ ಶಾಸ್ತ್ರವಿಷಯಗಳನ್ನು ತಿಳಿದುಕೊಳ್ಳಲು ಅನುಕೂಲವೆಂಬ ಕಾರಣದಿಂದ ಕಲಿಸಿಕೊಡುತ್ತಿರುವುದು ಅಧ್ಯಯನದಿಂದ ತಿಳಿದುಬರುತ್ತದೆ.

ಉದಾಹರಣೆ

ಪ್ರಾಸ, ಗಣವಿಂಗಡಣೆ, ಪ್ರಸ್ತಾರ, ಮಾತ್ರಾಗಣ, ಅಕ್ಷರಗಣ, ಖ್ಯಾತಕರ್ಣಾಟಕ ವೃತ್ತಗಳು, ದ್ವಿಪದಿ, ತ್ರಿಪದಿ, ಚೌಪದಿ(ಕಂದ), ಷಟ್ಪದಿ, ರಗಳೆ, ಶಬ್ದಾಲಂಕಾರಗಳು, ಅರ್ಥಾಲಂಕಾರಗಳು ಇತ್ಯಾದಿ.

೨೪. ಸೂತ್ರ ರೂಪದಲ್ಲಿರುವ ವ್ಯಾಕರಣಾಂಶಗಳನ್ನು ಕಂಠಪಾಠ ಮಾಡುವುದರಿಂದ ಭಾಷಾ ಪ್ರಭುತ್ವವನ್ನು ಪಡೆದುಕೊಳ್ಳಲು ಸಾಧ್ಯವಿಲ್ಲ. ಆದುದರಿಂದ ಪದ-ಪದಾರ್ಥ, ಸಮಾನಾರ್ಥಕ ಪದಬಳ್ಳಿ, ನಾನಾರ್ಥಕ ಪದಬಳ್ಳಿ, ವಿರೋಧಾರ್ಥಗಳು, ಜೋಡು ಪದಗಳು, ಅನುಕರಣ ಪದಗಳು, ಪ್ರಾಸ ಪದಗಳು, ಧ್ವನಿವ್ಯತ್ಯಾಸ,

ಅರ್ಥವ್ಯತ್ಯಾಸವನ್ನು ಗುರುತಿಸುವುದು ಮೊದಲಾದ ಭಾಷಿಕ ಅಂಶಗಳನ್ನು ಸೂತ್ರದಲ್ಲಿ ತಿಳಿಸದೆ, ಮಾದರಿಯನ್ನು ನೋಡಿ ಬರೆ, ಪದಗಳನ್ನು ಗಮನಿಸಿ, ಮಾದರಿಯಂತೆ ಪದರಚನೆ ಮಾಡಿ, ಗೆರೆ ಎಳೆದ ಪದ ಗಮನವಿಟ್ಟು ಓದಿ, ಆಯಾ ಪದಗಳಿಗೆ ಅನ್ವಯಿಸುವ ಪದಬರೆ ಎಂಬ ಇತ್ಯಾದಿ ನಿದರ್ಶನಗಳ ಮೂಲಕ ಭಾಷಾಂಶಗಳನ್ನು ವಿವರಿಸಿರುವುದು ಸಮಕಾಲೀನ ಸಂದರ್ಭದ ಪಠ್ಯಗಳ ಅಧ್ಯಯನದಿಂದ ತಿಳಿದುಬರುತ್ತದೆ.

೨೫. ಸಮಕಾಲೀನ ಸಂದರ್ಭದ ಪ್ರಾಥಮಿಕ ಶಾಲಾ ಹಂತದ ಕನ್ನಡ ಪಠ್ಯಗಳ ಪ್ರಮುಖ ಉದ್ದೇಶ ಭಾಷೆಯನ್ನು ಕಲಿಸುವುದಾಗಿರುತ್ತದೆ. ಹೀಗಾಗಿ ಮೊದಲು ಅರ್ಥಮಾಡಿಕೊಳ್ಳುವುದು. ಮಾತು ನಂತರ ಓದು ಆನಂತರ ಬರಹ ಈ ಹಿನ್ನೆಲೆಯಲ್ಲಿ ಕಲಿಕೆ ಸಾಗುತ್ತದೆ. ಭಾಷೆಯ ಕಲಿಕೆಯೇ ಪ್ರಧಾನವಾಗಿರುವಂತೆ ಕ್ರಿಯಾಶೀಲ ವಿಧಾನದ ಅಳವಡಿಕೆಯಲ್ಲಿ ಭಾಷೆಯೊಂದಿಗೆ ವ್ಯಾಕರಣಾಂಶಗಳು ಬೆಸೆದುಕೊಂಡಿರುವುದು ಅಧ್ಯಯನದಿಂದ ತಿಳಿದುಬರುತ್ತದೆ.

೨೬. ಸ್ವಾತಂತ್ರ್ಯಪೂರ್ವದಲ್ಲಿ ವಸ್ತುನಿಷ್ಠ ಮಾದರಿ ಪರೀಕ್ಷೆಗಳು (ಸಿ.ಇ.ಟಿ) ಇರಲಿಲ್ಲ. ಸ್ವಾತಂತ್ರ್ಯ ನಂತರ ಮತ್ತು ಸಮಕಾಲೀನ ಸಂದರ್ಭದಲ್ಲಿ ಈ ಮಾದರಿಯ ಪರೀಕ್ಷೆಗಳು ಹುಟ್ಟಿಕೊಂಡಿದ್ದರ ಪರಿಣಾಮವಾಗಿ ಅವುಗಳ ಮಾದರಿಯ ಸ್ವರೂಪವನ್ನು ತಿಳಿಸಲೋಸುಗ ಸೂಕ್ತವಾದುದನ್ನು ಆರಿಸಿ ಬಿಟ್ಟಸ್ಥಳ ತುಂಬಿ, ಗುಂಪಿಗೆ ಸೇರದ ಪದ ಬರೆಯಿರಿ, ಮಾದರಿಯನ್ನು ನೋಡಿ ಬರೆಯಿರಿ, ಗೆರೆ ಎಳೆದು ಸೂಚಿಸಿರುವ ಪದಗಳನ್ನು ಗಮನಿಸಿ ಅವುಗಳ ಗುಣವನ್ನು ಬರೆಯಿರಿ, ಹೊಂದಿಸಿ ಬರೆಯಿರಿ, ಅನುಕ್ರಮವಾಗಿ ಬರೆಯಿರಿ ಎಂಬಿತ್ಯಾದಿ ರೂಪಗಳಲ್ಲಿ ಕನ್ನಡಕ್ಕೆ ಕನ್ನಡವನ್ನು ಬಳಕೆ ಮಾಡಿರುವುದು ಅಧ್ಯಯನದಿಂದ ತಿಳಿದುಬರುತ್ತದೆ.

೨೭. ಚಾರಿತ್ರಿಕವಾಗಿ ಬೆಳೆದು ಬಂದ ವ್ಯಾಕರಣ ಪರಂಪರೆಯನ್ನು ಗಮನಿಸಿದಾಗ ಪುರುಷರೇ ಪ್ರಧಾನವಾಗಿ ವ್ಯಾಕರಣ ಕೃತಿಗಳನ್ನು ಬರೆದಿರುವುದು ಕಂಡುಬರುತ್ತದೆ. ಆದರೆ ಮಹಿಳೆಯರಾದ ರಾಜಮ್ಮ ಮತ್ತು ಗೌರಮ್ಮ ಎಂಬುವರು ೧೯೫೫ರಲ್ಲಿ ರಚಿಸಿದ 'ಹೊಸಗನ್ನಡ ವಾಕ್ಯ ರಚನೆ' ಎಂಬ ಕಿರು ಹೊತ್ತಿಗೆಯನ್ನು ಮೈಸೂರು, ತುಮಕೂರು, ಚಿಕ್ಕಮಗಳೂರು, ಮಂಡ್ಯ, ಬಳ್ಳಾರಿ ಮತ್ತು ಶಿವಮೊಗ್ಗ ಜಿಲ್ಲೆಗಳಿಗೆ ಮಾಧ್ಯಮಿಕ ಶಾಲೆಯ ವಿದ್ಯಾರ್ಥಿಗಳಿಗಾಗಿಯೇ ರಚಿಸಿರುವುದು ಅಧ್ಯಯನದಿಂದ ತಿಳಿದುಬರುತ್ತದೆ.

೨೮. ಸ್ವಾತಂತ್ರ್ಯ ಪೂರ್ವದ ಪಠ್ಯಗಳಲ್ಲಿ ಸಂಸ್ಕೃತಕ್ಕೆ ಕನ್ನಡ/ಸಂಸ್ಕೃವನ್ನು, ಸ್ವಾತಂತ್ರ್ಯ ನಂತರದಲ್ಲಿ ಕನ್ನಡಕ್ಕೆ ಸಂಸ್ಕೃತವನ್ನು, ಸಮಕಾಲೀನ ಸಂದರ್ಭದಲ್ಲಿ ಕನ್ನಡಕ್ಕೆ ಕನ್ನಡವನ್ನು ಬಳಕೆ ಮಾಡಿರುವುದು ಅಧ್ಯಯನದಿಂದ ತಿಳಿದುಬರುತ್ತದೆ.

ಉದಾಹರಣೆ

| | | |
|---|---|---|
| ೧. ಸಂಸ್ಕೃತ ಪದಕ್ಕೆ | | ಸಂಸ್ಕೃತ ಬಳಕೆ |
| ಶಬ್ದಾವಳಿ | – | ಕಠಿಣ ಶಬ್ದಗಳ ಕೋಶ |
| | | ಕಠಿಣ ಪದಗಳ ಅರ್ಥ |
| ೨. ಸಂಸ್ಕೃತ ಪದಕ್ಕೆ | | ಕನ್ನಡ ಬಳಕೆ |
| ಅಭ್ಯಾಸ, ಅಭ್ಯಾಸಗಳು | – | ಮಾಡಬೇಕಾದಕೆಲಸ, ಮಾಡಬೇಕಾದ ಬರಹ, ತಕ್ಕುದಾದುದನ್ನು ಹೆಕ್ಕಿತೆಗೆ, ತಕ್ಕುದಾದುದನ್ನು ಹೆಕ್ಕಿ ಜೋಡಿಸು |
| ೩. ಕನ್ನಡ ಪದಕ್ಕೆ | | ಸಂಸ್ಕೃತ ಬಳಕೆ |
| ಕಂದ | – | ಕುವರ, ಕುಮಾರ |
| ೪. ಕನ್ನಡ ಪದಕ್ಕೆ | | ಕನ್ನಡ ಬಳಕೆ |
| ನುಡಿಕಣಜ | – | ಪದಕಣಜ |
| ರಚನಾರೂಪ | – | ಸರಿರೂಪ |
| ನೆನಪಿನಂಗಳದ ಪದಗಳು | – | ಪದಬಳ್ಳಿಗಳು |
| ಸವಿಗನ್ನಡ | – | ತಿಳಿಗನ್ನಡ, ಕನ್ನಡ ಕಸ್ತೂರಿ |
| ಓದಿ–ತಿಳಿ | – | ಗಮನಿಸಿ–ತಿಳಿ |
| ಗಮನವಿಟ್ಟು ಓದಿ | – | ಗಟ್ಟಿಯಾಗಿ ಓದಿ |

# ಪರಾಮರ್ಶನ ಗ್ರಂಥಗಳು


- ಅನುಸೂಯ ವಿ. ಪರಗಿ : ೧೯೯೫, ಮಾತೃ ಭಾಷೆ ತತ್ವ ಮತ್ತು ಬೋಧನಾ ಮಾರ್ಗ, ಅನುಸೂಯ ಪ್ರಕಾಶನ, ಪುರವರ.
- ಎಚ್. ಎಸ್. ಉಮೇಶ (ಸಂ) : ಜನವರಿ–ಮಾರ್ಚ್೨೦೧೧, ಕನ್ನಡ ಭಾಷಾ ಅಧ್ಯಯನ ವಿಶೇಷ ಸಂಚಿಕೆ, ಅರುಹು ಕುರುಹು, ಸಂಪುಟ – ೨, ಸಂಚಿಕೆ – ೮, ಮೌನ, ೩೬೬, ನವಿಲು ರಸ್ತೆ, ಕುವೆಂಪುನಗರ, ಮೈಸೂರು – ೨೩.
- ಓಬಳೇಶ ಘಟ್ಟಿ : ೧೯೯೬, ಭಾಷೆ ಮತ್ತು ಕನ್ನಡ ಭಾಷಾ ಬೋಧನೆ, ವಿದ್ಯಾನಿಧಿ ಪ್ರಕಾಶನ, ಗದಗ.
- ಕನ್ನಡ ನಿಘಂಟು ಸಂಪುಟಗಳು : ೨೦೧೦, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.
- ಕನ್ನಡ ಶೈಲಿ ಕೈಪಿಡಿ : ೧೯೯೫, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.
- ಕರ್ನಾಟಕ ಸರಕಾರ : ೨೦೦೨, ಒಂದರಿಂದ ಹತ್ತನೆಯ ತರಗತಿಯ ಹೊಸ ಪಠ್ಯವಸ್ತುವಿನ ಮುಖ್ಯಾಂಶಗಳು, ರಾಜ್ಯ ಶಿಕ್ಷಣ ಸಂಶೋಧನೆ ಮತ್ತು ತರಬೇತಿ ಇಲಾಖೆ, ಬೆಂಗಳೂರು.
- ,, : ೨೦೦೫, ಪ್ರೇರಣ, ಪ್ರಾಥಮಿಕ ಶಾಲಾ ಶಿಕ್ಷಕರಿಗಾಗಿ ಸಂಪನ್ಮೂಲ ಸಾಹಿತ್ಯ, ಡಿ. ಎಸ್. ಇ. ಆರ್. ಟಿ. ಬೆಂಗಳೂರು.
- ಕುಮಾರ ಟಿ. ಎಂ : ೨೦೦೪, ಪ್ರಾಥಮಿಕ ಶಿಕ್ಷಣ, ಶ್ರೀದೇವಿ ಪ್ರಕಾಶನ, ಬೆಂಗಳೂರು.
- ಕೃಷ್ಣಪ್ಪ ಎಸ್ : ೨೦೦೦, ಬೋಧನಾ ತತ್ವಗಳು ಮತ್ತು ಆಧುನಿಕ ಕ್ರಮಗಳು, ಚೇತನ ಬುಕ್ ಹೌಸ್, ಬೆಂಗಳೂರು.
- ಕೆ. ಸಚ್ಚಿದಾನಂದಯ್ಯ : ೧೯೯೪, ಶಾಲೆಗಳಲ್ಲಿ ಕನ್ನುಡಿಯ ಕಲಿಕೆ, ಸತ್ಯಶ್ರೀ ಪ್ರಕಾಶನ, ಮೈಸೂರು.
- ಗಿಜುಭಾಯ್ ಬಧೇಕಾ, ಅನುವಾದ : ಡಿ. ಆರ್. ಬಾಳೊರಗಿ : ೨೦೦೮, ಹಗಲುಗನಸು, ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ ಹೊಸದೆಹಲಿ.
- ಡಾ. ಅಶೋಕ ಕುಮಾರ ರಂಜೇರೆ : ೨೦೦೫, ಭಾಷೆ ಮತ್ತು ಶಿಕ್ಷಣ, ನಿಧಿ ಪ್ರಕಾಶನ, ಹೊಸಪೇಟೆ.

- ,, (ಸಂ) : ೨೦೧೦, ನಮ್ಮ ಕನ್ನಡ, ಸಂಚಿಕೆ – ೬೬, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.
- **ಡಾ. ಆರ್. ಚಲಪತಿ (ಸಂ)** : ೨೦೧೨, ತೊಡಕುಗಳು ಮತ್ತು ತೋರುದಾರಿ, ಬರಹ ಪಬ್ಲಿಕೇಷಿಂಗ್ ಹೌಸ್, ಬೆಂಗಳೂರು.
- ,, : ೨೦೧೨, ತಂತಿ ಮೇಲಿನ ನಡಿಗೆ, ಸಖಿ ಪ್ರಕಾಶನ, ಬಳ್ಳಾರಿ.
- **ಡಾ. ಎ. ವಿ. ನರಸಿಂಹಮೂರ್ತಿ** : ೧೯೯೯, ಕನ್ನಡ ಲಿಪಿಯ ಉಗಮ ಮತ್ತು ವಿಕಾಸ, ವಿವೇಕ ಹಂಸ ಪ್ರಕಾಶನ, ಬೆಂಗಳೂರು.
- **ಡಾ. ಎಸ್. ಎಸ್. ಅಂಗಡಿ** : ೨೦೦೫, ಕನ್ನಡ ವ್ಯಾಕರಣ ಪರಿಭಾಷೆ, ವಿದ್ಯಾನಿಧಿ ಪ್ರಕಾಶನ, ಗದಗ.
- ,, : ೨೦೦೦, ಕನ್ನಡ ಕ್ರಿಯಾರೂಪಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.
- ,, : ೨೦೦೨, ಸಂಬಂಧ ವಾಚಕಗಳು ಮತ್ತು ಸಂಬೋಧನೆಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.
- **ಡಾ. ಎಸ್. ಎನ್. ಶ್ರೀಧರ್** : ೧೯೯೫, ಇಂದಿನ ಕನ್ನಡ : ರಚನೆ ಮತ್ತು ಬಳಕೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.
- **ಡಾ. ಕೆ. ಕುಶಾಲಪ್ಪಗೌಡ** : ೨೦೦೮, ಕನ್ನಡ ಭಾಷೆ ಮತ್ತು ವ್ಯಾಕರಣಗಳ ಒಂದು ಸಮೀಕ್ಷೆ, ಕಾರ್ತಿಕ್ ಎಂಟರ್ ಪ್ರೈಸಸ್, ಬೆಂಗಳೂರು.
- **ಡಾ. ಕೆ. ಕೆಂಪೇಗೌಡ** : ೧೯೯೦, ವಾಕ್ಯವಿಜ್ಞಾನ, ಭಾಷಾವಿಜ್ಞಾನ ಭಾರತಿ, ಮೈಸೂರು.
- **ಡಾ. ಕೆ. ವಿ. ನಾರಾಯಣ** : ೨೦೦೯, ಕನ್ನಡ ಜಗತ್ತು ಅರ್ಧಶತಮಾನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.
- ,, (ಸಂ) : ೨೦೦೭, ಕನ್ನಡ ವಿಶ್ವವಿದ್ಯಾಲಯ ವಿಶ್ವಕೋಶ ೧ ಭಾಷೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.
- ,, : ೨೦೦೫, ನಮ್ಮೊಡನೆ ನಮ್ಮ ನುಡಿ, ಲೋಹಿಯಾ ಪ್ರಕಾಶನ, ಬಳ್ಳಾರಿ.

- ,, (ಸಂ) : ೧೯೯೭, ನಮ್ಮ ಕನ್ನಡ, ಸಂಚಿಕೆ – ೨೫, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.
- ,, (ಸಂ) : ೨೦೦೧, ನಮ್ಮ ಕನ್ನಡ, ಸಂಚಿಕೆ – ೪೮, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.
- ,, (ಸಂ) : ೨೦೦೭, ಹೊನ್ನ ಸಂಚಿಕೆ – ೫೦, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.
- ,, (ಸಂ) : ೨೦೦೨, ನಮ್ಮ ಕನ್ನಡ, ಸಂಚಿಕೆ – ೫೧, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.
- ,, (ಸಂ) : ೨೦೦೨, ನಮ್ಮ ಕನ್ನಡ ಸಂಚಿಕೆ – ೫೩, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.
- ಡಾ. ಕೆ. ವಿ. ಪುಟ್ಟಪ್ಪ (ಸಂ) : ೨೦೦೭, ಕನ್ನಡ ಕೈಪಿಡಿ ಸಂಪುಟ – ೧, ಪ್ರಸಾರಾಂಗ, ಮಾನಸಗಂಗೋತ್ರಿ, ಮೈಸೂರು.
- ,, : ೨೦೦೭, ಕನ್ನಡ ಕೈಪಿಡಿ ಸಂಪುಟ – ೨, ಪ್ರಸಾರಾಂಗ, ಮಾನಸಗಂಗೊತ್ರಿ, ಮೈಸೂರು.
- ಡಾ. ಡಿ. ಪಾಂಡುರಂಗಬಾಬು : ೨೦೦೫, ನುಡಿನೋಟ, ಆಕಾಶ್ ಪ್ರಕಾಶನ್ ಹೊಸಪೇಟೆ.
- ,, (ಸಂ) : ೨೦೦೫, ನಮ್ಮ ಕನ್ನಡ ಸಂಚಿಕೆ – ೬೦, ಶಾಲೆಗಳಲ್ಲಿ ಕನ್ನಡ ಬೋಧನೆ ಮತ್ತು ಕಲಿಕೆ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.
- ಡಾ. ಪಿ. ಮಹಾದೇವಯ್ಯ : ೨೦೦೯, ಕನ್ನಡ ಭಾಷೆಯ ಕಲಿಕೆಯ ಸಮಸ್ಯೆಗಳು, ಪ್ರಾಥಮಿಕ ಶಾಲೆಯ ಉರ್ದುಭಾಷಿಕ ಮಕ್ಕಳನ್ನು ಅನುಲಕ್ಷಿಸಿ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.
- ,, : ೨೦೦೬, ಕನ್ನಡ ಬಳಕೆ ಸಾಮಾಜಿಕ ವಿನ್ಯಾಸ, ವಿಜಯಲಕ್ಷ್ಮಿ ಪ್ರಕಾಶನ, ಮೈಸೂರು.
- ಡಾ. ಮಹಾಬಲೇಶ್ವರ ರಾವ್ : ೨೦೧೦, ಪ್ರಾಥಮಿಕ ಶಾಲೆಗಳಲ್ಲಿ ಕನ್ನಡ ಬೋಧನೆ, ನವಕರ್ನಾಟಕ ಪ್ರಕಾಶನ.

- ,, : ೨೦೧೦, ಪ್ರೌಢಶಾಲೆಗಳಲ್ಲಿ ಕನ್ನಡ ಬೋಧನೆ, ನವಕರ್ನಾಟಕ ಪ್ರಕಾಶನ.
- ಡಾ. ವ್ಹಿ. ಜಿ. ಪೂಜಾರ : ೨೦೦೮, ಕನ್ನಡ ವ್ಯಾಕರಣ ಮತ್ತು ಭಾಷೆ, ಚೇತನ ಪ್ರಕಾಶನ, ಗುಲಬರ್ಗ.
- ಡಾ. ವಿಲ್ಯಂ ಮಾಡ್ತ : ೧೯೯೮, ಕನ್ನಡ ವ್ಯಾಕರಣ ಸಮಸ್ಯೆಗಳು ಭಾಷಾವೈಜ್ಞಾನಿಕ ವಿಶ್ಲೇಷಣೆ, ವಿದ್ಯಾನಿಧಿ ಪ್ರಕಾಶನ ಗದಗ.
- ಡಾ. ಸಂಗಮೇಶ ಸೌದತ್ತಿಮಠ : ೨೦೦೬, ದ್ರಾವಿಡ ಭಾಷಾ ವ್ಯಾಸಂಗ, ರೂಪರಶ್ಮಿ ಪ್ರಕಾಶನ, ಕಲಬುರ್ಗಿ.
- ಡಾ. ಸಾಂಬಮೂರ್ತಿ : ೨೦೧೦, ಕನ್ನಡ ಕ್ರಿಯಾರಚನೆ – ಬಗೆಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.
- ,, : ೨೦೦೬, ಕನ್ನಡದಲ್ಲಿ ಪ್ರತ್ಯಯಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.
- ,, : ೨೦೦೯, ಭಾಷಾತಂತ್ರಜ್ಞಾನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.
- ,, : ೨೦೦೦, ನಿಷೇಧಾರ್ಥ ಪದಕೋಶ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.
- ,, : ೨೦೦೪, ಭಾಷೆ ಮತ್ತು ಅಶಾಬ್ದಿಕ ಸಂವಹನ, ಸಿ.ವಿ.ಜಿ ಪಬ್ಲಿಕೇಶನ್, ಬೆಂಗಳೂರು.
- ಡಾ. ಸೋಮಶೇಖರಗೌಡ : ೨೦೧೦, ಭಾಷೆ ರಚನೆ ಮತ್ತು ಬಳಕೆ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.
- ಡಿ. ಎನ್. ಶಂಕರ ಭಟ್ : ೧೯೯೫, ಕನ್ನಡ ಭಾಷೆಯ ಕಲ್ಪಿತ ಚರಿತ್ರೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.
- ,, : ೨೦೦೯, ಕನ್ನಡ ಬರಹವನ್ನು ಸರಿಪಡಿಸೋಣ, ಬಾಶಾ ಪ್ರಕಾಶನ ಹೆಗ್ಗೋಡು, ಸಾಗರ.

- ,, : ೨೦೦೫, ನಿಜಕ್ಕೂ ಹಳೆಗನ್ನಡ ವ್ಯಾಕರಣ ಎಂತಹದು?, ಭಾಷಾ ಪ್ರಕಾಶನ ರೂಪಾನಗರ, ಮೈಸೂರು.
- ,, : ೨೦೦೮, ಮಾತಿನ ಒಳಗುಟ್ಟು, ಬಾಶಾ ಪ್ರಕಾಶನ ಹೆಗ್ಗೋಡು, ಸಾಗರ.
- ,, : ೨೦೧೦, ಕನ್ನಡ ಬರಹದ ಸೊಲ್ಲರಿಮೆ – ೧, ಬಾಶಾ ಪ್ರಕಾಶನ ಹೆಗ್ಗೋಡು, ಸಾಗರ.
- ,, : ೨೦೦೯, ಕನ್ನಡ ನುಡಿ ನಡೆದು ಬಂದ ದಾರಿ, ಬಾಶಾ ಪ್ರಕಾಶನ, ಹೆಗ್ಗೋಡು, ಸಾಗರ.
- ,, : ೨೦೦೯, ಕನ್ನಡ ವ್ಯಾಕರಣ ಯಾಕೆ ಬೇಕು?, ಬಾಶಾ ಪ್ರಕಾಶನ ಹೆಗ್ಗೋಡು, ಸಾಗರ.
- ,, : ೨೦೦೬, ಕನ್ನಡ ನುಡಿಯ ಬಗೆಗೆ ಚಿಂತನೆ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು.
- ,, : ೧೯೯೯, ಕನ್ನಡ ಪದಗಳ ಒಳರಚನೆ, ಬಾಶಾ ಪ್ರಕಾಶನ, ಮೈಸೂರು.
- ,, : ೧೯೭೦, ಭಾಷೆಯ ಬಗೆಗೆ ನೀವೇನು ಬಲ್ಲಿರಿ?, ಬಾಶಾ ಪ್ರಕಾಶನ, ಮೈಸೂರು.
- ,, : ೨೦೦೮, ಇಂಗ್ಲಿಶ್ ಪದಗಳಿಗೆ ಕನ್ನಡದ್ದೇ ಪದಗಳು, ಬಾಶಾ ಪ್ರಕಾಶನ ಹೆಗ್ಗೋಡು, ಮೈಸೂರು.
- **ಡಿ. ಎಸ್. ಇ. ಆರ್. ಟಿ** : ೨೦೦೫, ಚೈತನ್ಯ – ೨ ಶಿಕ್ಷಕರ ಸಾಹಿತ್ಯ, ಕನ್ನಡ, ನಿರ್ದೇಶಕರು ಪಠ್ಯಪುಸ್ತಕ ನಿರ್ದೇಶನಾಲಯ, ಬೆಂಗಳೂರು.
- ,, : ಬೆಳ್ಳಿ ಚುಕ್ಕಿ – ೨ ನಲಿ – ಕಲಿ ಸಾಹಿತ್ಯ, ಸರ್ವ ಶಿಕ್ಷಣ ಅಭಿಯಾನ ಬೆಂಗಳೂರು.
- **ಪಂಡಿತ ಡಿ. ರೇವಣಪ್ಪ** : ೧೯೭೦, ಪ್ರಾಥಮಿಕ ಕನ್ನಡ ಭಾಷಾ ಬೋಧನೆ, ಶ್ರೀ ಗುರುದೇವ ಪ್ರಿಂಟರ್ಸ್, ಚಿತ್ರದುರ್ಗ.

- ಪ್ರೊ. ಟಿ. ಕೇಶವಭಟ್ಟ : ೨೦೦೩, ವಾಗ್ಭೂಷಣ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.
- ಪ್ರೊ. ಟಿ. ವಿ. ವೆಂಕಟಾಚಲ ಶಾಸ್ತ್ರೀ, ಪ್ರೊ. ಜಿ. ಆರ್. ಲಕ್ಷ್ಮಣರಾವ್ : ೨೦೧೦, ಕನ್ನಡ ಬರವಣಿಗೆ : ದೋಷಗಳು, ದೌರ್ಬಲ್ಯಗಳು, ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ, ಮೈಸೂರು.
- ಬಿ. ವಿ. ರಮಣ : ೧೯೯೦, ಕನ್ನಡ ನುಡಿ ಬೋಧನೆ, ಸರ್ವೋದಯ ಬುಕ್ ಡಿಪೋ ಚಿಕ್ಕಪೇಟೆ, ವಿರಾಜಪೇಟೆ.
- ಬೇದ್ರೆ ಮಂಜುನಾಥ : ೨೦೦೮, ಆಡಿ ಕಲಿಯೋಣ ಕನ್ನಡ, ನವಕರ್ನಾಟಕ ಪ್ರಕಾಶನ.
- ರಂಗನಾಥ ಕಂಟನಕುಂಟೆ : ೨೦೧೧, ಜನರವ್ಯಾಕರಣ, ಕೆ. ಎಸ್. ಮುದ್ದಪ್ಪ ಸ್ಮಾರಕ ಟ್ರಸ್ಟ್–ಕೃಷ್ಣಾಪುರದೊಡ್ಡಿ, ಬೆಂಗಳೂರು.
- ರಾ. ಅನಂತರಾಮು : ೧೯೮೯, ಕನ್ನಡ ಭಾಷಾ ಬೋಧನೆ, ಚೇತನ ಬುಕ್‌ಹೌಸ್, ಮೈಸೂರು.
- ಲಿಂಗದೇವರು ಹಳೆಮನೆ (ಸಂ) : ೨೦೧೦, ಕನ್ನಡ ಭಾಷಾಧ್ಯಯನ ಅರುಹು ಕುರುಹು ಪ್ರಕಾಶನ, ಮೈಸೂರು–೨೩.
- ಸಾರ್ವಜನಿಕ ಶಿಕ್ಷಣ ಇಲಾಖೆ : ೨೦೧೧, ಚಿಣ್ಣರ ಅಂಗಳ – ೧ ಶಿಕ್ಷಕರ ಕೈಪಿಡಿ, ಸರ್ವ ಶಿಕ್ಷಣ ಅಭಿಯಾನ–ಕರ್ನಾಟಕ.
- ,, : ೨೦೧೧, ಚಿಣ್ಣರ ಅಂಗಳ – ೨ ಕನ್ನಡ ಮತ್ತು ಇಂಗ್ಲಿಷ್, ಮಕ್ಕಳ ಅಭ್ಯಾಸ ಪುಸ್ತಕ, ಸರ್ವ ಶಿಕ್ಷಣ ಅಭಿಯಾನ.
- ಸಂಕ್ಷಿಪ್ತ ಕನ್ನಡ ನಿಘಂಟು (ಪರಿಷ್ಕೃತ) : ೨೦೦೧, ಕನ್ನಡ ಸಾಹಿತ್ಯ ಪರಿಷತ್ತು ಚಾಮರಾಜಪೇಟೆ ಬೆಂಗಳೂರು.

# ಲೇಖನಗಳು


- ಎಂ. ಮರಿಯಪ್ಪಭಟ್ಟ : ೧೯೪೭, ಸಪ್ತಮೀ ವಿಭಕ್ತಿ, ಪ್ರಬುದ್ಧ ಕರ್ಣಾಟಕ, ಸಂಪುಟ ೨೯, ಸಂಚಿಕೆ ೧, ಸರ್ವಜಿತ್ ಸಂವತ್ಸರ ೧೧೧ ವಿನಾಯಕನ ಸಂಚಿಕೆ, ಮೈಸೂರು, ವಿಶ್ವವಿದ್ಯಾಲಯ, ಮೈಸೂರು.
- ,, : ೧೯೪೬, ಮಹಾಪ್ರಾಣಗಳು, ಪ್ರಬುದ್ಧ ಕರ್ಣಾಟಕ, ಸಂಪುಟ ೨೮, ಸಂಚಿಕೆ ೩, ವ್ಯಯ ಸಂವತ್ಸರ, ೧೦೮ ದೀಪಾವಳಿ ಸಂಚಿಕೆ, ಮೈಸೂರು ವಿಶ್ವವಿದ್ಯಾಲಯ ಮೈಸೂರು.
- ಎಸ್. ವಿ. ಶ್ರೀನಿವಾಸರಾವ್ : ೧೯೪೫, ಅಕ್ಷರ ಪ್ರಚಾರದ ಹುಟ್ಟು – ಬೆಳವಣಿಗೆ, ಪ್ರಬುದ್ಧ ಕರ್ಣಾಟಕ, ಸಂಪುಟ ೨೭, ಸಂಚಿಕೆ ೧, ಪಾರ್ಥಿವ ಸಂವತ್ಸರ ೧೦೩, ವಿನಾಯಕ ಸಂಚಿಕೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು.
- ಕೆ. ಕುಶಾಲಪ್ಪಗೌಡ : ೧೯೭೨, ದ್ವಿತೀಯಾ ವಿಭಕ್ತಿ, ಪ್ರಬುದ್ಧ ಕರ್ಣಾಟಕ, ಸಂಪುಟ ೫೪, ಸಂಚಿಕೆ ೩, ಪರೀಧಾವಿ ಸಂವತ್ಸರ ಆಶ್ವಯುಜ ಸಂಚಿಕೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು.
- ,, : ೧೯೭೪, ಚತುರ್ಥೀ ವಿಭಕ್ತಿ, ಪ್ರಬುದ್ಧ ಕರ್ಣಾಟಕ, ಸಂಪುಟ ೫೫, ಸಂಚಿಕೆ ೪, ಪ್ರಮಾದೀಚ ಸಂವತ್ಸರ ೨೧೮ ಪುಷ್ಯ ಸಂಚಿಕೆ, ಪ್ರಸಾರಾಂಗ ಮೈಸೂರು ವಿಶ್ವವಿದ್ಯಾಲಯ, ಮೈಸೂರು.
- ,, : ೧೯೭೫, ಷಷ್ಠೀ ವಿಭಕ್ತಿ, ಪ್ರಬುದ್ಧ ಕರ್ಣಾಟಕ, ಸಂಪುಟ ೫೬, ಸಂಚಿಕೆ ೪, ಆನಂದ ಸಂವತ್ಸರ ೨೨೨ ಪಾಲ್ಗುಣ ಸಂಚಿಕೆ, ಮೈಸೂರು ವಿಶ್ವವಿದ್ಯಾಲಯ ಮೈಸೂರು.
- ,, : ೧೯೭೪, ಪಂಚಮಿ ವಿಭಕ್ತಿ, ಪ್ರಬುದ್ಧ ಕರ್ಣಾಟಕ, ಸಂಪುಟ ೫೬, ಸಂಚಿಕೆ ೧, ಆನಂದ ಸಂವತ್ಸರ, ೨೧೬ ಆಷಾಢ ಸಂಚಿಕೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು.
- ,, : ೧೯೬೮, ಕನ್ನಡದಲ್ಲಿ ವರ್ತಮಾನ ಕ್ರಿಯೆ, ಪ್ರಬುದ್ಧ ಕರ್ಣಾಟಕ ಸಂಪುಟ ೫೦, ಸಂಚಿಕೆ ೨, ಕೀಲಕ ಸಂವತ್ಸರ ೧೯೬ ಆಷಾಢ ಸಂಚಿಕೆ, ಮೈಸೂರು ವಿಶ್ವವಿದ್ಯಾಲಯ ಮೈಸೂರು.

- **ಕೆ. ವಿ. ನಾರಾಯಣ (ಸಂ)** : ೨೦೦೭, <u>ಕನ್ನಡ ವ್ಯಾಕರಣ ಪರಂಪರೆ</u>, ಕನ್ನಡ ವಿಶ್ವವಿದ್ಯಾಲಯ ವಿಶ್ವಕೋಶ ೧ ಭಾಷೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.
- **ಜಿ. ಎಸ್. ಶಿವರುದ್ರಪ್ಪ (ಸಂ)** : ೧೯೭೯, <u>ಮಹಾಪ್ರಾಣಗಳು</u>, ಸಾಧನೆ (ತ್ರೈಮಾಸಿಕ ಪತ್ರಿಕೆ), ಸಂಪುಟ ೮, ಸಂಚಿಕೆ ೪, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.
- **ಡಾ. ಎಂ. ಎಸ್. ಸುಂಕಾಪುರ (ಸಂ)** : ೧೯೮೦, <u>ಕಾರಕ ಮತ್ತು ವಿಭಕ್ತಿ</u>, ಕರ್ನಾಟಕ ಭಾರತಿ, ಸಂಪುಟ ೪೧, ಸಂಚಿಕೆ ೩, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.
- ,, (ಸಂ) : ೧೯೭೮, <u>ಕನ್ನಡದಲ್ಲಿ ಸಂಬೋಧನೆ,</u> ಕರ್ನಾಟಕ ಭಾರತಿ (ತ್ರೈಮಾಸಿಕ ಪತ್ರಿಕೆ), ಸಂಕ್ರಮಣ ಸಂಚಿಕೆ, ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ.
- **ಡಾ. ಕೆ. ಕೆಂಪೇಗೌಡ** : ೧೯೮೫, <u>ಕನ್ನಡ ಸಂಖ್ಯಾವಾಚಿಗಳು</u>, ಪ್ರಬುದ್ಧ ಕರ್ಣಾಟಕ, ಸಂಪುಟ ೬೨, ಸಂಚಿಕೆ ೧, ಕ್ರೋಧನ ಸಂವತ್ಸರ ೨೬೩ ಚೈತ್ರ ಸಂಚಿಕೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು.
- ,, : ೧೯೮೫, <u>ಕನ್ನಡ ಸರ್ವನಾಮಗಳು</u>, ಪ್ರಬುದ್ಧ ಕರ್ಣಾಟಕ, ಸಂಪುಟ ೬೭, ಸಂಚಿಕೆ ೩, ಕ್ರೋಧನ ಸಂವತ್ಸರ ೨೬೭ ಆಶ್ವಯುಜ ಸಂಚಿಕೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು.
- ,, : ೧೯೮೯, <u>ವ್ಯಾಕರಣಶಾಸ್ತ್ರ</u>, ಪ್ರಬುದ್ಧ ಕಾರ್ಣಾಟಕ, ಸಂಪುಟ ೭೧, ಸಂಚಿಕೆ ೨, ಶ್ರೀಶುಕ್ಲ ಸಂವತ್ಸರ, ೨೮೦ ಆಷಾಢ ಸಂಚಿಕೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು.
- **ಡಾ. ಕೃಷ್ಣ ಕೊಲ್ಹಾರ ಕುಲಕರ್ಣಿ (ಸಂ)** : ೨೦೦೮, <u>ಈಗ ನಾವು ಮಾತನಾಡುವಾಗ ಭಾಷೆಗೆ ವ್ಯಾಕರಣವನ್ನು ಹೇಗೆ ರಚಿಸಬೇಕು</u>, ನಾ. ರಾಜಪುರೋಹಿತರ ಸಂಶೋಧನ ಲೇಖನಗಳು (೧೮೮೭–೧೯೫೩) ಕನ್ನಡ ಸಂಸ್ಕೃತಿ ಇಲಾಖೆ, ಬೆಂಗಳೂರು.
- **ಡಾ. ಚಿಕ್ಕೆರೆ ಶಿವಶಂಕರ, ಪ್ರೊ. ಅಬ್ದುಲ್ ಬಷೀರ್** (ಸಂ) : ೨೦೦೨, <u>'ಋ' ಒಂದು ಟಿಪ್ಪಣಿ</u>, ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ, ಸಂಪುಟ ೮೦, ಸಂಚಿಕೆ ೨, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

- ,, ,, (ಸಂ) : ೨೦೦೩, 'ಋ' ಒಂದು ಅನಿಸಿಕೆ, ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ, ಸಂಪುಟ ೮೧, ಸಂಚಿಕೆ ೨, ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು.
- **ಡಾ. ಟಿ. ವಿ. ವೆಂಕಟಾಚಲ ಶಾಸ್ತ್ರೀ** : ೧೯೯೯, ಕನ್ನಡ ವ್ಯಾಕರಣ ಸಾಹಿತ್ಯ, ಶಾಸ್ತ್ರೀಯ – ೧ ಶಬ್ದಾರ್ಥ ವಿಚಾರ – ಗ್ರಂಥ ಸಂಪಾದನೆ ಭಾಷೆ – ವ್ಯಾಕರಣ ನಿಘಂಟು ಸಾಹಿತ್ಯ – ನಿಘಂಟು ರಚನೆ, ಸಪ್ನ ಬುಕ್ ಹೌಸ್, ಬೆಂಗಳೂರು.
- ,, : ೨೦೦೮, ಕನ್ನಡ ಭಾಷಾಬೋಧನೆಯ ತಂತ್ರಗಳು, ಸಾಹಿತ್ಯ ಕಲ್ಪ (ಶಾಸ್ತ್ರೀಯ ಸಂಪುಟ ಎಂಟು) ಲೇಖನಗಳು, ಭಾಷಣಗಳು, ಪೀಠಿಕೆಗಳು– ಮುನ್ನುಡಿಗಳು, ಸಪ್ನ ಬುಕ್ ಹೌಸ್ ಬೆಂಗಳೂರು.
- ,, : ೨೦೦೮, ಸಮಕಾಲೀನ ಕನ್ನಡ ವ್ಯಾಕರಣ ತಯಾರಿಕೆ, ಸಾಹಿತ್ಯ ಸನ್ನಿಧಿ (ಶಾಸ್ತ್ರೀಯ ಸಂಪುಟ ಏಳು) ಲೇಖನಗಳು, ಭಾಷಣಗಳು, ಪೀಠಿಕೆಗಳು–ಮುನ್ನುಡಿಗಳು, ಸಪ್ನ ಬುಕ್ ಹೌಸ್, ಬೆಂಗಳೂರು.
- **ಡಾ. ಬಿ. ಬಿ. ರಾಜಪುರೋಹಿತ ಮೈಸೂರು** : ಹೊಸಗನ್ನಡಕ್ಕೆ ಸಮಗ್ರ ವ್ಯಾಕರಣ (ಅಪ್ರಕಟಿತ)
- **ಡಾ. ಸಿ. ಎಸ್. ರಾಮಚಂದ್ರ** : ೧೯೯೧–೧೯೯೨, ಕನ್ನಡದಲ್ಲಿ – 'ಗಳು' ಬಹುವಚನ ಪ್ರತ್ಯಯಗಳು, ಪ್ರಬುದ್ಧ ಕರ್ಣಾಟಕ, ಸಂಪುಟ ೭೨, ಸಂಚಿಕೆ ೩ – ೪ (ಸಂಯುಕ್ತ) ೨೬೫ – ೨೬೬ ಶ್ರೀಪ್ರಮೋದ ಸಂವತ್ಸರ, ಆಶ್ವಯುಜ–ಪುಷ್ಯ ಸಂಚಿಕೆ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ ಮೈಸೂರು.
- **ರಹಮತ್ ತರೀಕೆರೆ (ಸಂ)** : ೨೦೦೧, ಕನ್ನಡದಲ್ಲಿ ವ್ಯಾಕರಣ ಅಧ್ಯಯನ, ಕನ್ನಡ ಅಧ್ಯಯನ ಮಳೆ ಸಂಚಿಕೆ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ.
- ,, (ಸಂ) : ೧೯೯೯, ಕನ್ನಡದಲ್ಲಿ ಭಾಷಾಧ್ಯಯನ – ೨ (ಆಕರಸೂಚಿ), ಮಳೆ ಸಂಚಿಕೆ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

# ಪಿಎಚ್. ಡಿ. ಮಹಾಪ್ರಬಂಧಗಳು


- **ಉಷಾರಾಣಿ ಆರ್** : ೨೦೦೪, ಕನ್ನಡ ಕ್ರಿಯಾಪದಗಳು : ಒಂದು ಅಧ್ಯಯನ, ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ.
- **ಗಿರಿಜಮ್ಮ ಎಂ. ವಿ** : ೨೦೦೭, ಮಕ್ಕಳಲ್ಲಿ ಭಾಷಾ ಕಲಿಕೆ, ಮೈಸೂರು ವಿಶ್ವವಿದ್ಯಾಲಯ ಮೈಸೂರು.
- **ಡಾ. ಆರ್. ಚಲಪತಿ** : ೨೦೧೦, ಪಠ್ಯಪುಸ್ತಕಗಳು ಮತ್ತು ಸಾಂಸ್ಕೃತಿಕ ರಾಜಕಾರಣ, ಪ್ರಗತಿ ಗ್ರಾಫಿಕ್ಸ್, ಬೆಂಗಳೂರು.(ಪ್ರಕಟಿತ)
- **ಭೀಮಣ್ಣ ಮೇಟಿ** : ೨೦೦೮, ಕನ್ನಡ ಭಾಷೆಯ ಕಲಿಕೆಯ ಸಮಸ್ಯೆಗಳು (ಗುಲ್ಬರ್ಗ ಜಿಲ್ಲೆಯ ಉರ್ದು ಭಾಷಿಕ ಪ್ರೌಢಶಾಲಾ ಮಕ್ಕಳನ್ನು ಅನುಲಕ್ಷಿಸಿ), ಕನ್ನಡ ವಿಶ್ವವಿದ್ಯಾಲಯ ಹಂಪಿ.
- **ರಾಮಭಟ್ ಪಿ** : ೧೯೭೬, ಕರ್ಣಾಟಕ ಶಬ್ದಾನುಶಾಸನ – ಶಬ್ದಮಣಿದರ್ಪಣ ಒಂದು ತೌಲನಿಕ ಅಧ್ಯಯನ, ಮೈಸೂರು ವಿಶ್ವವಿದ್ಯಾಲಯ ಮೈಸೂರು.
- **ವಾಗೀಶ್ ಎನ್. ಎಂ** : ೨೦೦೯, ಪ್ರಾಥಮಿಕ ಹಂತದ ಕನ್ನಡ ಭಾಷಾ ಪಠ್ಯಪುಸ್ತಕಗಳ ಭಾಷಿಕ ಮತ್ತು ಶೈಕ್ಷಣಿಕ ಅಧ್ಯಯನ, ಕನ್ನಡ ವಿಶ್ವವಿದ್ಯಾಲಯ ಹಂಪಿ.
- **ವೆಂಕಟರಾಮಪ್ಪ ಕೆ** : ೧೯೬೯, ಕುಮಾರವ್ಯಾಸನ ವ್ಯಾಕರಣ, ಮೈಸೂರು ವಿಶ್ವವಿದ್ಯಾಲಯ ಮೈಸೂರು.
- **ಸೋಮಕ್ಕ ಎಂ** : ೨೦೦೯, ಲಂಬಾಣಿ ಮಕ್ಕಳ ಕಲಿಕಾ ಸಮಸ್ಯೆಗಳು (ಬಳ್ಳಾರಿ ಮತ್ತು ಕೊಪ್ಪಳ ಜಿಲ್ಲೆಯ ಮಕ್ಕಳನ್ನು ಅನುಲಕ್ಷಿಸಿ) ಕನ್ನಡ ವಿಶ್ವವಿದ್ಯಾಲಯ ಹಂಪಿ.

## ಎಂ.ಫಿಲ್ ಪ್ರಬಂಧಗಳು

- ಚಂದ್ರಶೇಖರ ಆರಾಧ್ಯ : ೨೦೦೭, ವ್ಯಾಕರಣ ಶಾಸ್ತ್ರದಲ್ಲಿ ಕಾರಕ, ಕುವೆಂಪು ವಿಶ್ವವಿದ್ಯಾಲಯ ಶಿವಮೊಗ್ಗ.
- ತಿಪ್ಪನಾಯಕ್ ಎಸ್. ಪಿ : ೨೦೦೯, ಕನ್ನಡ ಸಂಧಿ ಸಮಸ್ಯೆಯ ಸ್ವರೂಪ, ಕನ್ನಡ ವಿಶ್ವವಿದ್ಯಾಲಯ ಹಂಪಿ.
- ರಾಘವೇಂದ್ರ ಯು. ಜೆ : ೨೦೦೬, ೯ನೇ ತರಗತಿ ವಿದ್ಯಾರ್ಥಿಗಳ ಕನ್ನಡ ಭಾಷಾ ಓದುಗಾರಿಕೆಯ ವೇಗ ಮತ್ತು ಶೈಕ್ಷಣಿಕ ಸಾಧನೆಯ ನಡುವಿನ ಸಹಸಂಬಂಧದ ಅಧ್ಯಯನ, ಕುವೆಂಪು ವಿಶ್ವವಿದ್ಯಾಲಯ.
- ರಾಜ ಕೆ : ಪ್ರಾಥಮಿಕ ಶಾಲಾ ಶಿಕ್ಷಣದ ಗುಣಮಟ್ಟವನ್ನು ಹೆಚ್ಚಿಸುವಲ್ಲಿ ಸಮೂಹ ಸಂಪನ್ಮೂಲ ವ್ಯಕ್ತಿಗಳು ನಿರ್ವಹಿಸುತ್ತಿರುವ ಕಾರ್ಯಗಳ ಬಗ್ಗೆ ಪ್ರಾಥಮಿಕ ಶಾಲಾ ಶಿಕ್ಷಕರು ಹೊಂದಿರುವ ಅಭಿಪ್ರಾಯಗಳ ಒಂದು ಅಧ್ಯಯನ, ಕುವೆಂಪು ವಿಶ್ವವಿದ್ಯಾಲಯ.
- ಸಿದ್ದಲಿಂಗಪ್ಪ ದೇಶಮುಖ್ ಎಸ್ : ೨೦೦೮, ಪ್ರೌಢಶಾಲಾ ಮಕ್ಕಳ ಕನ್ನಡದ ಬಳಕೆಯಲ್ಲಿ ಕಾಗುಣಿತ ದೋಷಗಳು, ಬಿ. ಎಂ. ಶ್ರೀ ಸ್ಮಾರಕ ಪ್ರತಿಷ್ಠಾನ, ಬೆಂಗಳೂರು.

# ಎಂ.ಇಡಿ. ಪದವಿಯ ಕಿರುಪ್ರಬಂಧಗಳು

- **ಮೀನಾ ಪಿ. ಟಿ :** ೨೦೦೯, ೭ನೇ ತರಗತಿಯ ಕನ್ನಡ ಮತ್ತು ಇಂಗ್ಲಿಷ್ ಮಾಧ್ಯಮದ ವಿದ್ಯಾರ್ಥಿಗಳು ಕನ್ನಡ ಬರವಣಿಗೆಯಲ್ಲಿ ಮಾಡುವ ಕಾಗುಣಿತ ದೋಷಗಳ ಅಧ್ಯಯನ ಮತ್ತು ನಿವಾರಣೋಪಾಯಗಳ ಮೌಲ್ಯ ನಿರ್ಧಾರ, ಕುವೆಂಪು ವಿಶ್ವವಿದ್ಯಾಲಯ.
- **ರವೀಂದ್ರ ಗ ಕರ್ಜಗಿ :** ೨೦೦೫, ಏಳನೆಯ ತರಗತಿಯ ಕನ್ನಡ ಮಾಧ್ಯಮ ಮತ್ತು ಆಂಗ್ಲ ಮಾಧ್ಯಮ ವಿದ್ಯಾರ್ಥಿಗಳು ಕನ್ನಡದ ಸಂಯುಕ್ತಾಕ್ಷರಗಳಲ್ಲಿ ಮಾಡುವ ಸ್ಖಾಲಿತ್ಯಗಳ ತೌಲನಿಕ
  ಅಧ್ಯಯನ, ಕುವೆಂಪು ವಿಶ್ವವಿದ್ಯಾಲಯ.
- **ವಿಶಾಲ ಎಂ. ಆರ್ :** ೨೦೦೭, ಆರನೇ ತರಗತಿಯ ಕನ್ನಡ ಮಾಧ್ಯಮ ಮತ್ತು ಆಂಗ್ಲ ಮಾಧ್ಯಮದ ವಿದ್ಯಾರ್ಥಿಗಳು ಕನ್ನಡ ಕಾಗುಣಿತಾಕ್ಷರಗಳಲ್ಲಿ ಮಾಡುವ ದೋಷಗಳ ಒಂದು ಅಧ್ಯಯನ, ಕುವೆಂಪು ವಿಶ್ವವಿದ್ಯಾಲಯ.
- **ಶಶಿ ಜಿ. ಹೆಚ್ :** ೨೦೦೭, ೮ನೇ ತರಗತಿಯ ಕನ್ನಡ ಮತ್ತು ಇಂಗ್ಲಿಷ್ ಮಾಧ್ಯಮ ವಿದ್ಯಾರ್ಥಿಗಳ ಕನ್ನಡ ವ್ಯಾಕರಣ ಕಲಿಕೆಯ ಹೋಲಿಕೆ ಅಧ್ಯಯನ, ಕುವೆಂಪು ವಿಶ್ವವಿದ್ಯಾಲಯ.
- **ಶ್ರೀಮತಿ ವಿದ್ಯಾವತಿ ಬ ಅಕ್ಕಿ :** ೨೦೧೦, ಗದಗ ನಗರದ ೮ನೇ ತರಗತಿಯ ಪ್ರಥಮ ಭಾಷೆಯಾಗಿ ಕನ್ನಡ ಓದುತ್ತಿರುವ ಕನ್ನಡ ಮಾಧ್ಯಮ ಮತ್ತು ಆಂಗ್ಲ ಮಾಧ್ಯಮದ ವಿದ್ಯಾರ್ಥಿಗಳು ಕನ್ನಡ ಕಾಗುಣಿತಗಳಲ್ಲಿ ಮಾಡುವ ದೋಷಗಳ ಒಂದು ತೌಲನಿಕ ಅಧ್ಯಯನ, ಕುವೆಂಪು ವಿಶ್ವವಿದ್ಯಾಲಯ.
- **ಸವಿತ ಹೆಚ್. ಎಸ್ :** ೨೦೦೯, ೮ನೇ ತರಗತಿಯ ಕನ್ನಡ ಭಾಷಾ ವ್ಯಾಕರಣದ ನೈಧಾನಿಕ ಪರೀಕ್ಷೆಯ ಒಂದು ತಯಾರಿಕೆ, ಕುವೆಂಪು ವಿಶ್ವವಿದ್ಯಾಲಯ.

## ವ್ಯಾಕರಣ ಕೃತಿಗಳು


- **ಆಯ್. ಎಸ್. ಅರಳಗುಪ್ಪಿ** : ೧೯೯೬, ಸಮಗ್ರ ಹೊಸಗನ್ನಡ ವ್ಯಾಕರಣ, ಸಮಾಜ ಪುಸ್ತಕಾಲಯ, ಧಾರವಾಡ.
- **ಆರ್. ಎನ್. ಸೂರ್ಯನಾರಾಯಣ ಮತ್ತು ಕೊಣನೂರು ಅಹೋಬಲಶಾಸ್ತ್ರಿ** : ೧೯೩೫, ತಿಳಿಗನ್ನಡ ವ್ಯಾಕರಣ, ವರ್ಧಮಾನ ಪವರ್ ಪ್ರೆಸ್, ಮೈಸೂರು.
- **ಎಚ್. ಎಸ್. ಬಿಳಿಗಿರಿ** : ೧೯೭೦, ವರ್ಣನಾತ್ಮಕ ವ್ಯಾಕರಣ, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.
- **ಎನ್. ಬಿ. ವೀರನಗೌಡ** : ೨೦೦೭, ಸಿರಿಗನ್ನಡನುಡಿ ಕನ್ನಡ ವ್ಯಾಕರಣಾಮೃತ ವರ್ಷಿಣಿ, ಜಯಂತ ಪ್ರಕಾಶನ, ತುರ್ಚಿಗುಂಡಿ, ಶಿಕಾರಿಪುರ ತಾ॥.
- **ಕೆ. ಆರ್. ಕೆ. ಮೂರ್ತಿ** : ಕನ್ನಡ ಬಾಲವ್ಯಾಕರಣ, ಜನಪದ ಪ್ರಕಾಶನ, ಬೆಂಗಳೂರು.
- **ಕೆ. ಕಾಂತ ರೈ ವಿದ್ವಾನ್** : ೧೯೫೫, ಪ್ರೌಢಶಾಲಾ ವ್ಯಾಕರಣ ಮತ್ತು ಛಂದೋಲಂಕಾರ, ನವಭಾರತ ಪುಸ್ತಕ ಭಂಡಾರ, ಉಡುಪಿ.
- **ಡಾ. ಎ. ಎನ್. ನರಸಿಂಹಯ್ಯ** : ಲೇಖಕರು, ಪರಿಷ್ಕರಣಕಾರರು : **ಡಾ. ಟಿ. ವಿ. ವೆಂಕಟಾಚಲ ಶಾಸ್ತ್ರೀ** : (ಮೊ ಮುದ್ರಣ: ೧೯೩೮) ೨೦೧೦, ಕನ್ನಡ ಪ್ರಥಮವ್ಯಾಕರಣ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.
- **ಡಾ. ಕೆ. ಗಣಪತಿ ಭಟ್, ಶೈಲಜ ಎಂ. ಭಟ್** : ೧೯೮೧, ಕನ್ನಡ ಸರಳವ್ಯಾಕರಣ, ಶ್ರೀರಾಮ ಪ್ರಕಾಶನ, ಬೆಂಗಳೂರು.
- **ಡಾ. ಗಣಪತಿ** : ೧೯೮೦, ಕನ್ನಡ ಸುಲಭವ್ಯಾಕರಣ, ಆರ್. ಎಂ. ಪ್ರಕಾಶನ ಜಯನಗರ, ಮೈಸೂರು.
- **ಡಾ. ಬಿ. ವಿ. ಮಹೀದಾಸ್** : ೨೦೦೪, ಕನ್ನಡ ವ್ಯಾಕರಣಗಳ ಹೊಸ ಸಮೀಕ್ಷೆ ಇತರ ಪ್ರಬಂಧಗಳು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.
- **ಡಾ. ವಿ. ಶಿವಾನಂದ (ಸಂ)** : ೧೯೭೬, ಕರ್ನಾಟಕ ಶಬ್ದಮಂಜರಿ, ವೀರಶೈವ ಅಧ್ಯಯನ ಸಂಸ್ಥೆ, ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನ ಮಠ ಡಂಬಳ.
- **ಡಿ. ಗಂಗರಾಜು** : ೧೯೬೬, ಹೊಸಗನ್ನಡ ವ್ಯಾಕರಣ ಮತ್ತು ವಾಕ್ಯರಚನೆ ಭಾಗ–೧, ಸೋಮೇಶ್ವರಪುರ, ತುಮಕೂರು.

- ತ. ಸು. ಶಾಮರಾಯ : ೨೦೧೧, ವ್ಯಾಕರಣ, ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ, ಮೈಸೂರು.
- ತೀ. ನಂ. ಶ್ರೀಕಂಠಯ್ಯ : ೨೦೦೮, ಕನ್ನಡ ಮಧ್ಯಮವ್ಯಾಕರಣ, ಗೀತಾ ಬುಕ್ ಹೌಸ್, ಮೈಸೂರು.
- ನಿ. ಗಿರಿಗೌಡ : ೧೯೭೫, ಕನ್ನಡ ವ್ಯಾಕರಣ, ಗೀತಾ ಬುಕ್ ಹೌಸ್, ಮೈಸೂರು.
- ಪಂಜೆ ಮಂಗೇಶರಾವ್ : ೧೯೦೫, ಕನ್ನಡ ಮೂಲ ವ್ಯಾಕರಣ, ಬಾಸೆಲ್ ಮಿಶನ್ ಪ್ರೆಸ್ ಮಂಗಳೂರು.
- ಪಂಡಿತ ಎಸ್. ಚಿಕ್ಕಣ್ಣ : ೧೯೫೫, ಸಿರಿಗನ್ನಡ ಪ್ರಥಮವ್ಯಾಕರಣ, ರಾಜ ಪವರ್ ಪ್ರೆಸ್, ಬೆಂಗಳೂರು.
- ಪಂಡಿತ ಎಸ್. ಚಿಕ್ಕಣ್ಣ : ೧೯೮೮, ಸಿರಿಗನ್ನಡ ಮಧ್ಯಮವ್ಯಾಕರಣ, ರಾಜ ಪವರ್ ಪ್ರೆಸ್, ಬೆಂಗಳೂರು.
- ಪಂಡಿತ ಜೆ. ಎ. ಕವಲಿ : ೧೯೫೬, ಕನ್ನಡ ವ್ಯಾಕರಣ–ವಿವಿಧ ಸಾಹಿತ್ಯ (೧೦ನೆಯ ತರಗತಿ) ರಾಮಾಶ್ರಯ ಬುಕ್ ಡಿಪೋ, ಧಾರವಾಡ.
- ಪಂಡಿತ ತಿರು. ಶ್ರೀನಿವಾಸಾಚಾರ್ಯ : ೧೯೪೯, ವ್ಯಾಕರಣ ಮತ್ತು ಪ್ರಬಂಧಸಾರ, ಮೋಹನ್ ಸ್ಟೋರ್ಸ್ ಮಧುಗಿರಿ, ತುಮಕೂರು ಜಿಲ್ಲೆ.
- ಪ್ರೊ. ಪಿ. ಶ್ರೀ ಕೃಷ್ಣಭಟ್ಟ : ೨೦೧೨, ಕನ್ನಡ ಸಾಂಪ್ರದಾಯಿಕ ವ್ಯಾಕರಣಗಳು, ಯಾಜಿ ಪ್ರಕಾಶನ, ಹೊಸಪೇಟೆ.
- ಪ್ರೊ. ಬಾಲಚಂದ್ರ ಜಯಶಟ್ಟಿ : ೨೦೦೫, ಪ್ರಾಯೋಗಿಕ ಕನ್ನಡ ವ್ಯಾಕರಣ, ಶ್ರೀ ಸಿದ್ದಲಿಂಗೇಶ್ವರ ಪ್ರಕಾಶನ, ಗುಲಬರ್ಗ.
- ಬಿ. ಎಂ. ಸಿದ್ದವೀರಯ್ಯ : ೧೯೭೫, ಕನ್ನಡ ಕೈಗನ್ನಡಿ (ಭಾಗ – ೨) ಫಿ. ಎಸ್. ಭಾವೀಕಟ್ಟಿ ಪಬ್ಲಿಷರ್ಸ್ ಗುಲಬರ್ಗ.
- ಬಿ. ಬಿ. ಪಾಟೀಲ : ೧೯೭೬, ವ್ಯಾಕರಣ ಲೋಕ, ವೀಣಾವಾಣಿ ಪ್ರಕಾಶನ, ಚಳ್ಳಕೆರೆ.
- ಬಿ. ಮಲ್ಲಪ್ಪ : ೧೯೧೬, ಶಬ್ದಾದರ್ಶ, ವೆಸ್ಲಿಯನ್ ಮಿಶನ್ ಪ್ರೆಸ್, ಮೈಸೂರು.
- ಮ. ಮಲ್ಲಪ್ಪ : ೧೯೭೧, ನುಡಿಗನ್ನಡಿ (ಪ್ರೌಢಶಾಲಾವ್ಯಾಕರಣ) ಜ್ಞಾನಕಿರಣ ಪ್ರಕಾಶನ ಹಲಗೂರು. (ಮಂಡ್ಯಜಿಲ್ಲೆ)

- **ಮಹಾದೇವ ಪ್ರಭಾಕರ ಪೂಜಾರ** : ೧೯೪೬, ಕನ್ನಡ ನುಡಿಗನ್ನಡಿ ಭಾಗ – ೧, ಮಲ್ಹಾರ ಗಣೇಶ ಪೂಜಾರ, ಧಾರವಾಡ.
- **ಮಹಾದೇವ ಪ್ರಭಾಕರ ಪೂಜಾರ** : ೧೯೪೬, ಕನ್ನಡ ನುಡಿಗನ್ನಡಿ ಭಾಗ – ೨, ಮಲ್ಹಾರ ಗಣೇಶ ಪೂಜಾರ, ಧಾರವಾಡ.
- **ಮಹಾದೇವ ಪ್ರಭಾಕರ ಪೂಜಾರ** : ೧೯೪೬, ಕನ್ನಡ ನುಡಿಗನ್ನಡಿ ಮತ್ತು ಛಂದೋಮಂಜರಿ, ಮಲ್ಹಾರ ಗಣೇಶ ಪೂಜಾರ, ಧಾರವಾಡ.
- **ವಿದ್ವಾನ್ ಜಿ. ಎಸ್. ಆದಿಶೇಷಯ್ಯ, ಪಂಡಿತ ಎ. ಜಿ. ಶ್ರೀನಿವಾಸ ರಾಘವಾಚಾರ್** : ೧೯೬೨, ಹೊಸಗನ್ನಡ ವ್ಯಾಕರಣ ಮತ್ತು ಪ್ರಬಂಧ ರಚನೆ, ಶ್ರೀ ದುರ್ಗಾ ಬುಕ್ ಸ್ಟಾಲ್, ಬೆಂಗಳೂರು.
- **ವಿದ್ವಾನ್ ರಂಗನಾಥಶರ್ಮ** : ೨೦೧೦, ಹೊಸಗನ್ನಡ ವ್ಯಾಕರಣ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.
- **ವಿದ್ವಾನ್ ರು. ನಾ. ಗುಂಡುರಾಮಯ್ಯ** : ೧೯೬೪, ವ್ಯಾಕರಣ ಚಂದ್ರಿಕೆ ಭಾಗ – ೩, ಸುದರ್ಶನಂ ಅಂಡ್ ಕಪಂನಿ, ಅವಿನ್ಯೂರಸ್ತೆ, ಬೆಂಗಳೂರು.
- **ವಿ. ರಾಜಮ್ಮ ಮತ್ತು ಗೌರಮ್ಮ** : ೧೯೫೫, ಹೊಸಗನ್ನಡ ವಾಕ್ಯರಚನೆ (ಮಾಧ್ಯಮಿಕ ಶಾಲೆಯ ಮೂರನೆಯ ತರಗತಿಗಾಗಿ) ಕೆ. ಸೀತರಾಮ್ ಸೆಟ್ಟಿ ಪಬ್ಲಿಷರ್, ಬೆಂಗಳೂರು.
- **ವಿ. ಸೀತರಾಮಯ್ಯ (ಸಂ)** : ೧೯೭೫, ವ್ಯಾಕರಣಗಳು, ಐ. ಬಿ. ಎಚ್. ಪ್ರಕಾಶನ, ಬೆಂಗಳೂರು.
- **ವೆಂಕಟ ರಂಗೋಕಟ್ಟಿ** : ೧೯೨೮, ಲಘುವ್ಯಾಕರಣ, ಎ. ಆರ್. ಶಿವನಾಗಪ್ಪ ವಾಗ್ವಿಲಾಸ ಬುಕ್‌ಡಿಪೋ, ಹುಬ್ಬಳ್ಳಿ.
- **ವೈ. ಸುಬ್ಬರಾವ್** : ೨೦೦೭, ಕನ್ನಡ ಮೊದಲನೆ ವ್ಯಾಕರಣ ಮತ್ತು ಕರ್ನಾಟಕ ವಾಕ್ಯ ರಚನಾಕ್ರಮ, ಆಧ್ಯಾತ್ಮ ಪ್ರಕಾಶಕಾರ್ಯಾಲಯ, ಹೊಳನರಸೀಪುರ.
- **ಶಂ. ಬಾ. ಜೋಶಿ** : ೧೯೭೧, ಕಂನುಡಿಯ ಹುಟ್ಟು, ಸಮಾಜ ಪುಸ್ತಕಾಲಯ ಧಾರವಾಡ.

- ಶ್ರೀ ಸೇಡಿಯಾಪು ಕೃಷ್ಣಭಟ್ಟರು : ೧೯೭೪, ಕನ್ನಡ ವರ್ಣಗಳು (ಪ್ರಥಮ ಭಾಗ) ಕನ್ನಡ ಸಂಶೊಧನೆ ಸಂಸ್ಥೆ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.
- ಹೊಸಗನ್ನಡ ವ್ಯಾಕರಣ : ೧೯೩೨, ಸರಕಾರಿ ಮುದ್ರಣಾಲಯ, ಬೆಂಗಳೂರು.

## ಪ್ರಾಥಮಿಕ ಮತ್ತು ಮಾಧ್ಯಮಿಕ ಶಾಲಾ ಹಂತದ
## ಕನ್ನಡ ಭಾಷಾ ಪಠ್ಯಪುಸ್ತಕಗಳು
### ಒಂದನೆ ತರಗತಿ


- ಎಂ. ಎನ್. ಕಾಮತ್ (ಸಂ) : ೧೯೩೭, ಕನ್ನಡ ಪದ್ಯ ಕಥಾವಳಿ, ಬಾಲ ಸಾಹಿತ್ಯ ಮಂಡಲ, ಮಂಗಳೂರು.
- ಎಂ. ರಾಮನ್ ನಂಬಯರ್, ಉಗ್ರಾಣ ಮಂಗೇಶ್‌ರಾವ್, ದಾಮೋದರ್ ಬಾಲಿಗ (ಸಂ) : ೧೯೩೯, ಕನ್ನಡ ನೂತನ ಪಾಠಮಾಲೆ (ಮೊದಲನೆ ಪುಸ್ತಕ) ಬಾಸೆಲ್ ಮಿಷನ್ ಪ್ರೆಸ್, ಮಂಗಳೂರು.
- ಕನ್ನಡ ಒಂದನೆಯ ಪುಸ್ತಕ : ೧೯೫೯, ಮೈಸೂರು ವಿದ್ಯಾ ಇಲಾಖೆ.
- ಕನ್ನಡ ಒಂದನೆಯ ಪುಸ್ತಕ : ೧೯೬೧, ಮೈಸೂರು ವಿದ್ಯಾ ಇಲಾಖೆ.
- ಕನ್ನಡ ಒಂದನೆಯ ಪುಸ್ತಕ : ೧೯೬೨, ಶಾರದ ಛಾಪಖಾನೆ, ಮಂಗಳೂರು.
- ಕನ್ನಡ ಒಂದನೆಯ ಪುಸ್ತಕ : ೧೯೭೬, ಸರಕಾರಿ ಪಠ್ಯಪುಸ್ತಕ ಮುದ್ರಣಾಲಯ, ಮೈಸೂರು.
- ಕನ್ನಡ ಮೊದಲನೆ ಪುಸ್ತಕ : ೧೯೨೮, ಬಾಸೆಲ್ ಮಿಷನ್ ಪ್ರೆಸ್, ಮಂಗಳೂರು.
- ಕನ್ನಡ ಕಲಿ–ನಲಿ : ೨೦೦೯, ಅಭ್ಯಾಸ ಸಹಿತ ಪಠ್ಯಪುಸ್ತಕ, ಒಂದನೆಯ ತರಗತಿ, ಕರ್ನಾಟಕ ಪಠ್ಯಪುಸ್ತಕ ಸಂಘ, ಬೆಂಗಳೂರು.
- ಕನ್ನಡ ಭಾರತಿ – ೧ : ೧೯೮೪, ಕರ್ನಾಟಕ ಸರಕಾರ ಪಠ್ಯಪುಸ್ತಕಗಳ ಇಲಾಖೆ, ಮೈಸೂರು.
- ಕನ್ನಡ ವಾಚನಮಾಲೆ ಚಿಕ್ಕಮಕ್ಕಳ ಪುಸ್ತಕ : ೧೯೫೦, ಮುಂಬಯಿ ರಾಜ್ಯದ ವಿದ್ಯಾಖಾತೆಯಿಂದ ಪ್ರಕಟವಾದುದು.
- ಕನ್ನಡ ವಾಚನ ಮಾಲೆ ಮೊದಲನೆಯ ಪುಸ್ತಕ : ೧೯೫೪, ಮುಂಬಯಿ ರಾಜ್ಯದ ವಿದ್ಯಾಖಾತೆಯಿಂದ ಪ್ರಕಟವಾದುದು.
- ಕೆ. ಶ್ರೀನಿವಾಸ ಕಿಣಿ, ಎಂ. ಎನ್. ಕಾಮತ್ (ಸಂ) : ೧೯೩೭, ಕನ್ನಡ ಬಾಲಶಿಕ್ಷೆ, (ಮೊದಲನೆಯ ತರಗತಿಯವರಿಗೋಸ್ಕರ) ಬಾಸೆಲ್ ಮಿಷನ್ ಪ್ರೆಸ್, ಮಂಗಳೂರು.

- **ಬಾಲಾ ಕಥಾವಳಿ** : ೧೯೧೬, (ಒಂದನೇ ತರಗತಿಗೆ) ಆಲಿಬಾಬನ ಕಥೆ, ಬಾಸೆಲ್ ಮಿಷನ್ ಪ್ರೆಸ್, ಮಂಗಳೂರು.
- **ಬಾಲಾ ಕಥಾವಳಿ** : ೧೯೧೯, (ಒಂದನೇ ತರಗತಿಗೆ) ಕಾಗೆಯೂ ಮತ್ತು ಗುಬ್ಬಿಯೂ ಮೊದಲಾದ ಕಥೆಗಳು, ಬಾಸೆಲ್ ಮಿಷನ್ ಪ್ರೆಸ್ ಮಂಗಳೂರು.


## ಎರಡನೆ ತರಗತಿ


- **ಇ. ಮಾರ್ಸ್ಡೆನ್ ದೊರೆ (ಸಂ)** : ೧೯೨೦, ಕನ್ನಡ ಎರಡನೆಯ ಪುಸ್ತಕ, ಬಾಸೆಲ್ ಮಿಷನ್ ಪ್ರೆಸ್ ಮಂಗಳೂರು.
- **ಎಮ್. ರಾಮನ್ ನಂಬಯರ್, ಉಗ್ರಾಣ ಮಂಗೇಶರಾವ್, ದಾಮೋದರ್ ಬಾಲಿಗ (ಸಂ)** : ೧೯೩೯, ಕನ್ನಡ ನೂತನ ಪಾಠಮಾಲೆ ಎರಡನೆಯ ಪುಸ್ತಕ, ಬಾಸೆಲ್ ಬುಕ್ ಡಿಪೋ, ಮಂಗಳೂರು.
- **ಕನ್ನಡ ಎರಡನೆಯ ಪುಸ್ತಕ** : ೧೯೧೦, ಬಾಸೆಲ್ ಮಿಷನ್ ಪ್ರೆಸ್, ಮಂಗಳೂರು.
- **ಕನ್ನಡ ಎರಡನೆಯ ಪುಸ್ತಕ** : ೧೯೬೩, ಮೈಸೂರು ವಿದ್ಯಾ ಇಲಾಖೆ, ಮಂಗಳೂರು.
- **ಕನ್ನಡ ಎರಡನೆಯ ಪುಸ್ತಕ** : ೧೯೬೧, ಮೈಸೂರು ವಿದ್ಯಾ ಇಲಾಖೆ.
- **ಕನ್ನಡ ಎರಡನೆಯ ಪುಸ್ತಕ** : ೧೯೫೬, ಸರಕಾರಿ ಮುದ್ರಣಾಲಯ, ಬೆಂಗಳೂರು.
- **ಕನ್ನಡ ಎರಡನೇ ಪುಸ್ತಕ** : ೧೯೩೭, ಬಾಸೆಲ್ ಮಿಷನ್ ಪ್ರೆಸ್, ಮಂಗಳೂರು.
- **ಕನ್ನಡ ಕಲಿ–ನಲಿ** : ೨೦೦೯, ಅಭ್ಯಾಸ ಸಹಿತ ಪಠ್ಯಪುಸ್ತಕ, ಎರಡನೆ ತರಗತಿ, ಕರ್ನಾಟಕ ಪಠ್ಯಪುಸ್ತಕ ಸಂಘ, ಬೆಂಗಳೂರು.
- **ಕನ್ನಡ ವಾಚನ ಮಾಲೆ ಎರಡನೆಯ ಪುಸ್ತಕ** : ೧೯೫೦, ಮುಂಬಯಿ ರಾಜ್ಯದ ವಿದ್ಯಾಖಾತೆಯಿಂದ ಪ್ರಕಟವಾದುದು.
- **ಕೆ. ಶ್ರೀನಿವಾಸ ಕಿಣಿ (ಸಂ)** : ೧೯೩೬, ಕನ್ನಡ ಮೊದಲನೆಯ ಪುಸ್ತಕ (ಎರಡನೆಯ ತರಗತಿಯವರಿಗೋಸ್ಕರ), ಬಾಸೆಲ್ ಮಿಷನ್ ಬುಕ್ ಡಿಪೋ, ಮಂಗಳೂರು.
- **ಡಾ. ಕೆ. ನಾಗರಾಜ ಹೊಸೂರಕರ್ (ಸಂ)** : ೨೦೧೦, ಕನ್ನಡ ಭಾರತಿ (ಗದ್ಯ, ಪದ್ಯ ಮತ್ತು ವ್ಯಾಕರಣ ಸಹಿತ ಪಠ್ಯಪುಸ್ತಕ) ಎರಡನೆಯ ತರಗತಿ, ನಾಲೆಡ್ಜ್ ಪಬ್ಲಿಷರ್ಸ್ ಅಂಡ್ ಡಿಸ್ಟ್ರಿಬ್ಯೂಟರ್ಸ್, ಬೆಂಗಳೂರು.

## ಮೂರನೆ ತರಗತಿ


- ಇ. ಮಾರ್ಸ್‌ಡೆನ್ (ಸಂ) : ೧೯೧೬, ಕನ್ನಡ ಮೂರನೆಯ ಪುಸ್ತಕವು, ಬಾಸೆಲ್ ಮಿಷನ್ ಪ್ರೆಸ್, ಮಂಗಳೂರು.
- ಇ. ಮಾರ್ಸ್‌ಡೆನ್, ಜೆ. ವಾಮನ್ ಭಟ್ (ಸಂ) : ೧೯೬೧, ಕನ್ನಡ ಭಾಷಾ ಪಾಠಗಳು ಮೂರನೆ ಪುಸ್ತಕ ಭಾಗ ೧, ಸಿಟಿ ಪ್ರೆಸ್, ಮಂಗಳೂರು.
- ಎಮ್. ರಾಮನ್ ನಂಬಯರ್, ಉಗ್ರಾಣ ಮಂಗೇಶರಾವ್, ದಾಮೋದರ್ ಬಾಲಿಗ (ಸಂ) : ೧೯೪೭, ಕನ್ನಡ ನೂತನ ಪಾಠಮಾಲೆ ಮೂರನೆಯ ಪುಸ್ತಕ, ಬಾಸೆಲ್ ಮಿಷನ್ ಬುಕ್ ಡಿಪೋ, ಮಂಗಳೂರು.
- ಎಮ್. ರಾಮನ್ ನಂಬಯರ್, ಉಗ್ರಾಣ ಮಂಗೇಶರಾವ್, ದಾಮೋದರ್ ಬಾಲಿಗ (ಸಂ) : ೧೯೫೦, ಕನ್ನಡ ನೂತನ ಪಾಠಮಾಲೆ ಮೂರನೆಯ ಪುಸ್ತಕ, ಬಾಸೆಲ್ ಬುಕ್ ಡಿಪೋ, ಮಂಗಳೂರು.
- ಕನ್ನಡ ಭಾರತಿ – ೩ : ೧೯೯೪, (ಮೂರನೆಯ ತರಗತಿ) ಕರ್ನಾಟಕ ಸರಕಾರ ಪಠ್ಯಪುಸ್ತಕ ನಿರ್ದೇಶನಾಲಯ, ಬೆಂಗಳೂರು.
- ಕಲಿ – ನಲಿ : ೨೦೧೧, ಕನ್ನಡ ಅಭ್ಯಾಸ ಪುಸ್ತಕ, ಮೂರನೆಯ ತರಗತಿ, ಕರ್ನಾಟಕ ಪಠ್ಯಪುಸ್ತಕ ಸಂಘ, ಬೆಂಗಳೂರು.
- ಕನ್ನಡ ಕಲಿ – ನಲಿ : ೨೦೧೩, ಅಭ್ಯಾಸ ಸಹಿತ ಪಠ್ಯಪುಸ್ತಕ, ೩ನೆಯ ತರಗತಿ, ಕರ್ನಾಟಕ ಪಠ್ಯಪುಸ್ತಕ ಸಂಘ, ಬೆಂಗಳೂರು.
- ಕನ್ನಡ ಮೂರನೆಯ ಪುಸ್ತಕ : ೧೯೩೮, ಬೆಂಗಳೂರು ಪ್ರಿಂಟಿಂಗ್ ಅಂಡ್ ಪಬ್ಲಿಷಿಂಗ್ ಕಂಪನಿ, ಲಿಮಿಟೆಡ್ ಬೆಂಗಳೂರು ಸಿಟಿ.
- ಕನ್ನಡ ಮೂರನೆಯ ಪುಸ್ತಕ : ೧೯೬೮, ಶ್ರೀ ಶಾರದ ಪ್ರೆಸ್, ಮೈಸೂರು.
- ಕನ್ನಡ ಮೂರನೆಯ ಪುಸ್ತಕ : ೧೯೬೪, ಸರಕಾರಿ ಶಾಲಾ ಮುದ್ರಣಾಲಯ, ಮೈಸೂರು.
- ಕನ್ನಡ ಮೂರನೆಯ ಪುಸ್ತಕ : ೧೯೨೭, ಕೆನರೀಸ್ ಮಿಷನ್ ಪ್ರೆಸ್, ಮಂಗಳೂರು.
- ಕೆ. ಶ್ರೀನಿವಾಸ ಕಿಣಿ (ಸಂ) : ೧೯೩೭, ಕನ್ನಡ ಎರಡನೆಯ ಪುಸ್ತಕವು (ಮೂರನೆಯ ತರಗತಿಗೋಸ್ಕರವಾಗಿ), ಬಾಸೆಲ್ ಮಿಷನ್ ಪ್ರೆಸ್, ಮಂಗಳೂರು.

- ಮಾಧ್ಯಮಿಕ ಕನ್ನಡ ಪಾಠಮಾಲೆ ತೃತೀಯ ಪಾಠಕ : ೧೯೫೨, ಬಾಸೆಲ್ ಮಿಷನ್ ಪ್ರೆಸ್, ಮಂಗಳೂರು.

## ನಾಲ್ಕನೆ ತರಗತಿ

- ಇ ಮಾರ್ಸ್ಡೆನ್ (ಸಂ) : ೧೯೧೮, ಕನ್ನಡ ನಾಲ್ಕನೆಯ ಪುಸ್ತಕವು, ಬಾಸೆಲ್ ಮಿಷನ್ ಬುಕ್ ಡಿಪೋ, ಮಂಗಳೂರು.
- ಇ. ಮಾರ್ಸ್ಡೆನ್, ಎಸ್. ಜಿ. ನರಸಿಂಹಾಚಾರ್ (ಸಂ) : ೧೯೦೬, ಕನ್ನಡ ನಾಲ್ಕನೆಯ ಪುಸ್ತಕವು, ಬಾಸೆಲ್ ಮಿಷನ್ ಪ್ರೆಸ್, ಮಂಗಳೂರು.
- ಉಗ್ರಾಣ ಮಂಗೇಶರಾವ್ (ಸಂ) : ೧೯೨೩ ಕಾವ್ಯರತ್ನಾಕರ (೪ನೇ ತರಗತಿಯಿಂದ IIIನೇ ಫೋರ್ಮಿನವರೆಗೆ), ಬಾಲ ಸಾಹಿತ್ಯ ಮಂಡಲಿ, ಮಂಗಳೂರು.
- ಎಮ್. ರಾಮನ್ ನಂಬಯರ್, ಉಗ್ರಾಣ ಮಂಗೇಶರಾವ್, ದಾಮೋದರ್ ಬಾಲಿಗ (ಸಂ) : ೧೯೪೬, ಕನ್ನಡ ನೂತನ ಪಾಠಮಾಲೆ ನಾಲ್ಕನೆಯ ಪುಸ್ತಕ, ಬಾಸೆಲ್ ಬುಕ್ ಡಿಪೋ, ಮಂಗಳೂರು.
- ಎಮ್. ರಾಮನ್ ನಂಬಯರ್, ಉಗ್ರಾಣ ಮಂಗೇಶರಾವ್, ದಾಮೋದರ್ ಬಾಲಿಗ (ಸಂ) : ೧೯೫೦, ಕನ್ನಡ ನೂತನ ಪಾಠಮಾಲೆ ನಾಲ್ಕನೆಯ ಪುಸ್ತಕ, ಬಾಸೆಲ್ ಬುಕ್ ಡಿಪೋ, ಮಂಗಳೂರು.
- ಕನ್ನಡ ನಾಲ್ಕನೆಯ ಪುಸ್ತಕ : ೧೯೨೮, ಬಾಸೆಲ್ ಮಿಷನ್ ಪ್ರೆಸ್ ಅಂಡ್ ಬುಕ್ ಡಿಪೋ, ಮಂಗಳೂರು.
- ಕನ್ನಡ ನಾಲ್ಕನೆಯ ಪುಸ್ತಕ : ೧೯೫೫, ಮೈಸೂರು ಸರಕಾರದ ಮುದ್ರಣಾಲಯ.
- ಕನ್ನಡ ನಾಲ್ಕನೇ ಪುಸ್ತಕ : ೧೯೧೦, ಬಾಸೆಲ್ ಮಿಷನ್ ಪ್ರೆಸ್, ಮಂಗಳೂರು.
- ಕನ್ನಡ ನಾಲ್ಕನೆಯ ಪುಸ್ತಕ : ೧೯೬೦, ಮೈಸೂರು ಸರ್ಕಾರ ಪಠ್ಯಪುಸ್ತಕಗಳ ಇಲಾಖೆ.
- ಕನ್ನಡ ಕಲಿ – ನಲಿ : ೨೦೦೯, ಅಭ್ಯಾಸ ಸಹಿತ ಪಠ್ಯಪುಸ್ತಕ, ನಾಲ್ಕನೆಯ ತರಗತಿ, ಕರ್ನಾಟಕ ಪಠ್ಯಪುಸ್ತಕ ಸಂಘ, ಬೆಂಗಳೂರು.

- ಕನ್ನಡ ಭಾರತಿ – ೪ : ೧೯೯೫, (ಪ್ರಥಮ ಭಾಷೆ ಪಠ್ಯಪುಸ್ತಕ) ಕರ್ನಾಟಕ ಸರಕಾರ ಪಠ್ಯಪುಸ್ತಕ ನಿರ್ದೇಶನಾಲಯ, ಬೆಂಗಳೂರು.
- ಕೆ. ಶ್ರೀನಿವಾಸ ಕಿಣಿ, ಉಗ್ರಾಣ ಮಂಗೇಶರಾವ್ (ಸಂ) : ೧೯೩೬, ಮೂರನೆಯ ಪುಸ್ತಕವು (ನಾಲ್ಕನೆಯ ತರಗತಿಗೋಸ್ಕರವಾಗಿ), ಬಾಸೆಲ್ ಮಿಷನ್ ಪ್ರೆಸ್, ಮಂಗಳೂರು.
- ನಿರ್ದೇಶಕರು : ಜೆ. ಎಂ. ಓ. ರಾಜನ್, ಸಂಚಾಲಕರು : ರಾ. ಅನಂತರಾಮು : ೧೯೭೯, ಕನ್ನಡ ವರ್ಗೀಕೃತ ವಾಕ್ಯಬಂಧಗಳು, (೧ರಿಂದ ೪ನೆಯ ತರಗತಿಗಳಿಗಾಗಿ) ಸರಕಾರಿ ಮುದ್ರಣಾಲಯ, ಬೆಂಗಳೂರು.


## ಐದನೆ ತರಗತಿ


- ಇ. ಮಾರ್ಸ್ಡೆನ್ (ಸಂ) : ೧೯೧೭, ಕನ್ನಡ ಐದನೆಯ ಪುಸ್ತಕ, ಬಾಸೆಲ್ ಮಿಷನ್ ಪ್ರೆಸ್, ಮಂಗಳೂರು.
- ಕನ್ನಡ ಐದನೆಯ ಪುಸ್ತಕ : ೧೯೫೧, ಶ್ರೀಕಂಠಯ್ಯ ಅಚ್ಚುಕೂಟ, ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು ನಗರ.
- ಕನ್ನಡ ಐದನೆಯ ಪುಸ್ತಕ : ೧೯೧೦, ಬಾಸೆಲ್ ಮಿಷನ್ ಪ್ರೆಸ್, ಮಂಗಳೂರು.
- ಕನ್ನಡ ಐದನೆಯ ಪುಸ್ತಕ : ೧೯೫೮, ಮೈಸೂರು ಸರಕಾರದ ಮುದ್ರಣಾಲಯ.
- ಕನ್ನಡ ಐದನೆಯ ಪುಸ್ತಕ : ೧೯೭೭, ಸರಕಾರಿ ಪಠ್ಯಪುಸ್ತಕ ಇಲಾಖೆ, ಮೈಸೂರು.
- ಕನ್ನಡ ಐದನೆಯ ಪುಸ್ತಕ : ೧೯೭೨, ಸರಕಾರಿ ಪಠ್ಯಪುಸ್ತಕ ಇಲಾಖೆ, ಮೈಸೂರು.
- ಕನ್ನಡ ಕಸ್ತೂರಿ : ೨೦೦೯, (ಪ್ರಥಮ ಭಾಷೆ) ಮೊದಲನೆಯ ಸೆಮಿಸ್ಟರ್ ೫ನೇ ತರಗತಿ, ಕರ್ನಾಟಕ ಪಠ್ಯಪುಸ್ತಕ ಸಂಘ, ಬೆಂಗಳೂರು.
- ಕನ್ನಡ ಕಸ್ತೂರಿ : ೨೦೦೯, (ಪ್ರಥಮ ಭಾಷೆ) ಎರಡನೆಯ ಸೆಮಿಸ್ಟರ್, ೫ನೇ ತರಗತಿ, ಕರ್ನಾಟಕ ಪಠ್ಯಪುಸ್ತಕ ಸಂಘ, ಬೆಂಗಳೂರು.
- ಕೆ. ಶ್ರೀನಿವಾಸ ಕಿಣಿ, ಉಗ್ರಾಣ ಮಂಗೇಶರಾವ್ (ಸಂ) : ೧೯೩೬, ನಾಲ್ಕನೆಯ ಪುಸ್ತಕವು (ಐದನೆಯ ತರಗತಿಯವರಿಗೋಸ್ಕರ), ಬಾಸೆಲ್ ಮಿಷನ್ ಬುಕ್ ಡಿಪೋ, ಮಂಗಳೂರು.

## ಆರನೆ ತರಗತಿ

- ಇ ಮಾರ್ಸ್‌ಡೆನ್ (ಸಂ) : ೧೯೧೮, ಕನ್ನಡ ಆರನೆಯ ಪುಸ್ತಕವು, ಬಾಸೆಲ್ ಮಿಷನ್ ಬುಕ್ ಡಿಪೋ, ಮಂಗಳೂರು.
- ಇ. ಮಾರ್ಸ್‌ಡೆನ್, ಎಸ್. ಜಿ. ನರಸಿಂಹಾಚಾರ್ಯ (ಸಂ) : ೧೯೦೮, ಕನ್ನಡ ಆರನೆಯ ಪುಸ್ತಕವು, ಬಾಸೆಲ್ ಮಿಷನ್ ಪ್ರೆಸ್, ಮಂಗಳೂರು.
- ಕನ್ನಡ ಆರನೆಯ ಪುಸ್ತಕ : ೧೯೫೩, ಮೈಸೂರು ಸರಕಾರದ ಮುದ್ರಣಾಲಯ.
- ಕನ್ನಡ ಆರನೆಯ ಪುಸ್ತಕ : ೧೯೫೫, ಮೈಸೂರು ಸರಕಾರದ ಮುದ್ರಣಾಲಯ.
- ಕನ್ನಡ ಆರನೆಯ ಪುಸ್ತಕ : ೧೯೭೩, ಮೈಸೂರು ಸರಕಾರ.
- ಕನ್ನಡ ಕಸ್ತೂರಿ : ೨೦೧೦, (ಪ್ರಥಮ ಭಾಷೆ) ೬ನೇ ತರಗತಿ, ಮೊದಲನೆಯ ಸೆಮಿಸ್ಟರ್, ಕರ್ನಾಟಕ ಪಠ್ಯಪುಸ್ತಕ ಸಂಘ, ಬೆಂಗಳೂರು.
- ಕನ್ನಡ ಕಸ್ತೂರಿ : ೨೦೦೯, (ಪ್ರಥಮ ಭಾಷೆ) ೬ನೇ ತರಗತಿ, ಎರಡನೆಯ ಸೆಮಿಸ್ಟರ್, ಕರ್ನಾಟಕ ಪಠ್ಯಪುಸ್ತಕ ಸಂಘ, ಬೆಂಗಳೂರು.
- ಕೆ. ಶ್ರೀನಿವಾಸ ಕಿಣಿ, ಎಮ್. ಎನ್. ಕಾಮತ್ (ಸಂ) : ೧೯೩೬, ಕನ್ನಡ ಐದನೆಯ ಪುಸ್ತಕ (ಆರನೆಯ ತರಗತಿಯವರಿಗೋಸ್ಕರ), ಬಾಸೆಲ್ ಮಿಷನ್ ಪ್ರೆಸ್, ಮಂಗಳೂರು.

## ಏಳನೆ ತರಗತಿ

- ಇ. ಮಾರ್ಸ್‌ಡೆನ್ (ಸಂ) : ೧೯೧೫, ಕನ್ನಡ ಏಳನೆಯ ಪುಸ್ತಕವು, ಬಾಸೆಲ್ ಮಿಷನ್ ಬುಕ್ ಡಿಪೋ, ಮಂಗಳೂರು.
- ಕನ್ನಡ ಏಳನೆಯ ಪುಸ್ತಕ : ೧೯೬೭, ಇಂಡಿಯಾ ಪ್ರೆಸ್, ಮೈಸೂರು.
- ಕನ್ನಡ ಏಳನೆಯ ಪುಸ್ತಕ : ೧೯೫೪, ಕ್ರಾಂತಿ ಪ್ರಿಂಟಿಂಗ್ ಅಂಡ್ ಪಬ್ಲಿಷಿಂಗ್ ಹೌಸ್, ಬೆಂಗಳೂರು ಸಿಟಿ.
- ಕನ್ನಡ ಏಳನೆಯ ಪುಸ್ತಕ : ೧೯೧೦, ಬಾಸೆಲ್ ಮಿಷನ್ ಪ್ರೆಸ್, ಮಂಗಳೂರು.

- ಕನ್ನಡ ಕಸ್ತೂರಿ : ೨೦೦೮, (ಪ್ರಥಮ ಭಾಷೆ ಪಠ್ಯಪುಸ್ತಕ) ೭ನೆಯ ತರಗತಿ ಕರ್ನಾಟಕ ಪಠ್ಯಪುಸ್ತಕ ಸಂಘ, ಬೆಂಗಳೂರು.
- ಕನ್ನಡ ಭಾರತಿ – ೭ : ೧೯೮೦, ಡಿ.ಎಸ್.ಇ.ಆರ್.ಟಿ (ಪಠ್ಯಪುಸ್ತಕ ವಿಭಾಗ) ಬೆಂಗಳೂರು.
- ಕನ್ನಡ ಭಾರತಿ – ೭ : ೧೯೮೦, (ಏಳನೆಯ ತರಗತಿ) ಕರ್ನಾಟಕ ಸರಕಾರ ಪಠ್ಯಪುಸ್ತಕ ವಿಭಾಗ, ಬೆಂಗಳೂರು.
- ಕನ್ನಡ ಭಾರತಿ – ೭ : ೧೯೯೫, (ಏಳನೆಯ ತರಗತಿ) ಪಠ್ಯಪುಸ್ತಕ ನಿರ್ದೇಶನಾಲಯ, ಬೆಂಗಳೂರು.
- ಕೆ. ಶ್ರೀನಿವಾಸ ಕಿಣಿ, ಎಮ್.ಎನ್. ಕಾಮತ್ (ಸಂ) : ೧೯೩೬, ಕನ್ನಡ ಆರನೆಯ ಪುಸ್ತಕವು (ಏಳನೆಯ ತರಗತಿಯವರಿಗೋಸ್ಕರ), ಬಾಸೆಲ್ ಮಿಷನ್ ಪ್ರೆಸ್, ಮಂಗಳೂರು.
- ತಿಳಿ ಕನ್ನಡ – ೩ : ೨೦೦೮, (೭ನೆಯ ತರಗತಿ) ಕನ್ನಡ ದ್ವಿತೀಯ ಭಾಷೆ/ತೃತೀಯ ಭಾಷೆ, ಅಭ್ಯಾಸ ಸಹಿತ ಪಠ್ಯಪುಸ್ತಕ, ಕರ್ನಾಟಕ ಪಠ್ಯಪುಸ್ತಕ ಸಂಘ, ಬೆಂಗಳೂರು.
- ಮಿಡಲ್ ಸ್ಕೂಲ್ ಮತ್ತು ಅಪ್ಪರ್ ಪ್ರೈಮರಿ ಪರೀಕ್ಷೆಗಳಿಗೆ ಗೊತ್ತಾದ ಕನ್ನಡ ಗ್ರಂಥಗಳು : ೧೯೫೭, ಮೈಸೂರು ಸರಕಾರದ ಮುದ್ರಣಾಲಯ.
- ೧೯೩೨ ನೆಯ ಇಸವಿಯ ಮಿಡಲ್ ಸ್ಕೂಲ್ ಮತ್ತು ಲೋವರ್ ಸೆಕೆಂಡರೀ ಪರೀಕ್ಷೆಗಳಿಗೆ ಗೊತ್ತಾದ ಕನ್ನಡ ಗ್ರಂಥಗಳು : ಮೈಸೂರು ಸರಕಾರದ ಮುದ್ರಣಾಲಯ.
- ೧೯೪೪ನೆ ಇಸವಿಯ ಮಿಡಲ್ ಸ್ಕೂಲ್ ಮತ್ತು ಅಪ್ಪರ್ ಪ್ರೈಮರಿ ಪರೀಕ್ಷೆಗಳಿಗಾಗಿ ಗೊತ್ತಾದ ಗ್ರಂಥಗಳು : ೧೯೪೩, ಮೈಸೂರು ಸರಕಾರದ ಮುದ್ರಣಾಲಯ.

## ಪ್ರೌಢಶಾಲಾ ಹಂತದ ಕನ್ನಡ ಭಾಷಾ ಪಠ್ಯಪುಸ್ತಕಗಳು

### ಎಂಟನೆ ತರಗತಿ

- **ಎ. ಜಿ. ಶ್ರೀನಿವಾಸ ರಾಗವಾಚಾರ್ಯ (ಸಂ)** : ೧೯೬೦, ಕನ್ನಡ ಸಾಹಿತ್ಯ ಪಾಠಗಳು, ೮ನೆಯ ತರಗತಿಗೆ, ಸಾಹಿತ್ಯ ಕುಟೀರ, ಬೆಂಗಳೂರು.
- **ಎಮ್. ರಾಮನ್ ನಂಬಯರ್, ಉಗ್ರಾಣ ಮಂಗೇಶರಾವ್, ದಾಮೋದರ್ ಬಾಲಿಗ (ಸಂ)** : ೧೯೩೯, ಕನ್ನಡ ನೂತನ ಮಾಲೆ ಎಂಟನೆಯ ಪುಸ್ತಕ, ಬಾಸೆಲ್ ಮಿಷನ್ ಪ್ರೆಸ್, ಮಂಗಳೂರು.
- **ಕನ್ನಡ ಕಸೂರಿ** : ೨೦೧೦, ಪ್ರಥಮ ಭಾಷಾ ಪಠ್ಯಪುಸ್ತಕ, ಎಂಟನೆಯ ತರಗತಿ, ಕರ್ನಾಟಕ ಪಠ್ಯಪುಸ್ತಕ ಸಂಘ, ಬೆಂಗಳೂರು.
- **ಕನ್ನಡ ಗಂಗೋತ್ರಿ – ೧** : (ಎಂಟನೆಯ ತರಗತಿ) ಪ್ರಥಮ ಭಾಷೆ–ಕನ್ನಡ ಪಠ್ಯಪುಸ್ತಕ, ಪಠ್ಯಪುಸ್ತಕ ನಿರ್ದೇಶನಾಲಯ, ಬೆಂಗಳೂರು.
- **ಕನ್ನಡ ಭಾರತಿ – ೮** : ೧೯೭೨, (ಎಂಟನೆಯ ತರಗತಿ) ಪ್ರಥಮ ಭಾಷೆ ಪಠ್ಯಪುಸ್ತಕ, ಪಠ್ಯಪುಸ್ತಕ ನಿರ್ದೇಶನಾಲಯ, ಬೆಂಗಳೂರು.
- **ಜಿ. ಜೆ. ಮಂಗಲಗಿ, ಜಿ. ಜಿ. ಕುಲಕರ್ಣಿ, ಎ. ಆರ್. ಬುರ್ಲಿ (ಸಂ)** : ೧೯೬೧, ಸಾಹಿತ್ಯ ಸೌರಭ (೮ನೆಯ ತರಗತಿ), ಅರುಣ ಪ್ರಕಾಶನ ಹುಬ್ಬಳ್ಳಿ.
- **ಎ. ಜಿ. ನರಸಪ್ಪ (ಸಂ)** : ೧೯೬೮, ಕನ್ನಡ ಸಾಹಿತ್ಯ ಮಂದಾಕಿನಿ (ಎಂಟನೆಯ ತರಗತಿಗಾಗಿ) ರಾಧಾಕೃಷ್ಣ ಅಂಡ್ ಕೋ. ಜಯನಗರ, ಬೆಂಗಳೂರು.
- **ವಿದ್ವಾನ್ ಎಂ. ಎಸ್. ಗಂಗಾಧರನ್, ಎಂ. ರಾಮಯ್ಯ (ಸಂ)** : ೧೯೬೦, ಕನ್ನಡ ಗದ್ಯಪದ್ಯ ರತ್ನಾವಳಿ (ಎಂಟನೆಯ ತರಗತಿ), ಬಳ್ಳಾರಿ ಮತ್ತು ಧಾರವಾಡ ಜಿಲ್ಲೆಗಳಿಗಾಗಿ ಮಾತ್ರ, ಕೆ.ಸೀತಾರಾಮಶಟ್ಟಿ ನಂಜುಂಡೇಶ್ವರ ಬುಕ್ ಡಿಪೋ, ಬೆಂಗಳೂರು.
- **ಸಾಹಿತ್ಯ ಸುಗ್ಗಿ** : ೧೯೭೬, ಹೈಯರ್ ಸೆಕೆಂಡರಿ ಎಂಟನೆ ತರಗತಿಯ ಕನ್ನಡ ಪಠ್ಯಪುಸ್ತಕ, ಸರಕಾರಿ ಪಠ್ಯಪುಸ್ತಕ ಮುದ್ರಣಾಲಯ, ಮೈಸೂರು.
- **ಸಿರಿ ಕನ್ನಡ** : ೨೦೧೩, ಪ್ರಥಮ ಭಾಷಾ ಕನ್ನಡ ಪಠ್ಯಪುಸ್ತಕ, ಎಂಟನೆಯ ತರಗತಿ, ಕರ್ನಾಟಕ ಪಠ್ಯಪುಸ್ತಕ ಸಂಘ, ಬೆಂಗಳೂರು.

- **ಹೈಸ್ಕೂಲು ಮೊದಲನೆಯ ತರಗತಿಯ ಪದ್ಯದ ಪಠ್ಯಪುಸ್ತಕ** : ೧೯೫೩, ಮೈಸೂರು ವಿದ್ಯಾಭ್ಯಾಸ ಇಲಾಖೆ, ಬೆಂಗಳೂರು.
- **THE KANNADA TEXT – BOOK** (FOR DETAILED STUDY) : 1942, THE EIGHT STANDARD PUBLIC EXAMINATION, GOVERNMENT PRESS MADARS.


## ಒಂಬತ್ತನೆ ತರಗತಿ


- **ಅಭಿನವ ಸಾಹಿತ್ಯ ದರ್ಶನ ಭಾಗ – ೨** : ೧೯೬೬, (೯ನೇ ವರ್ಗ), ಶರಾವತಿ ಬೀದಿ, ಧಾರವಾಡ.
- **ಎಸ್. ಆರ್. ನಾರಾಯಣರಾವ್, ಕೆ. ಸಚ್ಚಿದಾನಂದಯ್ಯ (ಸಂ)** : ೧೯೬೮, ಸಾಹಿತ್ಯ ದರ್ಪಣ (೯ನೆಯ ತರಗತಿ), ಶ್ರೀರಾಮಚಂದ್ರ ಬುಕ್ ಡಿಪೋ, ಮೈಸೂರು.
- **ಕನ್ನಡ ಕಸ್ತೂರಿ** : ೨೦೦೯, ೯ನೆಯ ತರಗತಿ, ಪ್ರಥಮ ಭಾಷಾ ಪಠ್ಯಪುಸ್ತಕ, ಪಠ್ಯಪುಸ್ತಕ ನಿರ್ದೇಶನಾಲಯ, ಬೆಂಗಳೂರು.
- **ಕನ್ನಡ ಭಾರತಿ – ೯** : ೧೯೯೨, (೯ನೆಯ ತರಗತಿ) ನವಕರ್ನಾಟಕ ಪಬ್ಲಿಕೇಶನ್ಸ್ ಪ್ರವೇಟ್ ಲಿಮಿಟೆಡ್, ಬೆಂಗಳೂರು.
- **ಕೆ. ಎಸ್. ಜಾನಕಿ ರಾಮಯ್ಯ (ಸಂ)** : ೧೯೬೦, ಸಿರಿಗನ್ನಡ ಗದ್ಯಪದ್ಯ ಸೌರಭ (೯ನೆಯ ತರಗತಿಗಾಗಿ), ಜಿ. ಕೆ. ಅಂಡ್ ಬ್ರದರ್ಸ್ ಬಸವನಗುಡಿ, ಬೆಂಗಳೂರು.
- **ಜಿ. ಸಿ. ಭಾಸ್ಕರಾಚಾರ್ (ಸಂ)** : ೧೯೬೪, ಕನ್ನಡ ಸಾಹಿತ್ಯ ಚಂದ್ರಿಕೆ (೯ನೆಯ ತರಗತಿ), ಎಸ್. ಎಸ್. ಎನ್. ಬುಕ್ ಡಿಪೋ, ಬೆಂಗಳೂರು.
- **ಪಂಡಿತ ಎಸ್. ಚಿಕ್ಕಣ್ಣ, ಕೆ. ಸೀತರಾಮ ಶೆಟ್ಟಿ (ಸಂ)** : ೧೯೬೦, ಕನ್ನಡ ಸಾಹಿತ್ಯ ದೀಪಮಾಲೆ (೯ನೆಯ ತರಗತಿಗಾಗಿ), ಶ್ರೀ ನಂಜುಂಡೇಶ್ವರ ಬುಕ್ ಡಿಪೋ, ಬೆಂಗಳೂರು.
- **ವಿಜಯಕುಮಾರಿ ಷಣ್ಮುಗಂ (ಸಂ)** : ೧೯೬೩–೧೯೬೪, ಕನ್ನಡ ಸಾಹಿತ್ಯ ಪುಷ್ಪಮಾಲೆ (೯ನೆಯ ತರಗತಿ), ಜನತ ಪಬ್ಲಿಕೇಷನ್, ಬೆಂಗಳೂರು.

- **ವಿದ್ವಾನ್ ಶ್ರೀನಿವಾಸೈಯ್ಯಾಂಗಾರ್ (ಸಂ)** : ೧೯೬೧, ಕಾವ್ಯ ಕುಸುಮ (೯ನೆಯ ತರಗತಿಗಾಗಿ), ಎನ್. ಎಸ್. ವಾಸನ್ ಅಂಡ್ ಕೋ. ಬೆಂಗಳೂರು.
- **ವಿ. ಸೀತರಾಮಯ್ಯ (ಸಂ)** : ೧೯೯೨, ಕನ್ನಡ ಗಂಗೋತ್ರಿ – ೨, (೯ನೆಯ ತರಗತಿ) ಕನ್ನಡ ಪ್ರಥಮ ಭಾಷೆ ಪಠ್ಯಪುಸ್ತಕ, ಪಠ್ಯಪುಸ್ತಕ ನಿರ್ದೇಶನಾಲಯ, ಬೆಂಗಳೂರು.
- **ಶ್ರೀ. ಎಲ್. ಗುಂಡಪ್ಪ, ಪಂಡಿತ ಎಚ್. ಎಂ. ರಾಮಾರಾಧ್ಯ (ಸಂ)** : ೧೯೬೧, ಕನ್ನಡ ಸಾಹಿತ್ಯ ಕೌಸ್ತುಭ (೯ನೆಯ ತರಗತಿ ಕನ್ನಡ ಐಚ್ಛಿಕ ಭಾಗದ ವಿದ್ಯಾರ್ಥಿಗಳಿಗೆ), ಮೈಸೂರು ವಿದ್ಯಾ ಇಲಾಖೆ.
- **ಸಾಹಿತ್ಯ ಮಂದಾರ** : ೧೯೭೬, (೯ನೆಯ ತರಗತಿಗಾಗಿ) ಸರಕಾರಿ ಪಠ್ಯಪುಸ್ತಕ ಮುದ್ರಣಾಲಯ ಮೈಸೂರು.
- **ಸಿ. ರುದ್ರಪ್ಪ (ಸಂ)** : ೧೯೬೪, ಕನ್ನಡ ಗದ್ಯಮಣಿಹಾರ (೯ನೆಯ ತರಗತಿ), ಶ್ರೀ ವೆಂಕಟೇಶ್ವರ ಬುಕ್ ಹೌಸ್, ಬೆಂಗಳೂರು.
- **ಸಿರಿ ಕನ್ನಡ** : ೨೦೧೩, ಪ್ರಥಮ ಭಾಷಾ ಪಠ್ಯಪುಸ್ತಕ, ಒಂಬತ್ತನೆಯ ತರಗತಿ, ಕರ್ನಾಟಕ ಪಠ್ಯಪುಸ್ತಕ ಸಂಘ, ಬೆಂಗಳೂರು.

## ಹತ್ತನೆ ತರಗತಿ

- **ಎಚ್. ಟಿ. ಸಾಸನೂರು, ಎಸ್. ಪರಮೇಶ್ವರಪ್ಪ, ಎಸ್. ಚಿಕ್ಕಣ್ಣ (ಸಂ)** : ೧೯೬೧, ಕನ್ನಡ ಗದ್ಯ ತರಂಗ, ಮೈಸೂರು ಎಸ್.ಎಸ್.ಎಲ್.ಸಿ. ಪರೀಕ್ಷೆಯ ಪಠ್ಯಪುಸ್ತಕ, ಸೌತ್ ಇಂಡಿಯ ಪ್ರೆಸ್, ಬೆಂಗಳೂರು.
- **ಕನ್ನಡ ಕಸ್ತೂರಿ** : ೨೦೧೩, ಪ್ರಥಮ ಭಾಷಾ ಪಠ್ಯಪುಸ್ತಕ, ಹತ್ತನೆಯ ತರಗತಿ, ಕರ್ನಾಟಕ ಪಠ್ಯಪುಸ್ತಕ ಸಂಘ, ಬೆಂಗಳೂರು.
- **ಗದ್ಯ ಪದ್ಯ ಸಂಗ್ರಹ** : ೧೯೪೧ನೆಯ ಇಸ್ವಿಯ ಮುಂಬಯಿ ಯುನಿವ್ಹರ್ಸಿಟಿಯ ಮ್ಯಾಟ್ರಿಕ್ಯುಲೇಶನ್ ಪರೀಕ್ಷೆಗೆ ನಿಯಮಿಸಲ್ಪಟ್ಟ ಪಠ್ಯಪುಸ್ತಕ, ಹಿತಚಿಂತಕ ಪ್ರಿಂಟಿಂಗ್ ಪ್ರೆಸ್, ವಿಜಾಪೂರ.
- **ತಿಳಿ ಕನ್ನಡ – ೬** : ೨೦೧೩, ಕನ್ನಡ ದ್ವಿತೀಯ/ತೃತೀಯ ಭಾಷೆ, ಹತ್ತನೆಯ ತರಗತಿ, ಕರ್ನಾಟಕ ಪಠ್ಯಪುಸ್ತಕ ಸಂಘ, ಬೆಂಗಳೂರು.

- **ನೀತಿಪಾಠದ ಪಠ್ಯಪುಸ್ತಕ** : ೧೯೭೬, (ಹತ್ತನೆಯ ತರಗತಿಗಾಗಿ), ಕರ್ನಾಟಕ ಸರಕಾರ ಪಠ್ಯಪುಸ್ತಕ ನಿರ್ದೇಶನಾಲಯ, ಬೆಂಗಳೂರು.
- **ಪಂಡಿತ ಕೆ. ಪಟ್ಟಾಭಿರಾಮಯ್ಯನವರು** (ಸಂ) : ೧೯೫೭, ಕನ್ನಡ ಪದ್ಯಭಾಗ (ಎಸ್. ಎಸ್. ಎಲ್. ಸಿ) ಮೈಸೂರು ಸರ್ಕಾರದ ಮುದ್ರಣಾಲಯ, ಬೆಂಗಳೂರು.
- **ಪ್ರೊ. ಸ. ಸ. ಮಾಳವಾಡ, ಶ್ರೀ ಎಸ್. ಡಿ. ಇಂಚಲ, ಶ್ರೀ ಎಂ. ಕೆ. ವರಗಿರಿ** (ಸಂ) : ೧೯೫೯, ಸಾಹಿತ್ಯ ಸಂಕಲನ, ಎಸ್. ಎಸ್. ಎಲ್. ಸಿ. ಪರೀಕ್ಷೆ (ವಿಜಾಪುರ, ಬೆಳಗಾವಿ, ಧಾರವಾಡ ಹಾಗು ಕಾರವಾರ ಜಿಲ್ಲೆಗಳಿಗಾಗಿ ಮಾತ್ರ), ಡಿಪಾರ್ಟಮೆಂಟ್ ಆಫ್ ಪಬ್ಲಿಕ್ ಇನ್ಸಟ್ರಕ್ಶನ್, ಮೈಸೂರು – ಬೆಂಗಳೂರು.
- **ಪ್ರೊ.ಸ.ಸ.ಮಾಳವಾಡ, ಎಸ್.ವಿ.ಪರಮೇಶ್ವರಭಟ್ಟ, ಹೆಚ್.ದೇವಿರಪ್ಪ, ಪಂಡಿತ ಎಂ.ರಂಗಯ್ಯ**(ಸಂ) : ೧೯೬೫–೬೬, ಸುಮನ ಸಂಚಯ, ಮೈಸೂರು ಸೆಂಕೆಡರಿ ಹತ್ತನೆಯ ತರಗತಿ ಕನ್ನಡ ಪಠ್ಯಪುಸ್ತಕ, ಮೈಸೂರು ವಿದ್ಯಾ ಇಲಾಖೆ.
- **ಸಾಹಿತ್ಯ ಸಂಪುಟ** : ೧೯೭೮, (ಹತ್ತನೆಯ ತರಗತಿ), ಕರ್ನಾಟಕ ಸರಕಾರ ಪಠ್ಯಪುಸ್ತಕಗಳ ಇಲಾಖೆ ಬೆಂಗಳೂರು.
- ಸಿರಿಗನ್ನಡ : ೨೦೧೪, ಪ್ರಥಮ ಭಾಷಾ ಕನ್ನಡ ಪಠ್ಯಪುಸ್ತಕ, ಹತ್ತನೇ ತರಗತಿ, ಕರ್ನಾಟಕ ಪಠ್ಯಪುಸ್ತಕ ಸಂಘ, ಬೆಂಗಳೂರು.
- **ಹೂಗೊಂಚಲು** : ೧೯೬೬, (ಹತ್ತನೆಯ ವರ್ಗ) ಸರಕಾರಿ ಪಠ್ಯಪುಸ್ತಕ ಮುದ್ರಣಾಲಯ, ಮೈಸೂರು.

